# ಸಮಗ್ರ ದಾಸ ಸಾಹಿತ್ಯ

## ಸಂಪುಟ : ೧೮ - ಭಾಗ ೩



# ಅಂಬಾಬಾಯಿ ಅವರ ಕೀರ್ತನೆಗಳು

ಸಮಗ್ರ ದಾಸ ಸಾಹಿತ್ಯ
ಸಂಪುಟ : ೧೮ – ಭಾಗ ೩

# ಅಂಬಾಬಾಯಿ ಅವರ ಕೀರ್ತನೆಗಳು


*ಸಂಪಾದಕರು*

ಡಾ. ಅನಂತಪದ್ಮನಾಭರಾವ್



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು

**SAMAGRA DASA SAHITYA : 18 Part 3 :**
Ambabai Avara Keerthanegalu, Edited by Dr. Anantha padmanabharao & Published by Sri. Y.K. Muddukrishna, Director, Directorate of Kannada and Culture, Kannada Bhavana, J.C. Road, Bangalore - 560 002.

ಪುಟಗಳು : 52+೪೪೯


ಪ್ರಥಮ ಮುದ್ರಣ : ೨೦೦೩
ಪ್ರತಿ : ೧೨೫೦

ಬಿಡಿ ಪ್ರತಿ ಬೆಲೆ : ರೂ. ೬೦=೦೦
ಸಮಗ್ರ ಸಂಪುಟಗಳ ಬೆಲೆ : ರೂ. ೨೪೦೦=೦೦

**ಮುದ್ರಣ ನಿರ್ವಹಣೆ :**

ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್
೩೬, ಕನ್ನಿಂಗ್‌ಹ್ಯಾಮ್ ರಸ್ತೆ
ಬೆಂಗಳೂರು – ೫೬೦ ೦೫೨.

**ಮುದ್ರಕರು :**

ಮೆ. ಡಾಟ್ಸ್
೧೨೪, ಸುಲ್ತಾನ್‌ಪೇಟೆ
ಬೆಂಗಳೂರು – ೫೬೦ ೦೫

# ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆ

## ಸಂಪಾದಕ ಮಂಡಳಿ

### ಕಾರ್ಯನಿರ್ವಾಹಕ ಸಂಪಾದಕರು

ಡಾ. ಶ್ರೀನಿವಾಸ ಹಾವನೂರ
ಡಾ. ಟಿ. ಎನ್. ನಾಗರತ್ನ
ಪ್ರೊ. ವಸಂತ ಕುಷ್ಟಗಿ

### ಸದಸ್ಯರು

ಡಾ. ಎಂ. ಎಂ. ಕಲಬುರ್ಗಿ
ಪ್ರೊ. ಎಂ. ರಾಜಗೋಪಾಲಾಚಾರ್ಯ (ಫೆಬ್ರವರಿ '೯೮ ರವರೆಗೆ)
ಡಾ. ಕೃಷ್ಣ ಕೊಲ್ಹಾರಕುಲಕರ್ಣಿ
ಡಾ. ಮಂದಾಕಿನಿ
ಪ್ರೊ. ಸುಧಾಕರ
ಡಾ. ಬಸವರಾಜ ಸಬರದ

### ಸದಸ್ಯ ಕಾರ್ಯದರ್ಶಿ

ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

# ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ, ಸಾಹಿತ್ಯ–ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ – ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಡೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

**ಎಸ್. ಎಂ. ಕೃಷ್ಣ**
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾಯಕದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳಿಗೆ ಸಾಹಿತ್ಯದ ಮುದ್ರೆಯನ್ನು ಒತ್ತಿ, ಭಾಷೆಗೊಂದು ಪರಿಪಕ್ವತೆಯನ್ನೂ ತಂದುಕೊಟ್ಟರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು; ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ದಾಸ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ, ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿ.ಡಿ. ಮತ್ತು ಅಂತರ್ಜಾಲದಲ್ಲಿ ಹೊರತರ ಬೇಕೆಂದಾಗ ಬಳಕೆದಾರರ ಅವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಾಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯ ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿ.ಡಿ. ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ, ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

**ಸಿ. ಎಸ್. ಕೇದಾರ್**

ಸರ್ಕಾರದ ಕಾರ್ಯದರ್ಶಿ

# ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಂದೇ ಸಂದರ್ಭಾನುಸಾರ ಹುಟ್ಟಿದ ಹರಿದಾಸಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮಾವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿ ಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟಣೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್.ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಸದಸ್ಯರಾದ ಡಾ. ಎಂ.ಎಂ.ಕಲಬುರ್ಗಿ, ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣ ಕೊಲ್ಹಾರಕುಲಕರ್ಣಿ, ಡಾ. ಮಂದಾಕಿನಿ (ಈಗ ದಿವಂಗತರು) ಹಾಗೂ ಪ್ರೊ. ಎಂ. ರಾಜಗೋಪಾಲಾಚಾರ್ಯ (ಈಗ ದಿವಂಗತರು) ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ-ಕಾರ್ಯದರ್ಶಿಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ, ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೋಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರಾದ ಶ್ರೀ ಕೆ. ಸಿ. ರಾಮಮೂರ್ತಿ, ಶ್ರೀ ಸಿ. ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ. ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ವಿ. ಸುಬ್ರಹ್ಮಣ್ಯ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಮತ್ತು ಈ ಯೋಜನೆಯಲ್ಲಿ ಪಾಲ್ಗೊಂಡ ಎಲ್ಲ ಸಂಗೀತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು. ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ–ಪಾಮರರನ್ನು ಏಕಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟಣೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

**ವೈ. ಕೆ. ಮುದ್ದುಕೃಷ್ಣ**

ನಿರ್ದೇಶಕರು

## ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕನ್ನಡಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ–ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ) ನಾಲ್ಕುನೂರಕ್ಕೂ ಮೀರಿದ ದಾಸರಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೨ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ 'On the Karnataka Vaishnava Dasas' – ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೆ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

ಆ ನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆಯ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೫೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು

ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ-ಪೀಳಿಗೆ'ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯದಲ್ಲಿ ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ಹರಿದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ-ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿಧ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾನಿಲಯವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

# ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದುಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದೂ, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದೂ ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು* ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ-ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು, ಕೆಳಗೆ 'ಈ ಕೀರ್ತನೆ . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ-ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿಕೊಡಬೇಕು-ಎಂಬುದಾಗಿ ನಿರ್ಧರಿಸಲಾಯಿತು.

---

*ಇವುಗಳಲ್ಲಿ ಕೆಲವುಗಳಿಗೆ ಎರಡು ಮೂರು ಭಾಗಗಳಿವೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ, ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ, ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ, ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ, "ಸರ್ಕಾರವು ಸಮಗ್ರ

ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ" ಎಂದು ಘೋಷಿಸಿದರು. ಅದರಂತೆ, ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಪ್ರೊ. ವಸಂತ ಕುಷ್ಟಗಿ ಅವರನ್ನು ಸಮಿತಿಯ ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ, ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ, ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಡಾ. ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ. ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ, ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಡಾ. ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯ ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್, ಶ್ರೀಮತಿ ಪದ್ಮಾ ಮೂರ್ತಿ ಹಾಗೂ ಶ್ರೀ ಹನುಮನಗೌಡ ಮಾನ್ವಿ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿವೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ. ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತಿದ್ದೇವೆ. ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ-ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

# ಪರಿವಿಡಿ

# ಪ್ರಸ್ತಾವನೆ

## ಗೋಪಾಲಕೃಷ್ಣವಿಠಲ ಅಂಕಿತದ ಅಂಬಾಬಾಯಿ ಅವರು

### (೧೯೦೨-೧೯೪೫)

ಜಗನ್ನಾಥದಾಸರ ಅನಂತರ ಗೋಪಾಲದಾಸ, ಮೋಹನದಾಸ, ಪಂಗನಾಮದ ತಿಮ್ಮಣ್ಣದಾಸ, ಇವರ ಶಿಷ್ಯಪ್ರಶಿಷ್ಯರ ಮೂಲಕ ಮುಂದುವರೆದ ದಾಸಕೂಟದ ಚಟುವಟಿಕೆಗಳು ೧೯ ಮತ್ತು ೨೦ನೆಯ ಶತಮಾನಗಳಲ್ಲಿ ಹಳೆಯ ಮೈಸೂರು ಪ್ರಾಂತ್ಯದಲ್ಲಿಯೂ ನೆಲೆಯನ್ನು ಕಂಡುಕೊಂಡಿತು. ಜಯೇಶವಿಠಲರು, ಗುರುರಾಮವಿಠಲರು, ಮುದ್ದುಮೋಹನದಾಸರು, ತಂದೆ ಮುದ್ದುಮೋಹನದಾಸರು ಇವರ ಮೂಲಕ ದಾಸಕೂಟದ ಚಟುವಟಿಕೆಗಳು ವಿಸ್ತಾರಗೊಂಡವು. ಅದರಲ್ಲೂ ತಂದೆ ಮುದ್ದುಮೋಹನದಾಸರು ಸಾವಿರಕ್ಕೂ ಹೆಚ್ಚು ಮಂದಿ ಶಿಷ್ಯರಿಗೆ ಅಂಕಿತಗಳನ್ನು ನೀಡಿ ಅವರೆಲ್ಲರನ್ನು ದಾಸಮಾರ್ಗದಲ್ಲಿ ಪ್ರವೃತ್ತರಾಗುವಂತೆ ಪ್ರೇರೇಪಿಸಿದರು.

ತಂದೆ ಮುದ್ದುಮೋಹನದಾಸರಿಂದ ಅಂಕಿತ ಪಡೆದವರೆಲ್ಲರೂ ಕೀರ್ತನೆಗಳನ್ನು ರಚಿಸದಿದ್ದರೂ, ಹರಿದಾಸರು ಹಾಕಿಕೊಟ್ಟ ಹಾದಿಯಲ್ಲಿ ಭಕ್ತಿಪಂಥವನ್ನು ಬೆಳೆಸಿದರು. ಕೆಲವರು ಕೀರ್ತನೆ, ಸುಳಾದಿ, ಉಗಾಭೋಗ, ಖಂಡಕಾವ್ಯಗಳು ಇತ್ಯಾದಿಗಳ ರಚನೆಯ ಮೂಲಕ ಹರಿದಾಸ ಪರಂಪರೆಯನ್ನು ಮುಂದುವರೆಸಿದರು. ಬಾಗೇಪಲ್ಲಿ ಶೇಷದಾಸರು, ರಮಾಕಾಂತವಿಠಲರು, ರಂಗೇಶವಿಠಲರು, ನಿತ್ಯಾನಂದವಿಠಲರು, ಉರಗಾದ್ರಿವಿಠಲರು, ಗುರುಗೋವಿಂದ-ವಿಠಲದಾಸರು ಮೊದಲಾದವರು ಕೀರ್ತನೆ ಮಾಧ್ಯಮದಲ್ಲಿ ಭಕ್ತಿ ಸಾಹಿತ್ಯವನ್ನು ರಚಿಸಿ ದಾಸಕೂಟವನ್ನು ಪುನರುಜ್ಜೀವನಗೊಳಿಸಲು ಪ್ರಯತ್ನಿಸಿದರು.

ಬೆಂಗಳೂರು, ದೇವರಾಯನದುರ್ಗ, ಚಿತ್ರದುರ್ಗ ಈ ಪ್ರಾಂತ್ಯಗಳಲ್ಲಿ ದಾಸಕೂಟಗಳು ಮರುಹುಟ್ಟು ಪಡೆದವು.

ತಂದೆ ಮುದ್ದುಮೋಹನದಾಸರಿಂದ ಅಂಕಿತ ಪಡೆದವರಲ್ಲಿ ಹಲವಾರು ಮಂದಿ ಮಹಿಳೆಯರಿದ್ದಾರೆ. ಇವರಲ್ಲಿ ಕೆಲವರಾದರೂ ಹರಿದಾಸ ಸಾಹಿತ್ಯವನ್ನು ಗಂಭೀರವಾಗಿ ಪರಿಗಣಿಸಿ ಕೃತಿಗಳನ್ನು ರಚಿಸಿರಬೇಕು. ದಾಸ ಸಾಹಿತ್ಯಕ್ಕೆ ಮಹಿಳೆಯರ ಕೊಡುಗೆಯನ್ನು ಸಮೀಕ್ಷಿಸುವಾಗ ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ ಇವರಂತೆಯೇ ಗಮನಿಸಬೇಕಾದ ದಾಸ ಸಾಹಿತ್ಯದ ಮತ್ತೊಂದು ಮೇರು ಪ್ರತಿಭೆ ಶ್ರೀಮತಿ ಅಂಬಾಬಾಯಿಯವರು. ತಂದೆ ಮುದ್ದುಮೋಹನದಾಸರ ಶಿಷ್ಯೆಯಾದ ಇವರು ರಚಿಸಿರುವ ಕೀರ್ತನ ಸಾಹಿತ್ಯ ಗಾತ್ರದಲ್ಲೂ, ಪಾತ್ರದಲ್ಲೂ ಮೌಲಿಕವಾಗಿದ್ದು, ಮಹಿಳಾ ಸಾಹಿತ್ಯದಲ್ಲಿ ಉಲ್ಲೇಖನೀಯವಾಗಿದೆ.

ಅಂಬಾಬಾಯಿಯವರ ಜನ್ಮಸ್ಥಳ ಚಿತ್ರದುರ್ಗ. ಅವರು, ಅನಂತಪದ್ಮನಾಭ ಕಥಾಸಾರ, ಎಂಬ ಹಾಡಿನಲ್ಲಿ 'ಧರೆಯೊಳಗೆ ಪುಟ್ಟಿ ಮುವ್ವತ್ತಾರು ಸಂವತ್ಸರವು ಸರಿದುದೀ ಬಹುಧಾನ್ಯಕೆ' ಎಂದು ತಿಳಿಸಿ ೩೬ ವರ್ಷಗಳ ನೆನಪಿನಲ್ಲಿ ೩೬ ಪದ್ಯಗಳನ್ನು ಬರೆದಿರುವುದಾಗಿ ತಿಳಿಸಿದ್ದಾರೆ. ಹೀಗೆಯೇ ಬಹುಧಾನ್ಯ ಸಂವತ್ಸರದ ವಿಜಯದಾಸರ ಆರಾಧನೆಯ ದಿನಕ್ಕೆ ತಮಗೆ ೩೬ ವರ್ಷಗಳು ಸರಿದುವೆಂದು ಹೇಳಿದ್ದಾರೆ. ಇದರಿಂದ ಅವರ ಜನ್ಮದಿನ ಶೋಭನಕೃತು ಸಂವತ್ಸರದ ಕಾರ್ತೀಕ ಶುದ್ಧ ದಶಮಿ (೧೯೦೨) ಎಂದು ಖಚಿತವಾಗಿ ಹೇಳಬಹುದು.

ಅಂಬಾಬಾಯಿಯವರ ತಂದೆ ಭೀಮಸೇನರಾಯರು, ತಾಯಿ ಭಾರತೀಬಾಯಿ (ವೆಂಕಮ್ಮ). ಆ ಕಾಲದಲ್ಲಿ ಹೆಣ್ಣು ಮಕ್ಕಳ ವಿದ್ಯಾಭ್ಯಾಸಕ್ಕೆ ಯಾವುದೇ ರೀತಿಯ ಪ್ರೋತ್ಸಾಹವಿರಲಿಲ್ಲ. ಆದರೂ ತಮ್ಮ ಅತಿ ಬುದ್ಧಿವಂತ ಮಗಳನ್ನು ಭೀಮಸೇನರಾಯರು ಶಾಲೆಗೆ ಸೇರಿಸಿದರು. ಮೂರು, ನಾಲ್ಕನೆಯ ತರಗತಿಯವರೆಗೂ ಓದಿಸಿದರು. ಕಾಲಸ್ಥಿತಿಯಂತೆ ಬಾಲ್ಯ ವಿವಾಹದ ಅಲಿಖಿತ ನಿಯಮವನ್ನು ಮೀರಲಾಗದೆ ಆಕೆಗೆ ೧೦ ವರ್ಷಕ್ಕೆ ಮದುವೆ ಮಾಡಿದರು. ಗೋಪಾಲಪುರದ ಹನುಮಂತಾಚಾರ್ಯ ಎಂಬ ಬಾಲಕನೊಂದಿಗೆ

ವಿವಾಹವಾಯಿತು. ವಿವಾಹದೊಂದಿಗೆ ವಿದ್ಯಾಭ್ಯಾಸವು ಸಮಾಪ್ತವಾಯಿತು. ೧೨ನೆಯ ವಯಸ್ಸಿನಲ್ಲಿ ಗಂಡನ ಮನೆಗೆ ಹೋದ ಅಂಬಾಬಾಯಿಯ ಬದುಕು ಅಷ್ಟೇನೂ ಸುಗಮವಾಗಿರಲಿಲ್ಲ. ಊರ ಮಾರಿಯಾಗಿ ಬಂದ ಪ್ಲೇಗಿನ ಉಪಟಳದಿಂದ ಆಕೆ ಒಂದೇ ದಿನ ಗಂಡನನ್ನೂ ತಂದೆಯನ್ನೂ ಕಳೆದುಕೊಂಡಳು. ಆಡುವ ವಯಸ್ಸಿನಲ್ಲೇ ಸಂಕಷ್ಟಗಳ ಸರಮಾಲೆ ಪ್ರಾರಂಭವಾಯಿತು. ಗಂಡನ ಮನೆಯವರು ಸಾಕಷ್ಟು ಉಳ್ಳವರೇ ಆದರೂ ಆ ಪುಟ್ಟ ವಿಧವೆಗೆ ಕೇಶಮಂಡನವನ್ನು ಮಾಡಿ ತವರಿಗೆ ಅಟ್ಟಿದರು. ಬೇರೆ ಯಾವ ಆಸ್ತಿಯೂ ದೊರೆಯಲಿಲ್ಲ. ಅಂಬಾಬಾಯಿ ಅಕ್ಷರಶಃ ಅನಾಥೆಯಾದರು. ಒಂದು ಹೊತ್ತಿನ ಹಿಡಿಕೂಳಿಗಾಗಿ ತಮ್ಮನ ಮನೆ ಮತ್ತು ತಂಗಿಯ ಮನೆಯನ್ನು ಆಶ್ರಯಿಸಬೇಕಾದ ಪರಿಸ್ಥಿತಿ ಬಂತು. ತಮ್ಮನ ಮನೆ ತುಂಬು ಸಂಸಾರದ್ದು. ತಾಯಿ, ಅಜ್ಜಿ ಇಬ್ಬರೂ ಮಡಿ ಹೆಂಗಸರು. ಇವರಿಬ್ಬರ ಜೊತೆಗೆ ಮತ್ತೊಬ್ಬ ಬಾಲ ವಿಧವೆ. ಆರು ತಿಂಗಳು ತಮ್ಮನ ಮನೆಯಲ್ಲಿ ಕಳೆದ ಅಂಬಾಬಾಯಿ, ಅನಂತರ ತಂಗಿ ಸೀತಾಬಾಯಿಗೆ ಸಹಾಯ ಮಾಡಲು ತಂಗಿಯ ಮನೆಗೆ ಬಂದು ಸೇರಿದರು. ತಂಗಿಯ ಮನೆ, ತಮ್ಮನ ಮನೆಗಳಲ್ಲಿ ಹದಿನಾರು ವರ್ಷ ಬದುಕನ್ನು ಸವೆಸಿದರು. ಮನೆಗೆಲಸ, ಮಕ್ಕಳ ಆರೈಕೆ, ಇವುಗಳ ಜೊತೆಯಲ್ಲೇ ಧಾರ್ಮಿಕ ಪ್ರವೃತ್ತಿಯನ್ನು ಬೆಳೆಸಿಕೊಂಡರು. ಪೂಜೆ, ವ್ರತ, ಉಪವಾಸ, ಪಾರಯಣ, ಅಧ್ಯಯನ ಇವುಗಳಿಂದ ಕಷ್ಟಗಳನ್ನು ಮರೆಯುವ ಪ್ರವೃತ್ತಿಯನ್ನು ಬೆಳೆಸಿಕೊಂಡರು. ಕುಸಿಯುವ ಪರಿಸ್ಥಿತಿಯಲ್ಲಿದ್ದ ಆಕೆಗೆ ಈ ಧಾರ್ಮಿಕ ಪ್ರವೃತ್ತಿ ಕುಸಿಯದ ಮನಸ್ಥಿತಿಯನ್ನು ತಂದುಕೊಟ್ಟಿತು. ಇದೇ ಸಂದರ್ಭದಲ್ಲಿ ತಂದೆ ಮುದ್ದುಮೋಹನದಾಸರಿಂದ ಅಂಬಾಬಾಯಿಯವರು 'ಗೋಪಾಲಕೃಷ್ಣವಿಠಲ' ಎಂಬ ಅಂಕಿತವನ್ನು ಪಡೆದು ಹರಿದಾಸರಾದರು. ಹೀಗೆ ಅಂಕಿತ ಪಡೆದದ್ದು ಪ್ರಜೋತ್ಪತ್ತಿ ಸಂವತ್ಸರದ ಚೈತ್ರಶುದ್ಧ ಶ್ರೀರಾಮನವಮಿ (೧೯೩೧) ಶನಿವಾರದಂದು.

ಅಂಬಾಬಾಯಿಯವರ ಕುಂಟುಂಬವರ್ಗದವರೆಲ್ಲ ಅಂಕಿತವನ್ನು ಸ್ವೀಕರಿಸಿದ ಹರಿದಾಸರೇ ಆಗಿದ್ದರು. ಅಜ್ಜಿ ಸೀತಾಪತಿವಿಠಲ, ತಾಯಿ ಯಾದವೇಂದ್ರವಿಠಲ, ತಮ್ಮ ರಮಾಕಾಂತವಿಠಲ, ತಮ್ಮನ ಪತ್ನಿ ಸುರೇಶವಿಠಲ, ತಂಗಿ

ಪರಮಾನಂದವಿಠಲ, ತಂಗಿಯ ಗಂಡ ನಿತ್ಯಾನಂದವಿಠಲ, ಹೀಗೆ ಹರಿದಾಸ ಕುಟುಂಬದಲ್ಲೇ ಬೆಳೆದ ಅಂಬಾಬಾಯಿಯವರಿಗೆ ಅಂಕಿತ ದೊರೆತ ಮೇಲೆ ಅವರ ಬದುಕಿನ ರೀತಿ ನೀತಿಗಳೇ ಬದಲಾಯಿತು. ಗುರುಗಳ ಜ್ಞಾನಬೋಧೆಯನ್ನು ನಿರಂತರವಾಗಿ ಕೇಳುತ್ತ 'ಮನದ ಶೋಕಾಗ್ನಿ ಶಾಂತವಾಯಿತು.' 'ಕನಸಿನ ಮನಸಿನ ಕಳವಳ ದೂರವಾಯಿತು.' 'ಸಕಲ ಶಾಸ್ತ್ರಗಳನ್ನು ಶೋಧಿಸಿ ಅಕಳಂಕ ತತ್ವವ ಸಾಧಿಸಿ ಮುಕುತಿ ಯೋಗ್ಯರಿಗೆಲ್ಲ ಅಂಕಿತಗಳನ್ನು ನೀಡಿ, ಮಲಿನ ಮನವನ್ನು ತಿದ್ದುವ ಸುಜ್ಞಾನಿಗಳಾದ' ಗುರುಗಳಿಂದ ಅಂಕಿತ ಪಡೆದ ಮೇಲೆ ಪೂರ್ಣಾವಧಿ ಹರಿದಾಸರೆ ಆದರು. ಲೋಕದ ದೃಷ್ಟಿಯಲ್ಲಿ ನಾವು ಯಾವುದು ಸುಖವೆಂದು ಕರೆಯುತ್ತೇವೆಯೊ ಅದರಿಂದ ಪೂರ್ಣ ವಂಚಿತಳಾದ ಈಕೆಗೆ 'ತಾನೊಬ್ಬ ಮಂದಭಾಗ್ಯೆ' ಎಂಬ ಕೊರಗು ಇತ್ತು. ಕರ್ಮದಲ್ಲಿ ಶ್ರದ್ಧೆ, ಧರ್ಮದಲ್ಲಿ ಬುದ್ಧಿ, ನಿರ್ಮಲ ಜ್ಞಾನ-ಇವುಗಳ ಬಗ್ಗೆ ಚಿಂತಿಸುವ ಪರಿಸ್ಥಿತಿಯೇ ಇರಲಿಲ್ಲ. ಅಂಕಿತ ಪಡೆದ ಮೇಲೆ 'ದೇಹ ಮೋಹ' ದೂರವಾಯಿತು. 'ಭೋಗದಲ್ಲಿ ವೈರಾಗ್ಯ' ಮೂಡಿತು. 'ಇಂದು ನಾಳೆಗೆ ಎಂಬ ಮಂದ ಬುದ್ಧಿಯನ್ನು ಬಿಟ್ಟು, ಬಂದದ್ದರಿಂದ ಆನಂದಿಸುತ್ತ, ಮಂದಭಾಗ್ಯರ ಮಾತುಗಳನ್ನು ಲೆಕ್ಕಿಸದೆ, ತಂದೆ ಮುದ್ದು ಮೋಹನದಾಸರ ಪದದ್ವಂದ್ವಗಳನ್ನು ಭಜಿಸುತ್ತ' ಬದುಕನ್ನು ಕಳೆದರು. ಹರಿದಾಸರಿಗೆ ಉಚಿತವಾದ ಧರ್ಮಕರ್ಮಗಳ ಆಚರಣೆ, ವಚನದಲ್ಲಿ ಹರಿಯುನಾಮ, ಶುಚಿರ್ಭೂತವಾದ ಜೀವನ, ನಿರಂತರವಾದ ಸಂಚಾರ, ಕೃತಿರಚನೆ, ಭಜನೆ, ಇವು ಅಂಬಾಬಾಯಿಯವರ ಬದುಕಿನ ಅವಿಭಾಜ್ಯ ಭಾಗಗಳಾದವು. ತಮ್ಮ ವೈಯಕ್ತಿಕ ಜೀವನದಲ್ಲಿ ಕಳೆದುಕೊಂಡ ಲೌಕಿಕ ಸುಖವನ್ನು ಆಧ್ಯಾತ್ಮಿಕ ಹಾಗೂ ಪಾರಮಾರ್ಥಿಕ ಸಾಧನೆಯಿಂದ ಸರಿದೂಗಿಸಿಕೊಳ್ಳಲು ಪ್ರಯತ್ನಿಸಿದರು.

'ಅಷ್ಟ ಭಾಗ್ಯಕಧಿಕ ಲಾಭವು । ದಾಸತನವು
ಶ್ರೇಷ್ಠ ಗುರುಗಳಿಂದ ದೊರಕಿತು
ಇಷ್ಟವೆನಗೆ ದಾಸಪೆಸರು
ಶಿಷ್ಟರೆಲ್ಲ ಕರೆಯಲೀಗ
ತುಷ್ಟಿಪಡುವೆ ಶ್ರೀ ಗೋಪಾಲ-
ಕೃಷ್ಣವಿಠಲ ಸಲಹೊ ಎಂದು'

ಈ ನಿರ್ಧಾರಗಳೊಂದಿಗೆ ತಾಳ ತಂಬೂರಿಗಳನ್ನು ಹಿಡಿದು, ಜೋಳಿಗೆ ಹಾಕಿಕೊಂಡು, ಕಾಲಿಗೆ ಗೆಜ್ಜೆಕಟ್ಟಿ ಹರಿದಾಸರ ವೃತ್ತಿಯನ್ನು ಪ್ರೀತಿಯಿಂದ ಸ್ವೀಕರಿಸಿದರು. ಗೊತ್ತು ಗುರಿಯಿಲ್ಲದ ತಮ್ಮ ಬದುಕಿಗೆ ತಾವೇ ಕಟ್ಟುಪಾಡುಗಳನ್ನು ಹಾಕಿಕೊಂಡರು. ಎಚ್ಚೆತ್ತು ನಡೆಯಬೇಕು, ಗುರುಸೇವೆಯನ್ನು ಇಚ್ಛೆಯಿಂದ ಮಾಡಬೇಕು, ತುಚ್ಛಮಾತುಗಳಿಗೆ ಮನಕೊಡಬಾರದು, ವಂದನೆ ನಿಂದನೆಗಳನ್ನು ಒಂದಾಗಿ ಭಾವಿಸಬೇಕು. ಮಂದರಂತೆ ಮನುಜರಿಗೆ ಕಾಣಬೇಕು, ಚಿಂತೆಯನಳಿಯಬೇಕು, 'ಸಂತತ ಗೋಪಾಕೃಷ್ಣವಿಠಲನ ಅಂತರಂಗದಿ ಭಜಿಸಿ ಮುಕ್ತಿ ಸಾಧಿಸಬೇಕು'. ಈ ಸ್ಪಷ್ಟ ಧ್ಯೇಯಗಳೊಂದಿಗೆ ಹರಿದಾಸವೃತ್ತಿ ಕೈಗೊಂಡರು. ಹರಿದಾಸವೃತ್ತಿ ಅವರಿಗೆ ಹೊಟ್ಟೆಪಾಡಿನ ಕೃತ್ಯವಲ್ಲ, ಅದು ವಿಠಲನ ಸೇವೆ. ಲೌಕಿಕ ಆಸಕ್ತಿಗಳು ಮತ್ತು ಸ್ವಾರ್ಥದಿಂದ ಸಂಪೂರ್ಣ ದೂರವಾಗಿ, ವಿರಕ್ತಿ ಪಥದಲ್ಲಿ ನಡೆದ ಈಕೆ 'ಹರಿಗುರು ಕಾರ್ಯಕಲ್ಲವೆ ಈ ದೇಹ' ಎಂದು ಪ್ರಶ್ನಿಸಿಕೊಂಡರು. 'ನಿನ್ನ ಕಿಂಕರಳಾಗಿ ನಿನ್ನ ಸೇವೆಯ ಮಾಳ್ಪ ಉನ್ನಂತ ಅಭಿಲಾಷೆ'ಯನ್ನು ನೆರವೇರಿಸುವಂತೆ ಶ್ರೀ ಹರಿಯನ್ನು ಪ್ರಾರ್ಥಿಸಿದರು. 'ಭೋಗದಲಿ ವೈರಾಗ್ಯನೀಡು, ಭಾಗವತರ ಸಂಗಕೊಡು,' 'ಗರುವಿಕೆಯನು ಬಿಡಿಸು ಶರಣಳ ಪೋಷಿಸು, ನಿರುತದಿ ಧ್ಯಾನಿಪ ವರಮತಿ ನೀಡು'– ಹೀಗೆ ಖಚಿತವಾದ ಬೇಡಿಕೆಗಳನ್ನು ದೇವರ ಮುಂದಿಡುತ್ತಾರೆ. 'ಚಿಂತೆಯೆನಗೊಂದಿಲ್ಲ, ಅಂತರಂಗದಿ ನೆಲಸಿ ಸಂತತದಿ ನಿನ ಧ್ಯಾನ ನೀಡೆಂಬೆನೊ' ಎಂದು ಜಗತ್ತಿನ ಚಿಂತೆಗಳಿಂದ ದೂರವಾಗಿ ಭಗವಂತನ ಚಿಂತನೆಯಲ್ಲಿ ತೊಡಗಿಸಿಕೊಳ್ಳುವ ವೈರಾಗ್ಯ ಅವರದು. ಇದನ್ನೇ ತಮ್ಮ ದಿನಚರಿಯಲ್ಲಿ ಹೀಗೆ ಹೇಳಿದ್ದಾರೆ. 'ಕಷ್ಟದಲ್ಲಿ ತಲೆತಪ್ಪಿಸಕೊಳ್ಳುವುದು ವೈರಾಗ್ಯವಲ್ಲ. ಪರರ ಬಲವಂತಕ್ಕೆ ವಹಿಸುವುದೂ ವೈರಾಗ್ಯವಲ್ಲ. ಬಂದಂಥ ಕಷ್ಟ ನಿಷ್ಠುರಗಳನ್ನು ಜಯಿಸಿ ಪರಿಣಾಮವನ್ನು ಪರೀಕ್ಷಿಸಿ ಸರ್ವರೂ ಸಂತೋಷದಿಂದ ಅಭಿಮಾನಿಸುತ್ತಿದ್ದ ಕಾಲಕ್ಕೆ ಸಂತೋಷದಿಂದ ಸ್ವಜನಾಭಿಮಾನ ತ್ಯಾಗಪೂರ್ವಕ ಶ್ರೀ ಹರಿಗುರು ಚರಣಾರಾಧಕ ತತ್ಪರರಾಗಬೇಕು. ಇದೇ ಶ್ರೀ ಹರಿಗುರು ಪ್ರೀತಿಕರವಾದ ವೈರಾಗ್ಯ'.

ಈ ಹಿನ್ನೆಲೆಯಲ್ಲಿ ಅವರು ದಾಸತ್ವವನ್ನು ಆಸೆಯಿಂದ ಸ್ವೀಕರಿಸಿದರು.

೧. 'ಉಡಲು ಉಣಲು ಆಸೆಯಿಲ್ಲ
ತೊಡಲು ಇಡಲು ಮಮತೆಯಿಲ್ಲ
ಎಡದ ಬಲದ ನೆಂಟರಭಿಮಾನವಿಲ್ಲವು
ಎಡರು ಬರಲು ಭಯವು ಇಲ್ಲ
ಬಿಡಲು ದೇಹ ಅಂಜಿಕಿಲ್ಲ' (ಕೀ ೨೧೯)

೨. 'ದಾಸತನದಿ ಮೆರೆವುದೊಂದು
ಆಸೆಯಿಲ್ಲದಿನ್ನು ಬೇರೆ
ಆಸೆಯೊಂದು ಇಲ್ಲ ಕೇಳು ನಾಶರಹಿತನೆ
ಪಾಶಕರ್ಮ ಹರಿಸಿ ನಿನ್ನ
ದಾಸಳೆಂದು ಮರೆಸೆ ಜಗಕೆ
ಈಶನೆಂದು ನಿನ್ನ ಮೆರೆಸಿ ಆಸೆ ಪೂರೈಸಿಕೊಂಬೆ' (ಕೀ. ೨೧೯)

೩. 'ನಿನ್ನ ಪದುಮ ಪಾದವನು ನಂಬಿದ ಎನ್ನ
ನಿನ್ನ ದಾಸಳೆನಿಸಿ ಘನ್ನ ಮಾರ್ಗ ತೋರಿ
ನಿನ್ನವಳೆನಿಸೊ ಎನ್ನ ಘನ್ನಗೋಪಾಲ
ಅನ್ಯರೊಬ್ಬರ ಕಾಣೆ ಮನ್ನಿಸುವ ಜಗದಿ (ಕೀ. ೨೨೦)

೪. 'ಮುಳುಗಿದೆನು ಸಂಸಾರ ಗಣಿಸಲಾಗದ ಕರ್ಮ
ಫಣಿಶಾಯಿ ಕಡೆಮಾಡಿ ಕರವ ಪಿಡಿದು
ಧಣಿಸು ನಿನ್ನ ದಾಸತ್ವ ಧರೆಯ ಮೇಲ್ಡಂಗುರ
ಫಣಿಶಾಯಿ ಗೋಪಾಲಕೃಷ್ಣವಿಠಲ ಕೈಪಿಡಿದು' (ಕೀ. ೨೨೧)

ಅಂಬಾಬಾಯಿಯವರ ಅತ್ತೆ ಮನೆಯಲ್ಲಿ ಬಹಳಷ್ಟು ದೇವರ ವಿಗ್ರಹಗಳಿದ್ದುವು. ಅದರಲ್ಲಿ ಪುಟ್ಟ ಆರು ಇಂಚಿನ ಗೋಪಾಲಕೃಷ್ಣನ ಕಂಚಿನ ವಿಗ್ರಹ. ಗಂಡ ಸತ್ತು, ಕೇಶ ಮುಂಡನವೂ ಆಗಿ, ಅತ್ತೆಯ ಮನೆಯಲ್ಲಿ ನೆಲೆ ಕಳೆದುಕೊಂಡಾಗ, ಆಕೆ ಬೇಡಿದ್ದು ಆ ಕೃಷ್ಣನ ವಿಗ್ರಹವನ್ನು ಮಾತ್ರ ಸದ್ಯ ಆಸ್ತಿಯಲ್ಲ, ಬೆಳ್ಳಿ ಬಂಗಾರವಲ್ಲ, ಪುಟ್ಟವಿಗ್ರಹ ತಾನೆ ಎಂದು ಅತ್ತೆಮನೆಯವರು ನೀಡಿದ

ಕೃಷ್ಣನ ವಿಗ್ರಹವೇ ಆಕೆಯ ಆರಾಧ್ಯ ದೈವವಾಯಿತು. (ಕೀ. ೨೫೬) ಅದಕ್ಕೆ ಅನುಗುಣವಾಗಿ ಗುರುಗಳು ನೀಡಿದ ಅಂಕಿತ ಗೋಪಾಕೃಷ್ಣವಿಠಲ. ಹೀಗಾಗಿ ಅಂಬಾಬಾಯಿಯವರ ಕೃತಿಗಳಲ್ಲಿ ಬಹುಪಾಲು ಕೃಷ್ಣಸ್ತುತಿಗಳೇ ಆಗಿವೆ. ಗುರುಗಳಿಂದ ಗೋಪಾಲಕೃಷ್ಣವಿಠಲ ಎಂಬ ಅಂಕಿತ ಪಡೆದ ಮೇಲೆ ಅಂಬಾಬಾಯಿಯವರ ಜೀವನ ದೃಷ್ಟಿಯೇ ಬದಲಾಯಿತು. ತಾನೊಬ್ಬ ವಿಧವೆ, ಮಡಿ ಹೆಂಗಸು, ಅನಾಥೆ, ಮಂದಭಾಗ್ಯೆ, ತಮ್ಮ ತಂಗಿಯರ ಸಂಸಾರಗಳಿಗೆ ಭಾರವಾದವಳು ಎಂಬ ಎಲ್ಲ ಸಂಕೋಚಗಳು ದೂರವಾದವು.

'ಮುತ್ತೈದೆಯಾದೆ ನಾ ಮುರವೈರಿ ದಯದಿ
ನಿತ್ಯತೃಪ್ತನು ಎನ್ನ ನಿಜಕರವ ಪಿಡಿಯೆ'

ಎಂದು ಘೋಷಿಸಿ ತನ್ನಲ್ಲಿ ಸೌಮಂಗಲ್ಯದ ಎಲ್ಲ ಸಂಕೇತಗಳು ಗುರು ಕರುಣೆಯಿಂದ ಮತ್ತೆ ಪ್ರಾಪ್ತವಾದವೆಂದು ಭಾವಿಸಿದರು. ಅಂಕಿತವೇ ಮಾಂಗಲ್ಯ, ನಾಮವೇ ತಿಲಕ, ಗುರುಕರುಣವೇ ಕವಚ, ಗುರು ಪ್ರೀತಿಯೆ ವಸನ, ಭಕ್ತಿ, ಜ್ಞಾನ, ವೈರಾಗ್ಯಗಳೇ ಮೂರು ಕಾಲಿನ ಜಡೆ, ತತ್ವಗಳೇ ಚೌರಿ, ರಾಗುಟೆ, ಗೊಂಡ್ಯಗಳು, ಶ್ರವಣವೇ ಕರ್ಣಕುಂಡಲ, ನಿರ್ಮಾಲ್ಯವೇ ನಾಸಿಕಾಭರಣ, ಭಕ್ತಿಯೇ ನಡುವಿನೊಡ್ಯಾಣ, ಸದ್ಗುಣಗಳೇ ಪಾದಾಭರಣ, ಗುರುವಿನ ಅನುಗ್ರಹವೇ ಮಂಗಳ ದ್ರವ್ಯಗಳು. ಹೀಗೆ ಸಾಲಂಕೃತಳಾದ ತನ್ನನ್ನು ಶ್ರೀಹರಿಗೆ ಧಾರೆ ಎರೆದು ಕೊಡಲಾಯಿತು ಎಂದು ಭಾವುಕತೆಯಿಂದ ಹೇಳುತ್ತಾರೆ. (ಕೀ. ೨೫೯)

ಇಂಥ ದೃಢ ನಿರ್ಧಾರ ಮತ್ತು ಸಮರ್ಪಣ ಭಾವದಿಂದ ಅಂಬಾಬಾಯಿ-ಯವರು ಹರಿದಾಸರಂತೆಯೇ ವೇಷಭೂಷಣಗಳನ್ನು ತೊಟ್ಟರು. ಕಾವಿಯ ವಸ್ತ್ರ, ಕಾಲಿಗೆ ಗೆಜ್ಜೆ, ಕೊರಳಿಗೆ ತುಳಸೀ ಮಾಲೆ, ಬಗಲಿಗೆ ತಂಬೂರಿ, ಜೋಳಿಗೆ ಇತ್ಯಾದಿ ಪರಿಕರಗಳನ್ನು ಧರಿಸಿ ಹರಿದಾಸರಾಗಿ ಸಂಚರಿಸತೊಡಗಿದರು. ದೇಹಕ್ಕೆ ಸಂಬಂಧಿಸಿದ ಮಾನಾಭಿಮಾನಗಳನ್ನು ದೂರಮಾಡಿ ಏಕಾಂತಸುಖವನ್ನು ನೀಡುವ ತಂಬೂರಿ ಶ್ರೀಹರಿಯನ್ನು ಒಲಿಸಿಕೊಳ್ಳುವ ಸಾಧನ ಎಂದು ಭಾವಿಸಿದರು.

೧. ಬಲು ಬಲು ಪರಿಯಲಿ ಹರಿದಾಸತ್ವಕೆ
ಬರುವಂತೆ ಮಾಡಿದ ತಂಬೂರಿ
ನೆಲೆಯಾದೆನು ಹರಿದಾಸರ ಮಾರ್ಗದಿ
ಕಲುಷವ ಕಳೆದಿತು ತಂಬೂರಿ (ಕೀ. ೨೬೨)

೨. ಬೆಟ್ಟದೊಡೆಯ ತಾನಿಷ್ಟು ಹಠವ ಮಾಡಿ
ಕೊಟ್ಟೇ ಕೊಟ್ಟನು ತಂಬೂರಿ
ಎಷ್ಟು ನಾಚಿಕೆಪಟ್ಟರೂ ಬಿಡದಲೆ
ಕಷ್ಟ ಕಳೆಯುತಲಿತ್ತ ತಂಬೂರಿ
ಬಿಟ್ಟು ಹೋಯಿತು ಭವಕಟ್ಟು ಇಂದೆನ್ನನು
ಮುಟ್ಟಿಸಿತ್ತರಿಪುರ ತಂಬೂರಿ
ಎಷ್ಟು ಪೇಳಲಿ ಶ್ರೀನಿಧಿ ಗೋಪಾಲ
ಕೃಷ್ಣವಿಠಲನಿತ್ತ ತಂಬೂರಿ (ಕೀ. ೨೬೨)

ಹೀಗೆ ತಂಬೂರಿಯನ್ನು ಹಿಡಿದು ಹರಿದಾಸರಾಗಿ ಸಾಲವಾಡದೆ, ಸಾಲದೆನ್ನದೆ, ನಾಳೆಗೆ ಇಡದೆ ಬದುಕಿದರು. ಹರಿದಾಸ ಪದ್ಧತಿಯಿಂದ ಗೋಪಾಳ ಧರಿಸಿ, ಭಕ್ತರ ಮನೆಗಳಿಗೆ ಊಂಛವೃತ್ತಿಗೆ ಹೋಗುವುದು ಅವರ ನಿತ್ಯ ವಿಧಿಯಾಗಿತ್ತು.

ಅಂಬಾಬಾಯಿ ಒಂದು ರೀತಿಯ ಆಶುಕವಯತ್ರಿ. ಸಂಚಾರಕಾಲದಲ್ಲಿ ಪ್ರತಿನಿತ್ಯ ಹಾಡುಗಳನ್ನು ಬರೆಯುವ, ಹಾಡುವ, ಅದನ್ನು ಮಹಿಳೆಯರಿಗೆ ಹೇಳಿಕೊಡುವ ಪ್ರವೃತ್ತಿ ಅವರಲ್ಲಿತ್ತು. ಅಪಾರವಾದ ಸೃಜನ ಶಕ್ತಿ ಆಕೆಯಲ್ಲಿತ್ತು. ಒಮ್ಮೆ ಅವರ ತಂಗಿಯ ಮನೆಯಲ್ಲಿದ್ದಾಗ ನಡೆದ ಘಟನೆ ಹೀಗಿದೆ. ಪಕ್ಕದ ಮನೆಯ ಗೃಹಿಣಿ ಲಾಲಿ ಹಾಡೊಂದನ್ನು ಹೇಳುತ್ತಿದ್ದರು. ಆ ಚಂದವಾದ ಹಾಡನ್ನು ಬರೆದುಕೊಡುವಂತೆ ತಂಗಿ ಆಕೆಯನ್ನು ಕೇಳಿದಳು. ಆಕೆಯು ಎರಡು ಮೂರು ದಿನ ಸತಾಯಿಸಿ ನಯವಾಗಿ ತಿರಸ್ಕರಿಸಿದಳು. ತಂಗಿ ತನ್ನ ಬೇಸರವನ್ನು ಅಂಬಾಬಾಯಿಯ ಬಳಿ ತೋಡಿಕೊಂಡಳು. ಅಂದು ಮಧ್ಯರಾತ್ರಿ ಅಂಬಾಬಾಯಿಗೆ ಥಟ್ಟನೆ ಎಚ್ಚರವಾಯಿತು. ಮಿಂದು ಮಡಿಯುಟ್ಟು ದೇವರ ಮುಂದೆ ಕುಳಿತು ಲಾಲಿ ಹಾಡನ್ನು ಬರೆಯಲು ಪ್ರಾರಂಭಿಸಿದರು.

೧ ಪುಟ್ಟಿತು ಮನದಲ್ಲಿ ಕೃಷ್ಣಲೀಲೆಯ ಸ್ಮರಣೆ
ತಟ್ಟನೆದ್ದೀಗ ಬರೆಯುವೆ । ಹರಿಚರಿತೆ
ಶ್ರೇಷ್ಠ ಗುರು ಚರಣಕರ್ಪಿಸುವೆ

೨. ಅನ್ಯ ಸ್ಮರಣೆಗಳೇಕೆ ಅನ್ಯ ವಾಕ್ಯಗಳೇಕೆ
ಅನ್ಯರಾಡುವ ನುಡಿಯೇಕೆ । ಶ್ರೀ ಕೃಷ್ಣ
ನಿನ್ನ ನೆನಹೆನಗೆ ಆನಂದ

೩. ಮುದ್ದು ಕೃಷ್ಣನೆ ದೈವ ಮಧ್ವರಾಯರೆ ಗುರುವು
ಶುದ್ಧ ವೈಷ್ಣವರೆ ಬಂಧುಗಳು । ಎಂದವರು
ಹೆದ್ದಾರಿ ಹಿಡಿದು ನಡೆಯುವರು

ವಸುದೇವ ದೇವಕಿಯರ ಸೆರೆವಾಸ, ಕೃಷ್ಣನ ಜನನ, ವಸುದೇವನ ಗೋಕುಲ ಪ್ರಯಾಣ, ಗೋಕುಲದಲ್ಲಿ ಕೃಷ್ಣನ ಬಾಲಲೀಲೆಗಳು, ಅವನ ತುಂಟಾಟ, ಮುದ್ದು ಮಾತುಗಳು, ಯಶೋದೆಯ ವಾತ್ಸಲ್ಯ, ಇತ್ಯಾದಿಗಳನ್ನು ೩೮೯ ನುಡಿಗಳ ಈ ದೀರ್ಘರಚನೆಯಲ್ಲಿ ಕಾಣಬಹುದು. ಸುವ್ವಾಲಿ ಧಾಟಿಯ ಈ ಗೇಯ ಕಾವ್ಯವನ್ನು ಅಂಬಾಬಾಯಿ ಮತ್ತು ಅವರ ತಂಗಿ ಕಂಠಪಾಠ ಮಾಡಿಕೊಂಡು ಪ್ರತಿನಿತ್ಯ ಹಾಡುತ್ತಿದ್ದರಂತೆ.

ಅಂಬಾಬಾಯಿಯವರ ಕೀರ್ತನೆಗಳು ಸಾಮಾನ್ಯವಾಗಿ ಮೂರರಿಂದ ಏಳೆಂಟು ನುಡಿಯ ದೇವರ ನಾಮಗಳು. ಒಮ್ಮೆ ಗುರುಗಳು ಹೇಳಿದರಂತೆ 'ಗಂಡಸರಿಗೆ ಗಾಯಿತ್ರಿ ಮಂತ್ರ, ಪುರುಷಸೂಕ್ತ, ವಾಯುಸ್ತುತಿಗಳಿವೆ. ದೇವತಾರ್ಚನೆ ವೇಳೆಯಲ್ಲಿ ಇವನ್ನು ಹೇಳಿಕೊಳ್ಳುತ್ತಾರೆ. ಹೆಣ್ಣುಮಕ್ಕಳಿಗೆ ಮನೆಕೆಲಸವೇ ದೇವರ ಪೂಜೆ, ಮನೆಕೆಲಸ ಮಾಡಿಕೊಳ್ಳುತ್ತಲೇ ಹಾಡಿಕೊಳ್ಳಬಹುದಾದ ದೀರ್ಘ ಕೃತಿಗಳನ್ನು ರಚನೆಮಾಡು.' ಗುರುಗಳ ಈ ಆಜ್ಞೆಯಂತೆ ಅಂಬಾಬಾಯಿ ಧೀರ್ಘಕೃತಿಗಳನ್ನು ರಚಿಸಲು ಪ್ರಾರಂಭಿಸಿದರು. ಹೀಗೆ ರಚಿಸಿರುವ ಕೆಲವು ದೀರ್ಘಕೃತಿಗಳು ಹೀಗಿವೆ.

೧. ಕೃಷ್ಣ ಬಾಲಲೀಲ ಜೋಗುಳ - ೩೮೦ ನುಡಿಗಳು
೨. ಕಾಂತೇಶ ಕವಚ - ೪೫ ನುಡಿಗಳು
೩. ಕದರಮಂಡಲಗಿ ಪ್ರಾಣದೇವರ ಸ್ತೋತ್ರ - ೯೯ ದ್ವಿಪದಿಗಳು
೪. ಸರ್ವಸಿದ್ಧಿಪ್ರದಾಯಕ ಸ್ತೋತ್ರ - ೬೧ ನುಡಿಗಳು
೫. ಅನಂತಪದ್ಮನಾಭ ಕಥಾಸಾರ - ೩೬ ಷಟ್ಪದಿಗಳು
೬. ಕಾಣೆನಿಂಥ ಕರುಣ ಗುರುಗಳ - ೨೨ ನುಡಿಗಳು
೭. ಗೋವಿಂದ ಸ್ತುತಿ - ೧೦೮ ನುಡಿಗಳು
೮. ಶ್ರೀ ಹರಿ ಗುಣಮಾಲೆ - ೧೭೩ ನುಡಿಗಳು
೯. ಗುರು ಕವಚ - ೧೪೫ ನುಡಿಗಳು
೧೦. ನೃಸಿಂಹ ಸ್ತೋತ್ರ - ೫೯ ನುಡಿಗಳು
೧೧. ಸೀತಾಪತಿವಿಠಲ ದಾಸಳ ನಿರ್ಯಾಣಪದ - ೪೩ ನುಡಿಗಳು
೧೨. ವೆಂಕಟೇಶ ಸ್ತೋತ್ರ ೧ - ೨೪ ನುಡಿಗಳು
೧೩. ವೆಂಕಟೇಶ ಸ್ತೋತ್ರ ೨ - ೨೬ ನುಡಿಗಳು
೧೪. ತತ್ವಸಾರಾಮೃತ - ೩೬೨ ನುಡಿಗಳು
೧೫. ಭಾಗವತ ಸಾರೋದ್ಧಾರ
*(ವಿಷ್ಣುತೀರ್ಥರ ಸಂಸ್ಕೃತ ಕೃತಿಯ ಕನ್ನಡರೂಪ)* - ೩೦೦ ಸಾಂಗತ್ಯಗಳು
೧೬. ಚಾಮುಂಡಿ ಸ್ತುತಿ - ೨೦೦ ಷಟ್ಪದಿಗಳು
೧೭. ರಾಮಕಥಾಮೃತ ಕಾವ್ಯ - ೨೫೧೬ ನುಡಿಗಳು

ಅಂಬಾಬಾಯಿ ತಾವು ಹೋದಲೆಲ್ಲಾ ಹೆಣ್ಣು ಮಕ್ಕಳಿಗೆ ಹಾಡುಗಳನ್ನು ಹೇಳಿಕೊಡುವುದರ ಜೊತೆಗೆ ತಾವೇ ಬರೆದ ರಾಮಾಯಣದ ಸುಂದರ ಕಾಂಡವನ್ನು ಹಾಡಿ ಪ್ರವಚನ ಮಾಡುತ್ತಿದ್ದರು. ಎಷ್ಟೋ ಮಂದಿ ಗೃಹಿಣಿಯರು ತಮ್ಮ ಮನೆಗಳಿಗೆ ಕರೆಸಿಕೊಂಡು ಸುಂದರಕಾಂಡದ ಪ್ರವಚನ ಸಪ್ತಾಹಗಳನ್ನು ಏರ್ಪಡಿಸುತ್ತಿದ್ದರು. ಅಂಬಾಬಾಯಿಯವರಿಂದ ಸುಂದರಕಾಂಡ ಹೇಳಿಸಿದರೆ ಮನೆಗೆ ಶುಭವಾಗುತ್ತದೆ ಎಂಬ ನಂಬಿಕೆ ಆಕೆ ಬದುಕಿದ್ದಾಗಲೇ ಪ್ರಚಲಿತವಾಗಿತ್ತು. ಗುರುಗಳ ಶಿಷ್ಯವಲಯದಲ್ಲಿ ಆಕೆ ಸುಂದರಕಾಂಡದ ಅಂಬಾಬಾಯಿ ಎಂದೇ ಪರಿಚಿತರಾಗಿದ್ದರು.

ತೀರ್ಥಯಾತ್ರೆ ಮಾಡುವುದು ಅಂಬಾಬಾಯಿಯವರಿಗೆ ಪ್ರಿಯವಾದ ಸಂಗತಿಯಾಗಿತ್ತು. 'ಗೆಜ್ಜೆಕಾಲಿಗೆ ಕಟ್ಟಿ, ತಾಳವ ಲಜ್ಜೆಯ ತೊರೆದು ಬಾರಿಸುತ, ಮೂರ್ಜಗದೊಡೆಯ ಜಗಜನ್ಮಾದಿ ಕಾರಣನೆಂದು ಗರ್ಜಿಸುತಲಿ ಸಂಚಾರ ಮಾಳ್ಪುದು' ಅವರಿಗೆ ಪ್ರಿಯವಾದ ವೃತ್ತಿ. ದುಷ್ಟ ಮನಸ್ಸಿನ ಕಲ್ಮಶವನ್ನು ಕಳೆದು ಶಿಷ್ಟ ಜನರ ಸಹವಾಸದಲ್ಲಿ ಸೃಷ್ಟಿಕರ್ತನ ಭಜನೆ ಮಾಡುತ್ತ ಕಷ್ಟಗಳನ್ನು ಈಡಾಡಲು ತೀರ್ಥಯಾತ್ರೆಯ ಮಾರ್ಗವನ್ನು ಕಂಡುಕೊಂಡರು. ತೀರ್ಥಯಾತ್ರೆಯನ್ನು ಅವರು ವಿಜಯಯಾತ್ರೆ ಎಂದೇ ಕರೆಯುತ್ತಿದ್ದರು. ಗುರುಗಳ ಅನುಮತಿಯನ್ನು ವಿಧಿವತ್ತಾಗಿ ಸ್ವೀಕರಿಸಿ ತಮ್ಮ, ತಂಗಿಯರಿಗೆ ತಿಳಿಸಿ ಅವರು ಕೊಟ್ಟ ಅಲ್ಪಸ್ವಲ್ಪ ಹಣದೊಂದಿಗೆ ಪ್ರಯಾಣ ಬೆಳೆಸುತ್ತಿದ್ದರು. ತಂಗಿಗೆ, ನಾದಿನಿಗೆ ಬಾಣಂತನಗಳನ್ನು ಮಾಡಿದಾಗ ಅವರು ಪ್ರೀತಿಯಿಂದ ಸೀರೆ ಕೊಡಿಸುತ್ತೇವೆ ಎಂದರೆ ಬೇಡ ಅದರ ಬದಲು ಹಣವನ್ನೇ ಕೊಡಿ ಎಂದು ಅಲ್ಪ ಹಣವನ್ನು ಪಡೆದು ತಿಂಗಳುಗಟ್ಟಳೆ ತೀರ್ಥಯಾತ್ರೆಗೆ ಹೋಗುತ್ತಿದ್ದರು. ತೀರ್ಥಯಾತ್ರೆಗೆ ಹೊರಡುವ ಮುನ್ನ ಗುರುಗಳಿಂದ ಅನುಮತಿ ಪಡೆದ ಸಂದರ್ಭವೊಂದರ ಉಲ್ಲೇಖ ಹೀಗಿದೆ: (ದಿನಚರಿಯಿಂದ)

'ಶಾಲಿವಾಹನ ಶಕ ೧೮೬೦ ಬಹುಧಾನ್ಯ ಸಂವತ್ಸರ ಕಾರ್ತೀಕ ಶುದ್ಧನವಮಿ ಬುಧವಾರ. ಉದಯ ಕಾಲದಲ್ಲಿ ಶ್ರೀ ಹರಿ ಗುರು ಸ್ಮರಣಪೂರ್ವಕವಾಗಿ ಎದ್ದು, ಶ್ರೀ ಗುರುದಂಪತಿಗಳಿಗೆ ನಮಸ್ಕರಿಸಿ ಎರಡು ದೇವರ ನಾಮ ರಚನೆ. ಅನಂತರ ಸ್ನಾನ ದೇವರಪೂಜೆ ನೇವೇದ್ಯ ಆದ ತರುವಾಯ ದಾಸತ್ವದ ಸಾಮಗ್ರಿಗಳು ಎಂದರೆ ಅಕ್ಷಯಪಾತ್ರೆ, ಕೋಲು, ತಾಳ, ಗೆಜ್ಜೆ ಇವುಗಳಿಗೆ ಶ್ರೀ ವಿಜಯದಾಸರ ಫೋಟೋಕ್ಕೆ ಪೂಜಾದಿಗಳು. ಶ್ರೀ ಗುರುದಂಪತಿಗಳಿಗೆ ಪೂಜಾದಿಗಳು. ನಂತರ ಈ ದಾಸತ್ವದ ಪದಾರ್ಥಗಳನ್ನು ಶ್ರೀ ಗುರುಗಳಿಂದ ಸ್ವೀಕಾರ. ನಂತರ ಹೊಸದಾಗಿ ರಚಿಸಿದ ದೇವರನಾಮಗಳನ್ನು ಶ್ರೀ ಗುರುಗಳಿಗೆ ಪಠಣದಿಂದ ಸಮರ್ಪಣೆ. ಶ್ರೀ ಗುರುದಂಪತಿಗಳಿಂದಲೂ ಮಿಕ್ಕಾದವರಿಂದಲೂ ಗೋಪಾಳ ಸ್ವೀಕಾರ. ಸಂಚಾರ ಹೊರಡಲು ಶ್ರೀ ಗುರುಗಳಲ್ಲಿ ಆಜ್ಞಾಸ್ವೀಕಾರ, ನಂತರ ಗುರುಗಳಾದಿಯಾಗಿ ಸರ್ವರ ಭೋಜನ. ನಂತರ ನಿತ್ಯಾನಂದರು, ರಮಾಕಾಂತರು ತಂತಮ್ಮ ಊರಿಗೆ ಪ್ರಯಾಣ. ಸಾಯಂಕಾಲ ಏಳು ಗಂಟೆಗೆ ಪ್ರಯಾಣ ಸಿದ್ಧತೆ. ಶ್ರೀ ಗುರುದಂಪತಿಗಳಿಗೆ

ತೀರ್ಥಯಾತ್ರೆ ಮಾಡುವುದು ಅಂಬಾಬಾಯಿಯವರಿಗೆ ಪ್ರಿಯವಾದ ಸಂಗತಿಯಾಗಿತ್ತು. 'ಗೆಜ್ಜೆಕಾಲಿಗೆ ಕಟ್ಟಿ, ತಾಳವ ಲಜ್ಜೆಯ ತೊರೆದು ಬಾರಿಸುತ, ಮೂರ್ಜಗದೊಡೆಯ ಜಗಜನ್ಮಾದಿ ಕಾರಣನೆಂದು ಗರ್ಜಿಸುತಲಿ ಸಂಚಾರ ಮಾಳ್ಪುದು' ಅವರಿಗೆ ಪ್ರಿಯವಾದ ವೃತ್ತಿ. ದುಷ್ಟ ಮನಸ್ಸಿನ ಕಲ್ಮಶವನ್ನು ಕಳೆದು ಶಿಷ್ಟ ಜನರ ಸಹವಾಸದಲ್ಲಿ ಸೃಷ್ಟಿಕರ್ತನ ಭಜನೆ ಮಾಡುತ್ತ ಕಷ್ಟಗಳನ್ನು ಈಡಾಡಲು ತೀರ್ಥಯಾತ್ರೆಯ ಮಾರ್ಗವನ್ನು ಕಂಡುಕೊಂಡರು. ತೀರ್ಥಯಾತ್ರೆಯನ್ನು ಅವರು ವಿಜಯಯಾತ್ರೆ ಎಂದೇ ಕರೆಯುತ್ತಿದ್ದರು. ಗುರುಗಳ ಅನುಮತಿಯನ್ನು ವಿಧಿವತ್ತಾಗಿ ಸ್ವೀಕರಿಸಿ ತಮ್ಮ, ತಂಗಿಯರಿಗೆ ತಿಳಿಸಿ ಅವರು ಕೊಟ್ಟ ಅಲ್ಪಸ್ವಲ್ಪ ಹಣದೊಂದಿಗೆ ಪ್ರಯಾಣ ಬೆಳೆಸುತ್ತಿದ್ದರು. ತಂಗಿಗೆ, ನಾದಿನಿಗೆ ಬಾಣಂತನಗಳನ್ನು ಮಾಡಿದಾಗ ಅವರು ಪ್ರೀತಿಯಿಂದ ಸೀರೆ ಕೊಡಿಸುತ್ತೇವೆ ಎಂದರೆ ಬೇಡ ಅದರ ಬದಲು ಹಣವನ್ನೇ ಕೊಡಿ ಎಂದು ಅಲ್ಪ ಹಣವನ್ನು ಪಡೆದು ತಿಂಗಳುಗಟ್ಟಳೆ ತೀರ್ಥಯಾತ್ರೆಗೆ ಹೋಗುತ್ತಿದ್ದರು. ತೀರ್ಥಯಾತ್ರೆಗೆ ಹೊರಡುವ ಮುನ್ನ ಗುರುಗಳಿಂದ ಅನುಮತಿ ಪಡೆದ ಸಂದರ್ಭವೊಂದರ ಉಲ್ಲೇಖ ಹೀಗಿದೆ: (ದಿನಚರಿಯಿಂದ)

'ಶಾಲಿವಾಹನ ಶಕ ೧೮೬೦ ಬಹುಧಾನ್ಯ ಸಂವತ್ಸರ ಕಾರ್ತೀಕ ಶುದ್ಧನವಮಿ ಬುಧವಾರ. ಉದಯ ಕಾಲದಲ್ಲಿ ಶ್ರೀ ಹರಿ ಗುರು ಸ್ಮರಣಪೂರ್ವಕವಾಗಿ ಎದ್ದು, ಶ್ರೀ ಗುರುದಂಪತಿಗಳಿಗೆ ನಮಸ್ಕರಿಸಿ ಎರಡು ದೇವರ ನಾಮ ರಚನೆ. ಅನಂತರ ಸ್ನಾನ ದೇವರಪೂಜೆ ನೇವೇದ್ಯ ಆದ ತರುವಾಯ ದಾಸತ್ವದ ಸಾಮಗ್ರಿಗಳು ಎಂದರೆ ಅಕ್ಷಯಪಾತ್ರೆ, ಕೋಲು, ತಾಳ, ಗೆಜ್ಜೆ ಇವುಗಳಿಗೆ ಶ್ರೀ ವಿಜಯದಾಸರ ಫೋಟೋಕ್ಕೆ ಪೂಜಾದಿಗಳು. ಶ್ರೀ ಗುರುದಂಪತಿಗಳಿಗೆ ಪೂಜಾದಿಗಳು. ನಂತರ ಈ ದಾಸತ್ವದ ಪದಾರ್ಥಗಳನ್ನು ಶ್ರೀ ಗುರುಗಳಿಂದ ಸ್ವೀಕಾರ. ನಂತರ ಹೊಸದಾಗಿ ರಚಿಸಿದ ದೇವರನಾಮಗಳನ್ನು ಶ್ರೀ ಗುರುಗಳಿಗೆ ಪಠಣದಿಂದ ಸಮರ್ಪಣೆ. ಶ್ರೀ ಗುರುದಂಪತಿಗಳಿಂದಲೂ ಮಿಕ್ಕಾದವರಿಂದಲೂ ಗೋಪಾಳ ಸ್ವೀಕಾರ. ಸಂಚಾರ ಹೊರಡಲು ಶ್ರೀ ಗುರುಗಳಲ್ಲಿ ಆಜ್ಞಾಸ್ವೀಕಾರ, ನಂತರ ಗುರುಗಳಾದಿಯಾಗಿ ಸರ್ವರ ಭೋಜನ. ನಂತರ ನಿತ್ಯಾನಂದರು, ರಮಾಕಾಂತರು ತಂತಮ್ಮ ಊರಿಗೆ ಪ್ರಯಾಣ. ಸಾಯಂಕಾಲ ಏಳು ಗಂಟೆಗೆ ಪ್ರಯಾಣ ಸಿದ್ಧತೆ. ಶ್ರೀ ಗುರುದಂಪತಿಗಳಿಗೆ

ನಮಸ್ಕರಿಸಿ ಅಪರಾಧ ಕ್ಷಮಾಪಣೆ. ಶ್ರೀ ಗುರುಗಳಿಂದ ಫಲ ಮಂತ್ರಾಕ್ಷತೆ. ಮೂಲಧನ ಅಭಯಪ್ರಧಾನ ಸ್ವೀಕಾರ. ರಾತ್ರಿ ೮ ಘಂಟೆಗೆ ವಿಜಯ ಪ್ರಯಾಣ'

## ದಿನಚರಿಯಿಂದ ಒಂದೆರಡು ಉಲ್ಲೇಖಗಳು

### ೧ (ತಾ|| ೧೨-೧೧-೧೯೩೮ ಸ್ಥಿರವಾರ. ಸ್ಥಳ: ಆನುಗೋಡು)

ಕಾರ್ತೀಕ ಬಹುಳ ಪಂಚಮಿ ಪ್ರಾತಃ ನಿಯಮ. ಗೋಪಾಳ ವೃತ್ತಿ ಆರು ಮನೆ. ಪ್ರಾಣದೇವರ ದರ್ಶನ. ಮನೆಗೆ ಬಂದು ಅಕ್ಷಯ ಪಾತ್ರೆಗೆ ಮಂಗಳಾರತಿ. ಏನಾದರೂ ವಿಚಾರಗಳು, ಮಾತುಕತೆಗಳು, ಸ್ನಾನ ಅಹ್ನೀಕಾದಿ ಗೋಪಾಲಕೃಷ್ಣನ ಪೂಜಾದಿಗಳು. ಊಟ, ಸಾಯಂಕಾಲದ ಭಜನೆ. ಆಲೂರು ಶೇಷಣ್ಣನವರು, ಶ್ರೀ ರಂಗಮೂರ್ತಿವಿಠಲರು ಆನಂದರಸಪೂರ್ಣ ಇವರುಗಳು. ರಾತ್ರೆ ಬಹಳ ಹೊತ್ತು ಮಾತುಕತೆಗಳು - ದಾಸರುಗಳ ವಿಚಾರಗಳು ತತ್ವ ವಿಚಾರಗಳು - ನಿದ್ರೆ.

### ೨ (ತಾ|| ೧೨-೧೨-೧೯೩೮ ಸೋಮವಾರ ಸ್ಥಳ: ಹಾವೇರಿ)

ಪ್ರಾತಃ ನಿಯಮ ಗೋಪಾಳಕ್ಕೆ ಹೋಗಿದ್ದಾಗ ಕದರುಮಂಡಲಗಿಯಲ್ಲಿ ಕಂಡಿದ್ದ ಕೇಶವಾಚಾರ್ಯರು ಒಬ್ಬರ ಮನೆಯಲ್ಲಿದ್ದರು. ಒಳಗೆ ಬನ್ನಿ ಎಂದರು. ಈ ದಿನ ಊಟಕ್ಕೆ ಏನು ಮಾಡಬೇಕು ಎಂದು ವಿಚಾರಿಸಲು ನಮ್ಮ ತಂಗಿ ಮನೆಗೆ ಬನ್ನಿ ಎಂದರು. ಅಲ್ಲಿಂದ ಶ್ರೀನಿವಾಸದೇವರ ಅಗ್ರಹಾರದಲ್ಲಿ ಒಬ್ಬರು ಪರಮಾದರದಿಂದ ಇನ್ನೊಂದು ದೇವರನಾಮ ಹೇಳಿಸಿ ಒಂದು ಪಾವು ಅಕ್ಕಿ ಒಂದಾಣೆ ಕೊಟ್ಟರು... ಶ್ರೀನಿವಾಸ ದೇವರ ಗುಡಿಯಲ್ಲಿ ಭಜನೆ. ಆ ವಠಾರದವರೆಲ್ಲ ಬಂದು ಕುಳಿತಿದ್ದರು. ದೇವಸ್ಥಾನದ ಬಾಗಿಲು ತೆಗೆದು ಮಂಗಳಾರತಿಯಾಯಿತು. ಭಜನೆ ಮುಗಿಯಿತು. ಅನಂತರ ಒಬ್ಬ ಮುತ್ತೈದೆ ಮನೆಗೆ ಕರೆದುಕೊಂಡು ಹೊಗಿ ಮೊಸರು ಅವಲಕ್ಕಿ ಕೊಟ್ಟರು. ಇನ್ನೊಬ್ಬರು ಕರೆದುಕೊಂಡು ಹೋಗಿ ಸ್ವಯಂಪಾಕ, ಅರಳು, ಮೂರು ಕಾಸು ಕೊಟ್ಟರು. ರಾತ್ರಿ ಪುನಃ ನಾಲ್ಕು ದೇವರನಾಮ ಬರೆದದ್ದು - ನಿದ್ರಾದಿಗಳು.

೩. (ತಾ॥ ೩೧-೧೨-೧೯೩೯ ಶನಿವಾರ ನವಮಿ. ಸ್ಥಳ: ಸವಣೂರು)

ಪ್ರಾತಃ ನಿಯಮ ಗೋಪಾಳ. ಒಬ್ಬರ ಮನೆಯೊಳಕ್ಕೆ ಕರೆದು ದೇವರನಾಮ ಹೇಳಿಸಿದರು. ಬೆಳಗಾವಿಗೆ ಮೋಟಾರಿಗೆ ಕಳುಹಿಸುತ್ತೇವೆಂದರು. ಗೋಪಾಳದಲ್ಲಿ ಒಂದೂವರಾಣೆ ಬಂದಿತು. ಮೂರು ಕಾಸಿಗೆ ಬಾಳೆಹಣ್ಣು ತಂದೆ ಶ್ರೀನಿವಾಸನ ಪೂಜೆಗೆ. ನಂತರ ಸ್ನಾನ, ಶ್ರೀನಿವಾಸನ ಪೂಜೆ ಸ್ತೋತ್ರಾದಿಗಳು ನಡೆಯಿತು. ಪುಟ್ಟಕ್ಕ ಅಡಿಗೆ ಮಾಡಿ ಬಡಿಸಿದರು. ಊಟಾದ ನಂತರ ಪುಟ್ಟಕ್ಕನ ಮನೆಗೆ ಹೊಗಿ ಬಾಲಲೀಲೆ ಹಾಡು ಹೇಳಿದ್ದು. ಎಲ್ಲರೂ ಬಂದಿದ್ದರು. ನಂತರ ಬಂಡೆರಾಯರನ್ನು ಶೇಷಾಚಾರ್ರು ಬೊಧರಾಯನನ್ನು ನೋಡಿಕೊಂಡು ಬಂದದ್ದು. ಮಾಧ್ವಭಜನೆ ಪುಸ್ತಕ ಒಂದು ಕೊಟ್ಟರು. ರಾತ್ರೆ ಭಜನೆ. ಫಲಹಾರ – ನಿದ್ರೆ.

ಮೇಲಿನ ಮೂರು ಉದಾಹರಣೆಗಳಿಂದ ಅಂಬಾಬಾಯಿಯವರ ದೈನಂದಿನ ಜೀವನಕ್ರಮ ಹೇಗಿತ್ತು ಎನ್ನುವುದನ್ನು ಊಹಿಸಬಹುದು.

ಇವರ ತೀರ್ಥಯಾತ್ರೆಯ ಏರ್ಪಾಡುಗಳೂ ಸಹಾ ಬಹಳ ಸರಳ. ದೇವಾಲಯದ ಕಟ್ಟೆಗಳ ಮೇಲೆ ವಾಸ್ತವ್ಯ. ಗೋಪಾಳದಲ್ಲಿ ಬಂದ ಅಕ್ಕಿ ಮತ್ತಿತರ ವಸ್ತುಗಳಿಂದ ಯಾರಾದರೂ ಗೃಹಸ್ಥರ ಮನೆಯಲ್ಲಿ ಸ್ವಯಂಪಾಕ. ದೇವಾಲಯದ ಹೊರಗೆ ಕುಳಿತು ಹಾಡಲು ತೊಡಗಿದರೆ ಆ ಹಾಡಿನ ಸಾಹಿತ್ಯಕ್ಕೆ, ಚಂದಕ್ಕೆ ಹೆಂಗೆಳೆಯರು ಬೆರಗಾಗುತ್ತಿದ್ದರು. ಯಾವ ದಾಸರ ಹಾಡು ಇದು ನಮಗೂ ಬರೆದುಕೊಡಿ ಎಂದು ಬೇಡಿಕೆಗಳು ಬರುತ್ತಿದ್ದವು. ತಾನೇ ಬರೆದದ್ದು ಎಂದು ಎಲ್ಲಿಯೂ ಹೇಳದೆ ಗೋಪಾಲಕೃಷ್ಣವಿಠಲದಾಸರದೆಂದು ಹೇಳಿ ಒಂದು ಹಾಡು ಕೇಳಿದವರಿಗೆ ನಾಲ್ಕು ಹಾಡು ಬರೆದು ಕೊಡುತ್ತಿದ್ದರು. ಬಿಳಿ ಹಾಳೆ ಲೇಖನಿಗಳನ್ನು ಸದಾ ಜೊತೆಯಲ್ಲಿಯೇ ತೆಗೆದುಕೊಂಡು ಹೊಗುತ್ತಿದ್ದರು. ಹಾಡನ್ನು ಕೇಳಿದವರು ಒಂದಷ್ಟು ಚಿಲ್ಲರೆ ನೀಡಿದರೆ ಅದೇ ಅವರ ತೀರ್ಥಯಾತ್ರೆಗೆ ಮೂಲಧನ. ತಮ್ಮ ಹೆಸರನ್ನು ಅಜ್ಞಾತವಾಗಿ ಉಳಿಸಿ ಕೃತಿಗಳನ್ನು ಮಾತ್ರ ಪ್ರಸಾರ ಮಾಡುತ್ತಿದ್ದ ಅವರ ಕಾರ್ಯವೈಖರಿ ನಿಜಕ್ಕೂ ಅಪೂರ್ವ.

ಅಂಬಾಬಾಯಿಯವರ ಸಾಹಿತ್ಯದ ಬಹುಪಾಲು ತೀರ್ಥಯಾತ್ರೆಯ ಸಂದರ್ಭದಲ್ಲಿ ರಚಿತವಾದ ಕೀರ್ತನೆಗಳೇ ಆಗಿವೆ. ಕರಿಗಿರಿ, ಕದಿರುಂಡಲಗಿ, ತಿರುಪತಿ, ಉಡುಪಿ, ಪಂಡರಾಪುರ, ಮಂತ್ರಾಲಯ, ಹಂಪೆ, ಸವಣೂರು, ರಿತ್ತಿ, ಭದ್ರಾವತಿ, ಮೊದಲ ಘಟ್ಟ, ಸಾಗರಕಟ್ಟೆ, ಈ ಕ್ಷೇತ್ರಗಳಲ್ಲಿ ಹಲವಾರು ದಿನ ನೆಲೆಸಿ ತಮ್ಮ ಎಲ್ಲ ಕಷ್ಟಗಳನ್ನು ಇಷ್ಟ ದೇವತೆಗಳ ಬಳಿ ನಿವೇದಿಸಿಕೊಂಡಿದ್ದಾರೆ. ತಾವು ಕಂಡ ದಿವ್ಯ ಮೂರ್ತಿಗಳ ಸಾಲಂಕೃತ ಚಿತ್ರ ನೀಡಿದ್ದಾರೆ. ಉತ್ಸವ, ಪೂಜೆ, ಮೊದಲಾದ ಸಂಪ್ರದಾಯಗಳನ್ನು ವಿವರವಾಗಿ ಬಣ್ಣಿಸಿದ್ದಾರೆ.

ಬದುಕಿನ ಎಲ್ಲ ಭದ್ರತೆಗಳನ್ನು ಕಳೆದುಕೊಂಡು ಹತಾಶಳಾಗಿ ಪರಿತಪಿಸುತ್ತಿದ್ದ ಅಂಬಾಬಾಯಿಯವರಿಗೆ ದಾಸಪಂಥದ ಬೆಳಕು ತೋರಿಸಿ ಮಾರ್ಗದರ್ಶನ ಮಾಡಿದವರು ತಂದೆ ಮುದ್ದುಮೋಹನದಾಸರು. ತಮ್ಮ ಗುರುಗಳ ಕರುಣೆ, ಅಪಾರ ವಿದ್ವತ್ತು, ವಾಕ್ಸರಣಿ, ಗುಪ್ತಮಹಿಮೆ, ಶಾಂತಸ್ವಭಾವ, ತತ್ವಾರ್ಥ ಬೋಧನೆ, ಹರಿದಾಸ ನಿಷ್ಠೆ ಇವು ಅಂಬಾಬಾಯಿಯವರ ಮೇಲೆ ಅಪಾರ ಪ್ರಭಾವ ಬೀರಿದ್ದುವು. ಈ ಎಲ್ಲವನ್ನೂ ಅವರು ಮತ್ತೆ ಮತ್ತೆ ತಮ್ಮ ಗುರುಸ್ತುತಿಗಳಲ್ಲಿ ನಿರೂಪಿಸಿದ್ದಾರೆ. ತಂದೆ ಮುದ್ದುಮೋಹನದಾಸರೊಬ್ಬರನ್ನು ಕುರಿತೇ ಅಂಬಾಬಾಯಿಯವರು ಸಮಾರು ೫೦ ಕೃತಿಗಳನ್ನು ರಚಿಸಿದ್ದಾರೆ. ಇದನ್ನು ಗಮನಿಸಿದರೆ ಗುರುಗಳ ಬಗ್ಗೆ ಅವರಿಗಿದ್ದ ಅಪಾರ ಭಕ್ತಿಯ ಸ್ವರೂಪವನ್ನು ಅರಿಯಬಹುದು. ತಂದೆ ಮುದ್ದು ಮೋಹನದಾಸರ ಜೀವನ ಚರಿತ್ರೆಯನ್ನು ರಚಿಸಲು ಆಕರವಾಗಬಲ್ಲ ಅಮೂಲ್ಯ ಮಾಹಿತಿಗಳು ಈ ಕೀರ್ತನೆಗಳಲ್ಲಿವೆ. 'ತೋರೆನಗೆ ಶ್ರೀ ಕೃಷ್ಣ ತೋಯಜಾಂಬಕ' ಎಂಬ ೯ ನುಡಿಗಳ ಕೃತಿ (ಕೀ. ೧೮೨) ಮೇಲ್ನೋಟಕ್ಕೆ ಶ್ರೀ ಹರಿಯ ಸ್ತುತಿಮಾಲೆಯಂತೆ ಕಂಡರೂ ಇಲ್ಲಿರುವ ೧೬೧ ಹರಿನಾಮಗಳು ತಂದೆ ಮುದ್ದು ಮೋಹನದಾಸರು ತಮ್ಮ ಪ್ರಿಯ ಶಿಷ್ಯರಿಗೆ ನೀಡಿದ ಅಂಕಿತಗಳೇ ಆಗಿವೆ. ಈ ಎಲ್ಲ ಹರಿದಾಸರ ಪರಿಚಯವು ಅಂಬಾಬಾಯಿಯವರಿಗೆ ಇತ್ತು. ಇವರೆಲ್ಲರ ಹೆಸರು ಮತ್ತು ಅಂಕಿತಗಳನ್ನು ಅಂಬಾಬಾಯಿಯವರು ಪ್ರತ್ಯೇಕವಾಗಿ ದಾಖಲಿಸಿದ್ದಾರೆ. ಇವರಲ್ಲಿ ಒಬ್ಬಿಬ್ಬರನ್ನು ಬಿಟ್ಟರೆ ಉಳಿದವರೆಲ್ಲಾ ಅಜ್ಞಾತರಾಗಿಯೇ ಉಳಿದಿದ್ದಾರೆ. (ನೋಡಿ ಅನುಬಂಧ-೩)

೧೯೩೧ ರಿಂದ ೧೯೪೦ ರವರೆಗೆ ದಾಸತ್ವದಲ್ಲಿ ಬದುಕಿನ ಅರ್ಥವನ್ನು ಕಂಡುಕೊಂಡಿದ್ದ ಅಂಬಾಬಾಯಿಯವರಿಗೆ ಗುರುಗಳ ನಿಧನದಿಂದ ಚೇತರಿಸಿಕೊಳ್ಳಲಾಗದ ಆಘಾತ ಉಂಟಾಯಿತು. 'ಮತಿಧೃತಿಗಳು ನೆಲೆಗೆ ನಿಲ್ಲದಂತಾಯಿತು'. ಈ ಅಗಲಿಕೆಯ ನೋವಿನಿಂದ ದೂರವಾಗಲು ಅಂಬಾಬಾಯಿ ಹೆಚ್ಚು ಕಾಲವನ್ನು ತೀರ್ಥಯಾತ್ರೆಯಲ್ಲೇ ಕಳೆದರು. ಶ್ರೀರಂಗಪಟ್ಟಣ, ತಿರುಮಕೂಡಲು, ನಂಜನಗೂಡು, ಸಾಗರಕಟ್ಟೆಗಳಿಗೆ ಹಲವಾರು ಬಾರಿ ಹೋಗಿ ಬಂದರು. ಅದೊಂದು ಗೊತ್ತು ಗುರಿಯಿಲ್ಲದ ಓಡಾಟ. ನಲವತ್ತು ವಯಸ್ಸಿನ ಈ ವಿರಾಗಿಣಿ ಸಂನ್ಯಾಸಿನಿಯಂತೆ ಊರೂರು ಅಲೆದಳು. ಈ ಸಂದರ್ಭದಲ್ಲಿ ಆಕೆ ಯಾವ ದಿನ ಎಲ್ಲಿ ಹೇಗೆ ತೀರಿಕೊಂಡಳು ಎಂಬುದು ಹತ್ತಿರದ ಸಂಬಂಧಿಗಳಿಗೂ ತಿಳಿಯಲಿಲ್ಲ. ಕಾವೇರಿ ನದಿಯಲ್ಲಿ ಸ್ನಾನ ಮಾಡುವಾಗ ಜಲಸಮಾಧಿಯಾದಳು ಎಂದು ಯಾರೋ ಹೇಳಿದ್ದನ್ನು ರಮಾಕಾಂತವಿಠಲರು, ನಿತ್ಯಾನಂದವಿಠಲರು ಸಂಬಂಧಿಗಳಿಗೆ ತಿಳಿಸಿದರು. ಕೇವಲ ನಲವತ್ತು ಮೂರು ವರ್ಷಗಳ ಜೀವಿತಾವಧಿಯಲ್ಲಿ ಹಲವು ಆಘಾತಗಳನ್ನು ಅನುಭವಿಸಿದ ಚೇತನ ಅಂಬಾಬಾಯಿ. ಒಂದೇ ದಿನ ಗಂಡನನ್ನೂ, ತಂದೆಯನ್ನೂ ಕಳೆದುಕೊಂಡಿದ್ದು ವಿಧಿ ಮಾಡಿದ ಅನ್ಯಾಯ, ಪುಟ್ಟ ವಿಧವೆಯನ್ನು ತೌರಿಗಟ್ಟಿ ಅನಾಥಳನ್ನಾಗಿ ಮಾಡಿದ್ದು ಅತ್ತೆ ಮನೆಯವರ ಅನ್ಯಾಯ, ಈ ಅನ್ಯಾಯಗಳಿಂದ ಬಿಡುಗಡೆಯಾಗಿ ನೋವನ್ನು ಮರೆಯಲು ಆಕೆ ತೀರ್ಥಯಾತ್ರೆಯನ್ನು ಆಶ್ರಯಿಸಿದರು. ಬದುಕಿಗೆ ಮುದ ನೀಡುತ್ತಿದ್ದ ತೀರ್ಥಯಾತ್ರೆ ಅವರ ಬದುಕಿಗೆ ಮುಳುವೂ ಆಯಿತು.

## ಕೃತಿಗಳು – ಕೀರ್ತನೆಗಳು

ತನ್ನ ೨೮ನೆಯ ವಯಸ್ಸಿನಲ್ಲಿ ಭಕ್ತಿ ಸಾಹಿತ್ಯ ರಚನೆಗೆ ಪ್ರಾರಂಭಿಸಿ ಅನಂತರ ಕೇವಲ ೧೦–೧೨ ವರ್ಷಗಳು ಮಾತ್ರ ಜೀವಿಸಿದ್ದ ಅಂಬಾಬಾಯಿಯವರು ರಚಿಸಿದ ಕೃತಿಗಳ ಸಂಖ್ಯೆ ಅಪಾರ. ಹಸ್ತಪ್ರತಿಗಳು ಎಲ್ಲೆಲ್ಲಿಯೋ ಹಂಚಿಹೋಗಿದ್ದು, ಈಕೆ ಅಜ್ಞಾತ ಕವಯತ್ರಿಯಾಗಿಯೇ ಉಳಿದಿದ್ದಾರೆ. 'ಪರಮಾರ್ಥ ಚಂದ್ರೋದಯ

ಪತ್ರಿಕೆ'ಯ ೧೯೪೦ ಕ್ಕಿಂತ ಹಿಂದಿನ ಸಂಚಿಕೆಗಳಲ್ಲಿ ಈಕೆಯ ಹಲವು ಕೀರ್ತನೆಗಳು ಪ್ರಕಟವಾಗಿವೆ. ಅಷ್ಟನ್ನು ಬಿಟ್ಟರೆ ಈಕೆಯ ಕೃತಿಗಳು ಮುದ್ರಣವನ್ನು ಕಾಣದೆ ಜನರ ಬಾಯಲ್ಲಿ ಉಳಿದದ್ದೇ ಹೆಚ್ಚು. ಈಕೆಯ ಕೀರ್ತನೆಗಳು ಅಂಕಿತ ಪಲ್ಲಟಗೊಂಡು ಬೇರೆ ಹರಿದಾಸರ ಹೆಸರಲ್ಲಿ ಪ್ರಸಿದ್ಧಿಯನ್ನೂ ಪಡೆದಿವೆ. ಗೋಪಾಲವಿಠಲ, ಗುರು ಗೋಪಾಲಕೃಷ್ಣವಿಠಲ, ಕೃಷ್ಣ ಗೋಪಾಲವಿಠಲ ಈ ಅಂಕಿತಸಾಮ್ಯದಿಂದಾಗಿ, ಅಂಕಿತ ಪಲ್ಲಟಗಳಿಂದಾಗಿ, ಅಂಬಾಬಾಯಿಯವರ ಹೆಸರು ಅಜ್ಞಾತವಾಗಿಯೇ ಉಳಿಯಿತು.

ಗೋಪಾಲಕೃಷ್ಣವಿಠಲ ಅಂಕಿತದಲ್ಲಿ ದೊರೆತಿರುವ ಅಂಬಾಬಾಯಿಯವರ ಕೀರ್ತನೆಗಳು ಸುಮಾರು ೩೦೦. ಇದರಲ್ಲಿ ಶ್ರೀಹರಿಯ ಸ್ತುತಿಗಳು ಅರ್ಧಭಾಗದಷ್ಟಿವೆ. ಕೃಷ್ಣನ ಬಾಲಲೀಲೆಗಳು, ತಿರುಪತಿಯ ಶ್ರೀನಿವಾಸನ ವೈಭವ, ಉಡುಪಿ ಕೃಷ್ಣನ ಚೆಲುವು, ಪಂಡರಾಪುರದ ಪಾಂಡುರಂಗನ ಭಕ್ತ ವಾತ್ಸಲ್ಯ, ಕರಿಗಿರಿ ನರಸಿಂಹನ ಕರುಣೆ, ಇವುಗಳನ್ನು ಮತ್ತೆ ಮತ್ತೆ ನಿರೂಪಿಸಿದ್ದಾರೆ. ಒಂದೊಂದೇ ನುಡಿಯಲ್ಲಿ ದಶಾವತಾರ ಸ್ತುತಿಗಳನ್ನು ಅಳವಡಿಸುವ ನೈಪುಣ್ಯತೆಯನ್ನು ಇವರ ಕೃತಿಗಳಲ್ಲಿ ಕಾಣಬಹುದು. ಈ ಕೀರ್ತನೆಗಳ ಬಹುಪಾಲು ತೀರ್ಥಕ್ಷೇತ್ರ ಸ್ತುತಿಗಳೇ ಆಗಿರುವುದು ಒಂದು ವೈಶಿಷ್ಟ್ಯ.

ಹನುಮ–ಭೀಮ–ಮಧ್ವ ಈ ಅವತಾರತ್ರಯಗಳ ಕಲ್ಪನೆಯ ಹಿನ್ನೆಲೆಯನ್ನು ಒಳಗೊಂಡ ಕೃತಿಗಳು ಸುಮಾರು ೩೦. ಅದರಲ್ಲೂ ಕದರುಮಂಡಲಗಿ ಹನುಮಂತ (ಕೀ. ೧೦೪, ೧೦೮, ೧೧೧, ೧೨೩, ೧೨೪) ಹಂಪೆಯ ಯಂತ್ರೋದ್ಧಾರ ಪ್ರಾಣದೇವರು ( ಕೀ. ೧೧೦, ೧೧೬, ೧೨೦, ೧೨೨), ಚಳ್ಳಕೆರೆ ಹನುಮಂತ (೧೧೩, ೧೧೪), ಬೆಳಗಾವಿಯ ವೀಣೆ ಧರಿಸಿದ ಹನುಮಂತ (೧೧೭, ೧೨೭), ಮೊದಲ ಘಟ್ಟದ ಹನುಮಂತ (೧೨೧, ೧೨೬), ಇವರ ಹಿರಿಮೆಯನ್ನು ಅನನ್ಯತೆಯಿಂದ ಕೊಂಡಾಡಿದ್ದಾರೆ. ಹನುಮನಾಗಿ ಮಾಡಿದ ರಾಮನ ಸೇವೆ, ಭೀಮನಾಗಿ ತೋರಿದ ಕೃಷ್ಣಭಕ್ತಿ, ಆನಂದತೀರ್ಥರಾಗಿ ಮಾಡಿದ ವೇದವ್ಯಾಸರ

ಸೇವೆ, ಇವುಗಳನ್ನು ಚಿತ್ರಿಸಿದ್ದಾರೆ. ಹನುಮಂತನ ನಿಷ್ಠೆ, ಮೌನ, ಸಾಮರ್ಥ್ಯ, ಯೋಗಸಿದ್ಧಿ, ಅಪರೋಕ್ಷ ಜ್ಞಾನ, ಧ್ಯಾನಮುದ್ರೆ, ಸತ್ವಗುಣ, ಸುಜ್ಞಾನ, ಇವು ಭೀಮ ಮತ್ತು ಆನಂದತೀರ್ಥರಲ್ಲೂ ಹರಿದು ಬಂದ ಹಿನ್ನೆಲೆಯಲ್ಲಿ ಅವತಾರತ್ರಯಗಳ ಚಿತ್ರಣವಿದೆ.

ಆನಂದತೀರ್ಥರಿಂದ ಪ್ರದ್ಯುಮ್ನತೀರ್ಥರವರೆಗೆ ರಚಿಸಲಾಗಿರುವ ೧೨ ಯತಿಸ್ತುತಿಗಳು, ೫೦ ಹರಿದಾಸ ಸ್ತುತಿಗಳು, ಒಂದು ರೀತಿಯಲ್ಲಿ ಪ್ರಶಸ್ತಿಪರವಾಗಿ ಗುರುಗಳ ಹಿರಿಮೆಯನ್ನು ನಿರೂಪಿಸುತ್ತವೆ. ಹರಿದಾಸ ಸ್ತುತಿಯ ಬಹುಪಾಲು ತಂದೆ ಮುದ್ದುಮೋಹನದಾಸರನ್ನು ಕುರಿತ ಸ್ತುತಿಗಳೇ ಆಗಿವೆ. ಆತ್ಮ ಶೋಧನೆ, ಲೋಕನೀತಿ, ತತ್ವನಿರೂಪಣೆ, ಕಥನಾತ್ಮಕ ಹಾಡುಗಳು, ವಿಶೇಷ ಸಂದರ್ಭದ ಹಾಡುಗಳು, ಲಕ್ಷ್ಮಿ, ಭಾರತಿ, ತುಳಸಿ ಮತ್ತು ನದೀ ದೇವತೆಗಳ ಸ್ತುತಿಗಳು ಹೀಗೆ ವ್ಯಾಪಕವಾದ ಕೀರ್ತನ ಸಾಹಿತ್ಯವನ್ನು ಅಂಬಾಬಾಯಿ ರಚಿಸಿದ್ದಾರೆ. ಶುದ್ಧವಾದ ಭಾಷೆ, ಲಯಜ್ಞಾನ ವಿವಿಧ ಛಂದೋರೂಪದ ಪರಿಚಯ, ಭಾರತ, ಭಾಗವತದ ಪುರಾಣಗಳ ಅಧ್ಯಯನದಿಂದ ಪಡೆದುಕೊಂಡ ಪುರಾಣಪ್ರಜ್ಞೆ, ನಿರೂಪಣಾ ಚಾತುರ್ಯ ಇವುಗಳಿಂದ ಅಂಬಾಬಾಯಿಯವರ ಕೃತಿಗಳು ವಿಶಿಷ್ಟತೆಯನ್ನು ಪಡೆದುಕೊಂಡಿವೆ.

ಹತ್ತೊಂಬತ್ತನೆಯ ಶತಮಾನದ ಹರಿದಾಸ ಸಾಹಿತ್ಯ ಸಂಗ್ರಹದಲ್ಲಿ ತೊಡಗಿದ್ದ ನನಗೆ ಅಂಬಾಬಾಯಿಯವರ ಕೃತಿಗಳು ಹಸ್ತಪ್ರತಿರೂಪದಲ್ಲಿ ದೊರೆತದ್ದು ೧೯೮೯ ರಲ್ಲಿ. ನಿತ್ಯಾನಂದವಿಠಲದಾಸರ ಕೃತಿಸಂಗ್ರಹವನ್ನು ನನ್ನ ಅಧ್ಯಯನಕ್ಕೆ ಬಳಸಿಕೊಳ್ಳಲು ಶ್ರೀಮತಿ ಶಾಂತಾನಾಗರಾಜ್ ಅವರು ನನಗೆ ನೀಡಿದರು. ಆ ಸಂಗ್ರಹದಲ್ಲಿದ್ದ ಅಂಬಾಬಾಯಿ ಅವರ ಕೃತಿಗಳನ್ನು ಅಭ್ಯಾಸಮಾಡಲು ಇದರಿಂದ ಸಾಧ್ಯವಾಯಿತು. ೨೦೦೧ ರಲ್ಲಿ ಅಂಬಾಬಾಯಿ ಅವರ ಶತಮಾನೋತ್ಸವದ ಸಂದರ್ಭದಲ್ಲಿ ಅವರ ಕೃತಿಗಳ ಬಗ್ಗೆ ಅಧ್ಯಯನ ಮಾಡುವ ಅವಕಾಶವನ್ನೂ ಶ್ರೀಮತಿ ಶಾಂತಾನಾಗರಾಜ್ ಅವರೇ ಒದಗಿಸಿಕೊಟ್ಟರು. ತಮ್ಮಲ್ಲಿದ್ದ ಎಲ್ಲ

ಹಸ್ತಪ್ರತಿಗಳನ್ನೂ ನೀಡಿ ಉಪಕರಿಸಿದ್ದಾರೆ. ಪ್ರೊ. ಜಿ. ಅಶ್ವತ್ಥನಾರಾಯಣ, ಶ್ರೀ ಎಸ್.ಜಿ. ರಾಮಚಂದ್ರರಾಯರು ಮತ್ತು ಡಾ. ಟಿ.ಎನ್. ನಾಗರತ್ನ ಅವರು ಹಲವು ರೀತಿಯಲ್ಲಿ ಮಾರ್ಗದರ್ಶನ ಮಾಡಿದ್ದಾರೆ. ಗೆಳೆಯರಾದ ಎಸ್. ಬಿಳಿಗಿರಿವಾಸನ್ ಮತ್ತು ಚಂದ್ರಶೇಖರ್ ಅವರು ಸಂಪಾದನ ಕಾರ್ಯದಲ್ಲಿ ನೆರವು ನೀಡಿದ್ದಾರೆ. ಇವರೆಲ್ಲರಿಗೂ ಕೃತಜ್ಞನಾಗಿದ್ದೇನೆ.

ಡಾ. ಅನಂತಪದ್ಮನಾಭರಾವ್.

# ಕೀರ್ತನೆಗಳ ಕ್ರಮಸೂಚಿ

## ಹರಿದಾಸರ ಸ್ತುತಿ

# ಅನುಬಂಧಗಳು

೧. ಕಠಿಣ ಶಬ್ದಗಳ ಅರ್ಥ

೨. ಟಿಪ್ಪಣಿಗಳು

೩. ತಂದೆ ಮುದ್ದುಮೋಹನದಾಸರು ನೀಡಿದ ಅಂಕಿತಗಳು

೪. ಕೀರ್ತನೆಗಳ ಅಕಾರಾದಿ

# ಅನುಬಂಧ-೧

## ಕಠಿಣ ಶಬ್ದಗಳ ಅರ್ಥ

| | |
|---|---|
| ಅಂಡ | ಮೊಟ್ಟೆ |
| ಅಂಡಜ | ಗರುಡ |
| ಅಂಡಜ ವಾಹನ | ಗರುಡವಾಹನ-ನಾದ ಶ್ರೀ ಹರಿ |
| ಅಂಭ್ರಣಿ | ವೇದಾಭಿಮಾನಿ ಲಕ್ಷ್ಮೀದೇವಿ |
| ಅಕ್ಲೇಶ | ದುಃಖ - ರಹಿತನಾದವನು |
| ಅಗ್ರಜ ಬಳ್ಳಾಪುರ | ದೊಡ್ಡ - ಬಳ್ಳಾಪುರ |
| ಅಘ | ಪಾಪ |
| ಅಜಸುತ | ನಾರದ |
| ಅಟ್ಟುಳಿ | ತೊಂದರೆ |
| ಅನನ | ನಾಶ |
| ಅಪರೋಕ್ಷಿ | ದೇವರನ್ನು ಪ್ರತ್ಯಕ್ಷವಾಗಿ ಕಾಣಬಲ್ಲವನು |
| ಅವಸರ | ಕಾರ್ಯ |
| ಅವಿಯೋಗಿ | ಅಗಲಿಕೆಯೇ ಇಲ್ಲದವ |
| ಆಲ್ಪರಿ | ಬೇಡು, ಅಂಗಲಾಚು |
| ಇಂಗಡಲು | ಕ್ಷೀರ ಸಾಗರ |
| ಇಂಗಡಲಳಿಯ | ಶ್ರೀ ಹರಿ |
| ಇಂದಭಾಗೆ | ಚಂದ್ರಭಾಗಾ ನದಿ |
| ಇತ್ತಂಡ | ಎರಡೂ ಪಕ್ಕ |
| ಉರ್ವಿ | ಭೂಮಿ |
| ಏಕ ಚತುರ ನವಗ್ರಂಥ | ೧+(೪x೮)= ೩೩ ಗ್ರಂಥ |
| ಏಕ ವಿಶಂತಿ ಮತ | ೨೧ ಭಾಷ್ಯಗಳು |
| ಓಜೆ | ಕ್ರಮ, ರೀತಿ |
| ಓಲಗ | ಸೇವೆ |
| ಕಂಜ | ತಾವರೆ |
| ಕಂಜ ಸಖ | ಸೂರ್ಯ |
| ಕಂಜ ಸಖ ಸೂನು | ಸುಗ್ರೀವ |
| ಕಂತು | ಮನ್ಮಥ |
| ಕಂತು ಜನಕ | ಶ್ರೀ ಹರಿ |
| ಕಟಕ | ಚಿನ್ನ |
| ಕಟಕಮಕುಟ | ಬಂಗಾರದ ಕಿರೀಟ |
| ಕನಕ ಕಶ್ಯಪ | ಹಿರಣ್ಯ ಕಶಿಪು |
| ಕನಕನಯನ | ಹಿರಣ್ಯಾಕ್ಷ, ಕನಕಾಕ್ಷ |
| ಕಮನೀಯ | ಸುಂದರ |
| ಕವಿಗೇಯ | ಜ್ಞಾನಿಗಳಿಂದ ಸ್ತುತ್ಯನಾದವನು |

## ಗಣಪತಿ

### ೧

ಗಜಮುಖ ನಿನ್ನನು ಭಜಿಸುವೆ ಸತತದಿ
ನಿಜಮತಿಯನೆ ನೀಡೊ ಪ.

ಭುಜಗ ಭೂಷಣಸುತ ರಜತಮ ಕಳೆಯುತ
ಗಜವರದನ ತೋರೊ ಅ.ಪ.

ಮೋದಕಪ್ರಿಯನೆ ಆದರದಲಿ ನಿನ್ನ
ಪಾದಕೆ ಎರಗುವೆನೊ
ನೀ ದಯದಲಿ ಹರಿ ವಿಶ್ವರೂಪವ ನಿನ್ನ
ಹೃದಯದಿ ತೋರೋ ೧

ಸೊಂಡಿಲ ಗಣಪನೆ ಹಿಂಡು ದೈವಗಳಿಗೆ
ಇಂದು ಪ್ರಥಮ ನೀನೆ
ಕಂಡಮಾತ್ರ ನಿನ್ನ ವಿಘ್ನಗಳೆಲ್ಲವು
ಬೆಂಡಾಗುವುದಿನ್ನೆ ೨

ಅಂಬರದಭಿಮಾನಿಯೆ ಸತತದಿ ಹರಿ
ಹಂಬಲ ನೀ ನೀಡೋ
ಕುಂಭಿಣೀಶ ಗೋಪಾಲಕೃಷ್ಣ
ವಿಠ್ಠಲನ ಮನದಿ ತೋರೋ ೩

## ಶ್ರೀ ಹರಿ

### ೨

ಅಕ್ಕೋರಂಗ ನೋಡೆ ಇಕ್ಕೋ ಕೃಷ್ಣನೋಡೆ
ತಕ್ಕಥೈ ಎಂದೀಗೆ ಸಿಕ್ಕಿದ ನಮ್ಮ ಕೈಗೆ ಪ.

ಕುರುಳು ಕುಂತಳದಿಂದ ಕಸ್ತುರಿ ತಿಲುಕ ಚಂದ
ಪರಮ ಪುರುಷ ಬಂದ ನೀಲ ವರ್ಣ ನಂದ ೧

ಮುಗುಳು ನಗೆಯ ಕಾಂತಿ ಚಂದ್ರನುದಯ ಭ್ರಾಂತಿ
ಸೊಗಸು ನೋಡಲೆ ಕಾಂತೆ ಸೆಳೆವ ಮನವ ಶಾಂತೆ ೨

ಬಾರೋ ಬಾ ಗೋಪಾಲಕೃಷ್ಣವಿಠ್ಠಲ ಜಾಲ
ತೋರುವ ನೋಡೆ ಬಾಲೆ ಸೇರೋಣ ಬಾ ಸುಶೀಲೆ ೩

### ೩

ಆನಂದಾದ್ರಿ ಕ್ಷೇತ್ರದಲ್ಲಿ
ಆನಂದವ ಕಂಡೆ ಪ.

ಆನಂದ ಕಂದನ ಗುಣಗಳ
ಆನಂದನಿಲಯರು ಪೇಳಲು ಅ.ಪ.

ಆನಂದವಾಯಿತು ಮನಕೆ
ಆನಂದಗೋಕುಲದೊಡೆಯನು
ಆನಂದತೀರ್ಥರ ಕರದಲಿ
ಆನಂದ ಸೇವೆಯ ಕೊಳುತಿರೆ ೧

ಆನಂದಾದ್ರಿ ಶಿಖರದಲ್ಲಿ
ಸ್ವಾನಂದ ಸೂಚನೆ ತೋರಲು

ಏನೆಂದು ಬಣ್ಣಿಸಲಿನ್ನು
ಸ್ವಾನಂದರು ಶ್ರೀ ಗುರು ದಯದಿ ೨

ಆನೆಂದರೆ ಶಿಕ್ಷಿಸುವನು ಪರಿ
ನೀನೆಂದರೆ ರಕ್ಷಿಸುವನು ದೊರಿ
ಆನಂದವನ ತರುವಂತೆ
ಆನಂದಭೀಷ್ಟವ ಕೊಡುವ ೩

ಆನಂದಜ್ಞಾನಪೂರ್ಣ
ಆನಂದ ನಿತ್ಯರೂಪ
ಆನಂದ ಗುಣಪೂರ್ಣ ನಿ–
ತ್ಯಾನಂದ ಭಕ್ತರಿಗೀವ ೪

ಗೋಪಾಲಕೃಷ್ಣವಿಠಲ
ನೀ ಪರಮದೈವವೆನಲು
ತಾಪವ ಭವಹರಿಸಿ
ಕಾಪಾಡೊ ಹರಿಯ ಲೀಲೆ ೫

೪

ಇತ್ತೆ ಏತಕ್ಕೆ ಈ ನರಜನ್ಮವ
ಸತ್ಯ ಸಂಕಲ್ಪ ಹರಿ ಎನ್ನ ಬಳಲಿಸುವುದಕೆ ಪ.

ಬಂಧುಬಳಗವ ಕಾಣೆ ಇಂದಿರೇಶನೆ ಭವದಿ
ಬೆಂದು ನೊಂದೆನೊ ನಾನು ಸಿಂಧುಶಯನ
ಬಂದ ಭಯಗಳ ಬಿಡಿಸಿ ನೀನೆ ಪಾಲಿಸದಿರಲು
ಮಂದಮತಿಗೆ ಇನ್ನು ಮುಂದೆ ಗತಿ ಏನೊ ೧

ಕಾಣದಲೆ ನಿನ್ನನು ಕಾತರಿಸುತಿದೆ ಮನವು
ತ್ರಾಣಗೆಡುತಲಿ ಇಹುದೊ ಇಂದ್ರಿಯಗಳೆಲ್ಲ

ಪ್ರಾಣಪದಕನೆ ಸ್ವಾಮಿ ಶ್ರೀನಿವಾಸನೆ ದೇವ
ಜಾಣತನವಿದು ಸರಿಯೆ ಫಣಿಶಾಯಿಶಯನ ೨

ಸಾಧನದ ಬಗೆಯರಿಯೆ ಸರ್ವಾಂತರ್ಯಾಮಿಯೆ
ಮಾಧವನೆ ಕರುಣದಲಿ ಕಾಯಬೇಕೊ
ಹಾದಿ ತೋರದೊ ಮುಂದೆ ಮುಂದಿನಾ ಸ್ಥಿತಿಯರಿಯೆ
ಛೇದಿಸೊ ಅಜ್ಞಾನ ಹೇ ದಯಾನಿಧಿಯೆ ೩

ಸರ್ವನಿಯಾಮಕನೆ ಸರ್ವಾಂತರ್ಯಾಮಿಯೆ
ಸರ್ವರನು ಪೊರೆಯುವನೆ ಸರ್ವರಾಧೀಶ
ಸರ್ವಕಾಲದಿ ಎನ್ನ ಹೃದಯದಲಿ ನೀ ತೋರೊ
ಸರ್ವ ಸಾಕ್ಷಿಯೆ ಸತತ ಆನಂದವೀಯೊ ೪

ಆನಂದಗಿರಿನಿಲಯ ಆನಂದಕಂದನೆ
ಆನಂದ ಗೋಪಾಲಕೃಷ್ಣವಿಠ್ಠಲಾ
ಆನಂದನಿಲಯ ಶ್ರೀ ಗುರುಗಳಂತರ್ಯಾಮಿ
ನೀನಿಂದು ಸರ್ವತ್ರ ಕಾಯಬೇಕಯ್ಯ ೫

೫

ಇವನೆ ಪ್ರಹ್ಲಾದನಿಂದಲಿ ಉಪಾಸ್ಯ
ಪವಮಾನ ಪಿತ ಭಕ್ತವರದ ಲಕ್ಷ್ಮೀಶ ಪ.

ವಲಯಕಾರದಿ ಶೇಷ ಛತ್ತರಿಯಾಗಿ
ಹಲ ಮುಸಲ ಧರಿಸಿ ಎಡದಲಿ ವಾರುಣೀ
ಬಲದಲ್ಲಿ ಶಂಬುಕ ವರ್ಣನೆಂಬ ಪುತ್ರನ ಸಹಿತ
ನಲಿದು ಸೇರಿಸೆ ಇಂಥ ಆಸನದಿ ಕುಳಿತಾ ೧

ಯೋಗಾಸನವನ್ಹಾಕಿ ಎಡತೊಡೆಯ ಮೇಲ್ ಸಿರಿಯು
ಆಗಮನುತ ಬಲದ ತೊಡೆಯಲ್ಲಿ ವಾಯು

ಭೋಗ ರೂಪನು ಸರ್ವ ಆಭರಣ ಶೃಂಗಾರ
ಸಾಗರಾತ್ಮಜೆ ಪತಿಯು ಧರಿಸಿ ಮೆರೆವಂಥಾ ೨

ಶಿರದಿ ನವರತ್ನ ಮಕುಟವು ಫಣೆಯು ತಿಲಕವೂ
ಮೆರೆವನೇತ್ರದ್ವಯವು ಕರ್ಣ ಕುಂಡಲವೂ
ಹಿರಿಯ ನಾಸಿಕ ಗಲ್ಲ ತೆರದ ಬಾಯ್‌ದಾಡೆಗಳು
ದುರುಳರಿಗೆ ಘೋರ ವರಭಕ್ತರಿಗೆ ಅಭಯ ೩

ಕಂಠ ಕೌಸ್ತುಭಮಣಿಯು ಶ್ರೀವತ್ಸ ತುಳಸಿ ಸರ
ಜಂಟಿ ಮುತ್ತಿನ ವೈಜಯಂತಿ ಹಾರಾ
ಎಂಟು ಕರ ಶಂಖ ಚಕ್ರವು ಪದ್ಮ ಗದೆ ಅಭಯ
ವಂಟಿ ಕರಶಿರಿ ಭುಜದಿ ದ್ವಯ ಯೋಗ ಚಿಹ್ನೆ ೪

ಕರದಿ ಕಂಕಣಗಳೂ ಉರ ಉದರ ಶೃಂಗಾರ
ಅರವಿಂದ ಪೊಕ್ಕಳಲಿ ಬ್ರಹ್ಮ ಮೆರೆಯೇ
ಮಿರುಗುವೋ ಮಕುಟ ಉಟ್ಟಿರುವ ನಡು ಕಿರುಗೆಜ್ಜೆ
ಕರಿಸೊಂಡಲಿನ ತೊಡೆಯು ಸುರವರದ ಚರಣಾ ೫

ಚರಣದಾಭರಣ ಸಾಲ್ಬೆರಳನಖ ಕಾಂತಿಗಳು
ತರಳರವಿ ವರ್ಣ ಕೋಮಲ ಪಾದ ಪದುಮಾ
ನರದೇಹ ಮೃಗ ಮುಖವು ನರಮೃಗಾಕೃತಿರೂಪ
ತರಳ ಪ್ರಹ್ಲಾದನಲಿ ಕರುಣಾರ್ದ್ರ ದೃಷ್ಟಿ ೬

ಎಡತೊಡೆಯಲಿ ಸಿರಿಯು ಬಲಕರದಿ ಪದುಮವ ಪಿಡಿದು
ಎಡತೊಡೆಯ ಮೇಲೆ ಮದನನ ಕುಳ್ಳಿರಿಸುತಾ
ಎಡದಿ ರತಿಯನು ಮದನ ಇರಿಸಿ ಹೂ ಬಾಣವನು
ಪಿಡಿದು ರತಿ ಪದುಮ ಕರದಿಂದ ಶೋಭಿಸಲೂ ೭

ಹರಿಗೆ ಬಲತೊಡೆಯಲಿದ್ದಂಥ ವಾಯುವು ತನ್ನ
ಅರಸಿ ಭಾರತಿಯ ಎಡತೊಡೆಯಲಿಟ್ಟೂ

ತರಳ ವಿಷ್ವಕ್ಸೇನನನು ಬಲದ ತೊಡೆಯಲ್ಲಿ
ಇರಿಸಿಕೊಂಡತುಲ ಸಂತಸದಿಂದ ಮೆರೆಯೇ ೮

ಚತುರ ಹಸ್ತನು ವಾಯು ಎಡಗೈಲಿ ಪಿಡಿದು ಗದೆ
ಹಿತದಿ ಬಲಗೈಯ್ಯ ಭಕ್ತರಿಗಭಯ ತೋರ್ವ
ಅತಿಭಕ್ತಿಯಿಂದುಭಯಕರ ಅಂಜಲಿಯ ಮಾಡಿ
ರತಿ ಪತಿ ಪಿತನ ಕರುಣವ ಭಿಕ್ಷೆ ಬೇಡುವಾ ೯

ನಾಭಿಯಲಿ ಬ್ರಹ್ಮ ಉದ್ಭವಿಸಿ ಹಸ್ತದಿ ವೇದ
ಶೋಭಿಸಲು ಎಡತೊಡೆಯ ಮೇಲೆ ವಾಣೀ
ಆಭರಣ ಶೃಂಗರದಿ ವೀಣೆ ಪುಸ್ತಕ ಧರಿಸಿ
ವೈಭವದಿ ದೇವ ಮುನಿ ಎಡೆ ತೊಡೆಯೊಳಿರಲೂ ೧೦

ಬ್ರಹ್ಮ ಬಲತೊಡೆಯಲ್ಲಿ ಪಂಚಮುಖ ರುದ್ರನ್ನ
ಸುಮ್ಮಾನದಿಂದ ಕುಳ್ಳಿರಿಸಿಕೊಂಡಿರಲೂ
ಬ್ರಹ್ಮಸುತ ಕರದಿ ಆಯುಧ ಗೌರಿ ಎಡದಲ್ಲಿ
ಷಣ್ಮುಖನ ಬಲ ತೊಡೆಯಲ್ಲಿಟ್ಟು ಮೆರೆಯೇ ೧೧

ಗೌರಿಗಣಪನ ತನ್ನ ತೊಡೆಯೊಳಿಟ್ಟಿರಲು
ಈ ರೀತಿಯಿಂದ ಪರಿವಾರ ಸಹಿತಾ
ಶೌರಿ ಮೆರೆಯುವ ದಿವ್ಯ ಅದ್ಭುತಾಕೃತಿ ನೃಹರಿ
ಭಾರತಿಯ ಪತಿ ಮನದಿ ತೊರೆ ಭಕ್ತರಿಗೆ ೧೨

ಕಾಲನಾಮಕ ಗರುಡ ಬಾಲೆ ಸೌಪರ್ಣಿ
ಲೀಲೆಯಿಂದಲಿ ಕೂಡಿ ಸಮ್ಮುಖದಿ ನಿಂದೂ
ಓಲಗವ ಕೊಡುತ ಹರಿಗನುಕೂಲನಾಗಿರುವ
ಲೀಲ ಮಾನುಷ ಇಂಥ ವೈಭವದಿ ಮೆರೆವಾ ೧೩

ಇಂತೆಸೆವ ಹರಿ ಎದುರು ನಿಂತು ಪ್ರಹ್ಲಾದ ಗುಣ
ವಂತೆ ಸಾಧ್ವೀ ಸಾಧುಮತಿ ಸತಿಯ ಸಹಿತಾ

ಅಂತರಂಗದಿ ಚಿಂತಿಸುತ ಅಂಜಲಿಯ ಕರದಿ
ಶಾಂತಮನದಲಿ ಸುಖಿಸಿ ಆನಂದಿಸುವನೂ ೧೪

ವರಭಕ್ತ ಪ್ರಹ್ಲಾದ ವರದನ್ನ ಈ ರೂಪ
ನರರು ಚಿಂತಿಸಲಳವೆ ಚರಿಪ ಭಕ್ತಿಯಲೀ
ಪರಮ ಉತ್ಸಾರಕರನೊಂದೊಂದು ಅಂಶದಲಿ
ವರ ಭಕ್ತರಲಿ ನೆಲಸೆ ಚಿಂತನೆಗೆ ನಿಲುವಾ ೧೫

ಪರಿವಾರ ಆಭರಣ ಆಯುಧಗಳಿಂ ಮೆರೆವ
ನರಹರಿಯ ಈ ರೂಪ ನಿರುತ ಸ್ಮರಿಸೇ
ಗುರುವರದ ಕರಿಗಿರೀ ಯೋಗ ಭೋಗಾ ನೃಹರಿ
ಕರುಣಿಸುವ ಮುಕ್ತಿ ಗೋಪಾಲಕೃಷ್ಣವಿಠಲಾ ೧೬

೬

ಉದ್ಧಾರ ಮಾಡಯ್ಯ ಉಡುಪಿ ನಿಲಯ
ಹೃದ್ವನಜದಲಿ ನೆಲಸಿ ಅನುಗಾಲ ನಿನ ತೋರಿ ಪ.

ಬಂದೆ ಬಹುದೂರದಲಿ ನಿಂದೆ ತವಚರಣದಡಿ
ತಂದೆ ಮುದ್ದುಮೋಹನ ಗುರುಕರುಣದಿಂದ
ಕುಂದುಗಳನೆಣಿಸದೆಲೆ ಸಿಂಧುಶಯನನೆ
ಹೃದಯ ಮಂದಿರದಿ ಮನೆ ಮಾಡು ಸುಂದರಾತ್ಮನೇ ೧

ಜನ್ಮಜನ್ಮಾಂತರದ ಅಜ್ಞಾನಗಳ ಕಳೆದು
ಕರ್ಮಸಾಸಿರ ಕಡಿದು ಕರುಣದಿಂದ
ರಮೆಯರಸನೆ ನಿನ್ನ ಅನುಗಾಲ ಸ್ಮರಿಪಂಥ
ಸನ್ಮಾರ್ಗವನೆ ತೋರೊ ಸರ್ವಲೋಕೇಶ ೨

ಜಪತಪಗಳೊಂದರಿಯೆ ವ್ರತ ನೇಮಗಳ ಕಾಣೆ
ಉಪವಾಸದುಪಟಳವು ಗತಿ ತೋರದೆನಗೆ

ಗುಪಿತಮಾರ್ಗದಿ ನಿನ್ನ ನಾಮಾಮೃತವನುಣಿಸಿ
ಅಪಹಾಸಗೊಳಿಸದಲೆ ಆದರಿಸೊ ಜೀಯ ೩

ಬೇಡಲೇನನು ನಿನ್ನ ಕಾಡಲೇತಕೆ ನಾನು
ನೀಡುವ ದಾತ ನೀ ಸರ್ವಜ್ಞನಿರಲು
ಮಾಡುವೆನು ಸಾಷ್ಟಾಂಗ ಬೇಡುವೆನು ಪದದಾಸ್ಯ
ನೋಡು ಕರುಣಾದೃಷ್ಟಿಯಿಂದೆನ್ನ ಕಡೆಗೆ ೪

ಅಂತರಂಗದಲಿಪ್ಪ ಸರ್ವಾಂತರಾತ್ಮಕನೆ
ಚಿಂತನೆಗೆ ನೆಲೆತೋರು ಚಿನ್ಮಯಾತ್ಮಕನೆ
ಕಂತುಪಿತ ಗೋಪಾಲಕೃಷ್ಣವಿಠ್ಠಲನೆ ಸಿರಿ
ಕಾಂತ ಕಾಪಾಡು ಕಡು ಕರುಣಿ ಮಧ್ವೇಶ ೫

## ೭

ಎಷ್ಟು ಪುಣ್ಯ ಮಾಡಿ ಇಲ್ಲಿ ಇಟ್ಟಿಗೆ ನೆಲಸಿತೋ
ವಿಠ್ಠಲನ್ನ ಚರಣ ಶಿರದಿ ಮೆಟ್ಟಿಸಿ ಕೊಂಡಿತೋ ಪ.

ಭಕ್ತನಾದ ಪುಂಡಲೀಕನ ಕರಕೆ ಸೋಕಿತೋ
ಚಿತ್ತಧೃಡನು ಎಸೆಯೆ ರಂಗನ ಪಾದಕೆರಗಿತೋ ೧

ಹರಿಯೆ ಎನ್ನ ಶಿರವ ಮೆಟ್ಟೆಂದ್ಧರಿಕೆ ಮಾಡಿತೋ
ಪರಮ ಪುರುಷ ಬಂದು ನಿಲ್ಲೆ ಖ್ಯಾತಿ ಪೊಂದಿತೋ ೨

ಒಲಿದು ಮೆಟ್ಟಿದಂಥ ಪಾದ ಶಿರದಿ ಪೊತ್ತಿತೋ
ಇಳೆಯನಳೆದ ಪಾದ ಇಲ್ಲಿ ಅಡಿಗಿಸಿಕೊಂಡಿತೋ ೩

ಗೋಕುಲದಲಿ ಮೆರೆದ ಪಾದ ಸೋಕಿಸಿಕೊಂಡಿತೋ
ನಾಕ ಜನರು ವಂದಿಪ ಪಾದ ನನ್ನದೆಂದಿತೋ ೪

ಯಮುನ ದಡದಿ ಸುಳಿದ ಪಾದಯತ್ನದಿ ಪೊಂದಿತೋ
ರಮೆಯು ಸೇವಿಪಂಥ ಪಾದ ರಜವ ಧರಿಸಿತೋ ೫

ಬಂಧ ಬಿಡಿಸುವಂಥ ಪದದಿ ಬಂಧಿಸಿಕೊಂಡಿತೋ
ಸುಂದರ ಸುಕೋಮಲನ ಪಾದ ಸೂಕ್ಷ್ಮದಿ ಪೊತ್ತಿತೋ ೬

ಪೊಗಳಲೊಶವು ಅಲ್ಲದ ಪಾದ ಘಳಿಗೆ ಬಿಡದಾಯ್ತೋ
ಜಗದಲಿಟ್ಟಿಗೆ ನಿಲಯನೆಂಬೊ ಲಾಭ ಹೊಂದಿತೋ ೭

ನಂದ ಕಂದ ಬಂದನೆಂದು ನಲಿದು ನಿಂತಿತೋ
ಇಂದಿರೇಶ ಪೋಗದಿರೆಂದು ಇಲ್ಲೆ ಓಡಿದಿತೋ ೮

ಪಾಪ ಕಳೆದು ಪಾವನ್ನದಲಿ ಮುಕ್ತಿ ಪೊಂದಿತೋ
ಗೋಪಾಲಕೃಷ್ಣವಿಠ್ಠಲನ ಚರಣ ಸೇರಿತೋ ೯

೮

ಎಷ್ಟು ಕೂಗಲು ದಯ । ಪುಟ್ಟಲಿಲ್ಲವೊ ನಿನಗೆ
ಬೆಟ್ಟದೊಡೆಯ ಹರಿಯೆ ಪ.

ಸಿಟ್ಟೇಕೆ ಎನ್ನೊಳು ಕೃಷ್ಣಮೂರುತಿ ನಿನಗೆ
ಬಿಟ್ಟರೆ ನೀ ಎನ್ನ ಸೃಷ್ಟಿಯೊಳಾರುಂಟೊ ಅ.ಪ.

ಪರಮ ಪಾತಕಿಯೆಂದು । ತೊರೆದರೆ ನೀ ಎನ್ನ
ಮೊರೆಬೀಳಲಿನ್ನಾರಿಗೆ
ಕರೆಕರೆಗೊಳಿಪುದು ತರವಲ್ಲ ಕೇಳಿನ್ನು
ಕರುಣಾಮೂರುತಿ ಎಂಬೊ ಬಿರುದು ಪೊತ್ತಿಲ್ಲವೆ
ಸರಿಯೆ ನಿನಗಿದು ಕೊರಗಿಸುವುದು
ಜರಿದು ಬಳಲುವೆ ಧರೆಯೊಳೀಗ ನಾ
ಸುರರ ರಕ್ಷಕ ಪರಮಪಾವನ
ಕರವ ಮುಗಿವೆ ದರುಶನವ ನೀಡೊ ೧

ನೀನಲ್ಲದೆ ಇನ್ನು । ನಾನಾರ ಭಜಿಸಲೊ
ಗಾನವಿಲೋಲ ಹರಿ
ಕಾನನದೊಳು ಕಣ್ಣು ಕಾಣದಂತಾಗಿದೆ
ಧ್ಯಾನಕೆ ಸಿಲುಕದೆ ನೀನೆನ್ನ ಕಾಡುವೆ
ಮಾನ ಪ್ರಾಣ ಶರೀರ ನಿನ್ನದೊ
ನಾನು ಅನ್ಯರ ಭಜಿಸಲಾರೆನೊ
ಹೀನಬುದ್ಧಿಯ ಬಿಡಿಸಿ ಗುರುಗಳ
ಧ್ಯಾನವೆನಗಿತ್ತು ನೀನು ಕಾಯೊ ೨

ಅನ್ನಪಾನವ ಬಿಟ್ಟು । ನಿನ್ನನು ಸ್ತುತಿಸಲು
ಇನ್ನು ಕರುಣವಿಲ್ಲವೆ
ಇನ್ನು ಸೈರಿಸಲಾರೆ ಘನ್ನ ಮಹಿಮನೆ ದುಃಖ
ನಿನ್ನ ಮನಸು ಕರಗಲಿನ್ನೇನಗೈಯ್ಯಲೊ
ಎನ್ನ ಯತ್ನವು ವ್ಯರ್ಥವಾಯಿತು
ಇನ್ನು ನೀ ದಯೆಗೆಯ್ಯಬೇಕೊ
ಮುನ್ನ ಮಾಡಿದ ತಪ್ಪನೆಣಿಸದೆ
ಎನ್ನ ದೃಷ್ಟಿಗೆ ನಿನ್ನ ತೋರೊ ೩

ಸುತನ ಮೊರೆಯನೆ ಕೇಳಿ । ಹಿತದಿ ವೇದವನಿತ್ತೆ
ಮಥಿಸಿ ಶರಧಿ ಅಮೃತ ಸುರರಿಗಿತ್ತೆ
ಕ್ಷಿತಿಯ ಬಾಧೆಯ ಬಿಡಿಸಿ ಸುತನ ಬಾಧಿಸೊವೊನ
ಹತಮಾಡಿ ಇಂದ್ರಗೆ ಗತಿಸಿದ ಪದವಿತ್ತೆ
ಕ್ಷಿತಿಯನಾಳ್ವರ ಹತವಗೈಸಿದೆ
ಕ್ಷಿತಿಸುತೆಯ ಪ್ರೇಮದಲಿ ತಂದೆ
ಹಿತದಿ ಪಾಂಡವ ಸುತರ ಕಾಯ್ದೆ
ವ್ರತವ ಕೆಡಿಸಿ ಕಲಿಹತವಗೈದೆ ೪

ಇಂತು ಎಲ್ಲರ ಕಾಯ್ದು । ಕಂತು ಜನಕನೆ ನಿನಗೆ
ನ್ನಂತರ ತಿಳಿಯದೇನೋ

ಸಂತತ ಗೋಪಾಲಕೃಷ್ಣವಿಠ್ಠಲ ನಿನ್ನ
ಶಾಂತರೂಪವ ಎನ್ನ ಅಂತರಂಗದಿ ತೋರೊ
ಚಿಂತಿತಾರ್ಥ ಪಂಥಗಾರನೆ
ಎಂತು ದಿನಗಳು ಸಂದು ಹೋದುವೊ
ಇಂತು ನಿರ್ದಯವೇಕೊ ಇನ್ನು
ಸಂತತಾನಂದನಂತಶಯನ ೫

## ೯

ಎಲ್ಲಿ ಪೋದೆಯೊ ಕೃಷ್ಣ ಸೊಲ್ಲು ಕೇಳುತ ಈಗ
ಮೆಲ್ಲನೆ ಎನ್ನ ಮನದಲ್ಲಿ ನಿಲ್ಲೊ ಪ.

ಪುಲ್ಲಲೋಚನ ದೇವ ಎಲ್ಲಿಗು ಪೋಗದೆ
ಉಲ್ಲಾಸಪಡಿಸುತ ನಿಲ್ಲೊ ಹೃದಯದಲಿ ಅ.ಪ.

ಸ್ಥಾವರ ಜಂಗಮ ವ್ಯಾಪ್ತನಾಗಿಹ ದೇವ
ದೇವ ಎನ್ನ ಮನದಿ ನಿಲುವುದು ಘನವೆ
ಶ್ರೀವರ ನೀನೀಗ ಕಾವನೆಂದರಿತಿರೆ
ಸಾವಕಾಶವಿದೇಕೆ ಭಾವಜನಯ್ಯನೆ ೧

ಇಷ್ಟು ದಿನವು ನಿನ್ನ ಮುಟ್ಟಿ ಪೂಜಿಸಲಿಲ್ಲ
ಸಿಟ್ಟೇನೊ ನಿನಗಿದರ ಗುಟ್ಟು ತಿಳಿಯದೆ
ಬಿಟ್ಟುಬಿಡು ಈ ಬಿಂಕ ಕೊಟ್ಟು ಅಭಯ ಸಲಹೊ
ಇಷ್ಟ ಸ್ಥಾನದಿ ನಿನ್ನ ಮುಟ್ಟಿ ಪೂಜಿಸಿರುವೆ ೨

ಸರಿಯಲ್ಲ ನಿನಗಿದು ಕರೆದರೆ ಭಕ್ತರು
ತ್ವರಿತದಿಂದಲಿ ಬರುವ ಬಿರುದಿಲ್ಲೆ ನನಗೆ
ಸರಿ ಬಂದರೆ ಬಾರೊ ಬಾರದಿದ್ದರೆ ಬಿಡೊ
ಅರಿತು ನಿನ್ನಯ ನಾಮ ಅರುಹುವ ಮತಿ ನೀಡೊ ೩

ಕಾರ್ಯಕಾರಣಕರ್ತ ಪ್ರೇರ್ಯಪ್ರೇರಕರೂಪ
ಉರ್ವಿಗೊಡೆಯ ಸರ್ವ ನಿರ್ವಾಹಕ
ಗರ್ವರಹಿತಳ ಮಾಡಿ ಸರ್ವದಾ ಪೊರೆದರೆ
ಸರ್ವಾಧಿಪತಿಯೆಂದು ಸಾರ್ವೆನೊ ನಾನಿಂದು ೪

ಸೃಷ್ಟಿ ಸ್ಥಿತಿ ಲಯಗಳಿಗೆ ಕರ್ತನೊಬ್ಬನೆ ನೀನು
ಶ್ರೇಷ್ಠನಾಗಿರುವೆಯಾ ಸರ್ವರಿಗೆ
ಬಿಟ್ಟಿರುವೆಯೊ ಜಗದ ಅಷ್ಟೂ ವಸ್ತುಗಳಿಂದ
ಶ್ರೇಷ್ಠ ಶ್ರೀ ಗೋಪಾಲಕೃಷ್ಣವಿಠ್ಠಲದೇವ ೫

## ೧೦

ಎಂಥಾ ಮಹಿಮನಿವನೆ ಗೋಪಾಲಕೃಷ್ಣ
ಎಂಥ ಮಹಿಮನಿವನೆ ಪ.

ಎಂಥಾ ಮಹಿಮನಿವನಂತ ಕಂಡವರಿಲ್ಲ
ಕಂತು ಜನಕ ಸರ್ವರಂತರಂಗದೊಳಿಪ್ಪ ಅ.ಪ.

ಕರಚರಣಗಳಿಲ್ಲದೆ ಇದ್ದರು । ಮುದುರಿ
ಘುರುಘುರುಗುಟ್ಟುತಿಹುದೆ
ವರಕಂಬೋದ್ಭವ ವಟು ಪರಶು । ಧರಿಸಿರುವನ
ಚರಿಸಿ ಮಾವನ ಕೊಂದ ನಿರ್ವಾಣ ಹಯವೇರಿ
ಶರಧಿಯೊಳಾಡಿ ಗಿರಿಯಡಿ ಓಡಿ
ಧರೆಯನು ತೋಡಿ ಕರಳೀಡ್ಯಾಡಿ
ಕರವ ನೀಡಿ ಭಾರ್ಗವ ದಶರಥ ಸುತ
ನರಸಖ ಅಂಬರ ತೊರೆದ ರಾವುತ ೧

ಮನುವಿಗೊಲಿದು ಮಂದರ । ಬೆಂಡಂತೆ ಧರಿಸಿ
ವನಿತೆಯ ತಂದನೀ ಧೀರ
ಘನಘರ್ಜನೆಯು ಗಂಗಾಜನಕ । ಜಮದಗ್ನಿಸುತ
ವನಚಾರಿ ತುರುಪಾಲ ವನಿತೆರೊಂಚಕ ಕಲ್ಕಿ

ಜನಿಸಿ ಜಲದಿ ಬೆನ್ನಲಿ ಗಿರಿಕೋರೆ
ಘನ ಹೊಸಲಾಸನ ತಿರಿದನುಜನ
ತರಿದ ಮಾತೆ ಕಪಿವೆರಸಿ ವೃಂದಾವನ
ಚರಿಸಿ ದಿಗಂಬರ ಹರಿ ಏರಿದನೆ ೨

ಸುತನಿಗಾಗಮವಿತ್ತನೆ । ಕ್ಷಿತಿಧರಧಾರಿ
ಸುತನ ಮೂಗಿನೊಳ್ ಬಂದನೆ
ಸುತವಾಕ್ಯ ಸತ್ಯವೆನಿಸಿ ಅತಿ ಕುಬ್ಜ ಕ್ಷಿತಿಯನಿತ್ತು
ವ್ರತಧಾರಿ ವಸನ ಚೋರ ವ್ರತಭಂಗ ಏರಿ ತುರಂಗ
ಸತಿಯನೆ ಪೊರೆದ ಸತಿಯಂತಾದ
ಸತಿಯಳ ಸಂಗ ಸತಿಗರಿದಂಗ
ಸತಿಯ ಬೇಡಿ ನೀಡಿ ಸತಿಯ ಕೂಡಿ ಜಾರ
ಸತಿಯರ ಕೆಡಿಸುತ ಸತಿ ಹೆಗಲೇರಿದ ೩

ವಾಸ ಜಲದಿ ಮೈ ಚಿಪ್ಪು । ಯಜ್ಞ ಸ್ವರೂಪ
ವೇಷ ಮಾನವ ಮೃಗರೂಪು
ಆಸೆಬಡಕ ಮಾತೆ ದ್ವೇಷ ವನದಿ ವಾಸ
ಪೋಷ ಪಾಂಡವ ಜಿನ ಮೋಸ ವಾಜಿ ಮೇಲ್ವಾಸ
ನಾಸಿಕ ಶೃಂಗ ನಗಪೋತ್ತಂಗ
ಭೂಸತಿ ಸಂಗ ಮಾನವ ಸಿಂಗ
ಮೋಸ ನೃಪರ ದ್ವೇಷ ಪೋಷಿ ಯಜ್ಞವೃಂದ
ವಾಸಿ ಘಾಸಿವ್ರತ ಕಲಿಮುಖ ದ್ವೇಷಿ ೪

ಕಾಪಾಡಿ ವೇದ ಅಮೃತ ಭೂಸತಿಯ ಪೊರೆದು
ಪಾಪಿ ಕರುಳ್ಬಗೆದ ಜಲಪಿತ
ಭೂಪರ ಕಾಡಿ ರಘುಭೂಪ ಸೋದರತಾಪ
ಗೋಪ್ಯಕಲ್ಯಂತಕಾಲ ಗೋಪಾಲಕೃಷ್ಣವಿಠ್ಠಲ
ಆಪಜವಾಸ ಆ ಪೃಥ್ವೀಶ
ಆ ಪುತ್ರಪೋಷ ಆ ಪದ ಸರಿತ
ಕೋಪಿ ಲಂಕೆ ಪುರತಾಪಿ ಗೋಪಿಕಾ
ವ್ಯಾಪಿ ಮಾನಹೀನ ಘೋಟಕವಹನ ೫

## ೧೧

ಎಂಥ ಮಹಿಮ ಏನು ಚಲುವನೆ ಶ್ರೀ ಉಡುಪಿ ನಿಲಯ ಪ.

ಎಂಥ ಮಹಿಮ ಏನು ಚಲುವ ಕಂತುಪಿತ ಶ್ರೀ ಬಾಲಕೃಷ್ಣ
ಶಾಂತಯತಿಗಳಿಂದ ಪೂಜಿತ ನಿಂತ ಮಧ್ವಮುನಿಕರಾರ್ಚಿತ ಅ.ಪ.

ಕಂಡ ಕ್ಷಣದಿ ಮಂಡೆ ಬಾಗಿದ
ಹಿಂಡು ಭಕ್ತರಘ ಕಳೆವ
ಪುಂಡರೀಕ ನೇತ್ರ ಕನಕ-
ಕಿಂಡಿಯಲ್ಲಿ ಕಾಂಬ ರೂಪ ೧

ಬಾಲರೆಂಟು ಯತಿಗಳಿಂದ
ಲೀಲೆಯಿಂದ ಪೂಜೆಗೊಂಬ
ಲೀಲಮಾನುಷರೂಪ ರುಕ್ಮಿಣಿ
ಲೋಲ ಲೋಕಪಾಲ ಜಾಲ ೨

ಕಾಲಕಾಲದ ಪೂಜೆಗೊಂಬ
ಬಾಲತೊಡಿಗೆ ಧರಿಸಿಕೊಂಬ
ವ್ಯಾಳಶಯನ ಮುದ್ದುಮುಖ ಗೋ
ಪಾಲಕೃಷ್ಣವಿಠ್ಠಲನೀತ ೩

## ೧೨

ಎಂದೆನ್ನ ಪೊರೆವೆ ಶ್ರೀರಂಗಧಾಮ
ಎಂದೆನ್ನ ಪೊರೆವೆ ಪ.

ಎಂದೆನ್ನ ಪೊರೆವೆ ಎಂದೆನ್ನ ಕರೆವೆ
ಮಂದಹಾಸ ಮುಖನೆ ಎಂದೆನ್ನನೀಕ್ಷಿಸುವೆ ಅ.ಪ.

ಶ್ರೀಶ ವೈಕುಂಠದಿ ಸಾಸಿರ ಫಣೆಯುಳ್ಳ
ಶೇಷಶಯನ ಎನ್ನ ಘಾಸಿಗೊಳಿಸಿದೆ ೧

ಅರವಿಂದನಯನನೆ ಅರವಿಂದ ದಳ ಪೋಲ್ವ
ವರಹಸ್ತವನೆ ಎನ್ನ ಶಿರದ ಮೇಲಿಡುತಲಿ ೨

ಬಳಲಬೇಡೆಂತೆಂದು ನಳಿತೋಳಿನಿಂದೆತ್ತಿ
ನಳಿನನಾಭನೆ ಎನ್ನ ಬಳಲಿಕೆ ಬಿಡಿಸುತ್ತ ೩

ಮುಕ್ತರ ಸಂಗಡ ಮುಕ್ತೇಶ ಎನ್ನಲ್ಪ
ಶಕ್ತಿ ಸೇವೆಯ ಕೊಳುತ ಮುಕ್ತಾರ್ಥದಾಯಕ ೪

ವ್ಯಾಪಕ ಶ್ರೀಗುರು ಸ್ಥಾಪಕ ಮನದಲ್ಲಿ
ಗೋಪಾಲಕೃಷ್ಣವಿಠ್ಠಲ ಈ ಪರಿ ದಯೆಗೈದು ೫

## ೧೩

ಏನು ಮಾಡಲಿ ವಿಠಲ ಏನು ತಿಳಿಯದು ವಿಠಲ
ಏನಿತ್ತು ಮೆಚ್ಚಿಸಲಿ ವಿಠಲಾ ಪ.

ಜ್ಞಾನ ಮೊದಲೇ ಇಲ್ಲ ಧ್ಯಾನ ಮಾಡುವುದರಿಯೆ
ನೀನಾಗೆ ಒಲಿದೆನ್ನ ಸಲಹಯ್ಯ ವಿಠಲಯ್ಯ ಅ.ಪ.

ತಂದೆತಾಯಿಯು ನೀನೆ ಬಂಧು ಬಳಗವು ನೀನೆ
ತಂದವನುಭವದಲ್ಲಿ ಎನ್ನ ನೀನೆ
ಮುಂದೆ ಪೊರೆವವ ನೀನೆ ಹಿಂದೆ ಪೊರೆದವ ನೀನೆ
ಇಂದು ಪೊರೆಯುವನು ನೀನೇ
ಒಂದರಿಯೆ ತವ ಪದದ್ವಂದ್ವವೆ ಗತಿ ಎಂದು
ಇಂದು ಚರಣದಿ ಬಿದ್ದೆ ಪೊರೆಯಯ್ಯ ವಿಠಲಯ್ಯ ೧

ಹಿಂದಿನಾ ಭಕ್ತರನು ಪೊರೆದ ಕೀರುತಿ ನೋಡೆ
ಒಂದು ನಿಜವೆಂದರಿಯೆ ವಿಠಲಾ
ಇಂದೆನ್ನ ಕರಪಿಡಿದ ಮುಂದಕ್ಕೆ ಕರೆದು ನೀ
ಒಂದು ಮಾತನಾಡೆ ವಿಠಲಾ
ಅಂದಿನಾ ಭಕ್ತವತ್ಸಲನೆಂಬ ಕೀರ್ತಿ ನಿಜ
ವೆಂದು ತಿಳಿಯುತಲಿ ಆನಂದಿಸುವೆ ವಿಠಲಯ್ಯ ೨

ಸಿರಿವಂತರಿಗೆ ವಲಿವ ಬಿರುದೊಂದು ಘನವೆ ಕೇಳ್
ಅರಿಯೆನ್ನೈ ಅದರ ಪರಿ ವಿಠಲಾ
ಪರಿಪರಿಯಲಿ ನಿನ್ನ ಚರಣ ಪಿಡಿದಾಲ್ಪರಿಯೆ
ಥರವೆ ಗರುವಿಕೆ ಪೇಳು ವಿಠಲಾ
ತೆರದು ನೋಡದೆ ನೇತ್ರ ಕರದಭಯ ಪೇಳದಲೆ
ಇರುವ ಪರಿ ಕರುಣೆಗೆ ಸರಿಯೆ ಪೇಳ್ ವಿಠಲಯ್ಯ ೩

ಹಿಂದೆ ಕೆಲವರ ಕಾಯ್ದುದೊಂದೆ ಕೀರ್ತಿಯು ಜಗದಿ
ಮಂದಿ ಹೊಗಳುವರದನೆ ಮತ್ತೆ ಮತ್ತೆ
ಇಂದು ಮುಂದೆ ಅಂಥ ಬಂದ ಭಕ್ತರು ಇಲ್ಲೆ
ಇಂದಿಲ್ಲವೇ ನಿನಗೆ ಆ ಶಕ್ತೀ
ಇಂದಿನವರಲಿ ಅಂಥ ಭಕುತಿ ಇಲ್ಲವೆ ಪೇಳು
ಇಂದಿರೇಶನೆ ಎನಗೆ ವಲಿಯದಿಹೆ ವಿಠಲಯ್ಯ ೪

ಅಂತರಂಗದಿ ನಿಂತು ಶಾಂತತ್ವ ಕೊಡುವುದಕೆ
ಚಿಂತೆ ಏತಕೆ ಪೇಳು ವಿಠಲಾ
ಸಂತತದಿ ನಿನಧ್ಯಾನ ಚಿಂತನೆಯ ಕೊಡು ಎನಗೆ
ಚಿಂತಿತಾರ್ಥಪ್ರದನೆ ವಿಠಲಾ
ಕಂತುಪಿತ ಗೋಪಾಲಕೃಷ್ಣವಿಠ್ಠಲ ಗುರುಗ
ಳಂತರ್ಯಾಮಿಯೆ ಪೊರೆಯೊ ಕರ ಪಿಡಿದು ೫

## ೧೪

ಏಳು ಗೋಪಾಲ ಬಾಲ ಇನ್ನೂ
ಭಾಳ ಹೊತ್ತಾಯಿತು ಭಕ್ತ ಪರಿಪಾಲ ಪ.

ಮುನಿಜನರೆದ್ದು ಪೂಜಿಸೆ ನಿನ್ನ ನಿಂತಿರೆ
ಮನುಜರೆಲ್ಲರೂ ಕಾದಿಹರು ದರುಶನಕೆ
ಸನಕಾದಿ ವಂದಿತ ಸರ್ವೇಶನೆಂತೆಂದು
ವಿನಯದಿಂದಲಿ ನುತಿಪರು ಭಾಗವತರು ೧

ತಾರೆಗಳಡಗಿತು ಕಮಲಗಳರಳಿತು
ಪೂರ್ವ ದಿಕ್ಕಿನಲಿ ತೋರುವ ರವಿ ಉದಯ
ಭೇರಿ ತುತ್ತೂರಿ ನಗಾರಿ ಬಾರಿಸುತಿದೆ
ಸಾರಿ ಕೂಗುತಲಿದೆ ಕೋಳಿ ವೃಂದಗಳು ೨

ಬಾಲಲೀಲೆಗಳಿಂದ ಗೋವಳರೊಡನಾಡಿ
ಭಾಳ ಆಯಾಸವಾಗಿಹುದೆ ಕಂದಯ್ಯ
ಬಾಲೆ ಗೋಪ್ಯಮ್ಮ ನಿನ್ನ ಲಾಲಿಸಲಿಲ್ಲವೆ
ಬಾಲಯತಿಗಳು ಪೂಜಿಸುವರೇಳಯ್ಯ ೩

ಬಿಸಿಬಿಸಿ ನೀರು ಪಂಚಾಮೃತವೆರೆಯುತ
ಹಸನಾದ ಪಾಲು ಸಕ್ಕರೆ ಉಂಡೆಗಳು
ಹಸುಗೂಸು ನಿನಗೆ ಹುಗ್ಗಿಯು ದೋಸೆ ಪೊಂಗಲು
ಬಿಸಜಾಕ್ಷ ಯತಿಗಳರ್ಪಿಸುವರೇಳಯ್ಯ ೪

ನುತಿ ಕೇಳಲಿಲ್ಲ ಆ ದಣಿದೆಂದು ಮಲಗಿದ್ಯಾ
ಶ್ರುತಿ ವೇದತತಿಗಿಂತ ಚತುರ ಮಾತಿನೊಳು
ಹಿತದಿ ಯಶೋದೆ ಎಬ್ಬಿಸಲೆಂದು ಮಲಗಿದ್ಯಾ
ಚ್ಯುತದೂರ ಗೋಪಾಲಕೃಷ್ಣವಿಠ್ಠಲಯ್ಯ ೫

## ೧೫

ಏಳು ಪಂಡರಿವಾಸ ಏಳು ಶ್ರೀ ದೇವೇಶ
ಏಳು ಮುಕ್ತ ಗಿರೀಶ ಏಳು ಹೃದೇಶ ಪ.

ಏಳು ಮೂಲೋಕದೀಶ ಏಳು ಹೃತ್ಪದವಾಸ
ಏಳು ಏಳಯ್ಯ ಶ್ರೀಶಾ ಏಳು ಸರ್ವೇಶಾ ಅ.ಪ.

ಗಂಗಾ ಭಾಗೀರಥಿ ತುಂಗಭದ್ರಾ ಯಮುನ
ಸಂಗಮ ತ್ರೀವೇಣಿ ಸರಸ್ವತಿ ಸರಯೂ
ಮಂಗಳೆ ಚಂದ್ರಭಾಗೆಯೋಳ್ ಕೂಡಿ ಸೇವಿಸೆ
ರಂಗಾ ಬಾಗಿಲೋಳ್ ನಿಂತು ಕಾದಿಹಳಯ್ಯ ೧

ಪುನಗು ಜವಾಜಿ ಕಸ್ತೂರಿ ಬೆರಸಿದ ಜಲ
ನಿನಗೆ ತೈಲವನೊತ್ತಿ ಎರೆವೆನೆಂದು
ಕನಕ ರತ್ನದಿ ಭೂಷಿತರಾದ ದೇವ
ಕನ್ನಿಕೆಯರು ಕಾದಿಹರ್ರೈಯ್ಯ ಲಕುಮಿಪತಿ ೨

ಪಂಚಬಾಣನ ಪಿತನೆ ಪಂಚಾಮೃತ ತಂದು
ಪಂಚಕನ್ನೆಯರು ಎರೆವೆನೆಂದು
ಮಿಂಚು ಕೋಟಿಯತೇಜಾಭರಣ ಪೀತಾಂಬರ
ಪಂಚ ರೂಪಗೆ ಉಡಿಸಿ ಶೃಂಗರಾಗೈಯುವರು ೩

ಕಸ್ತೂರಿ ತಿಲಕವು ಕನಕಾಂಬರದ ಶಾಲು
ಸುತ್ತಿದ ಮುಂಡಾಸು ಶೃಂಗರಿಸಿ
ಮತ್ತೆ ಕಾಸಿದ ಹಾಲು ಹಣ್ಣು ಸಕ್ಕರೆ ಕೊಟ್ಟು
ಎತ್ತಿ ಬೆಳಗುವ ಮುತ್ತಿನಾರುತಿ ವಿಠಲ ೪

ಪಾಪರಹಿತ ಏಳು ಪಾವನ್ನ ರೂಪ ಏಳು
ಗೋಪಾಲಕೃಷ್ಣವಿಠಲ ಹರಿ ಏಳು
ಶ್ರೀಪದ್ಮಭವಮುಖರಾಪಾರ ಮುನಿಗಳು
ರೂಪ ನೋಡಲು ಇಲ್ಲಿ ಕಾದಿಹರೇಳಯ್ಯ ೫

## ೧೬

ಓಡಿ ಬಾ ನಿನ್ನ ಎತ್ತಿ ಮುದ್ದಾಡುವೆ ನಾಗಶಯನ ರಂಗನೇ ಪ.

ನಾಗಶಯನ ರಂಗನೆ, ನಾಗಶಯನ ರಂಗನೇ ಅ.ಪ.

ಕುಣಿ ಕುಣಿಯುತ ಗೆಜ್ಜೆ ಝುಣ ಝುಣರೆನ್ನೆ ಕೃಷ್ಣಾ
ಫಣಿಶಾಯಿ ನಿನ್ನ ನಾ ಕ್ಷಣದಲ್ಲಿ ಬಿಗಿದೂ ೧

ಚಿನ್ನರೊಡನೆಗೂಡಿ ಮಣ್ಣನೆ ಮೆಲ್ಲದಿರೂ ಕೃಷ್ಣಾ
ಅಣ್ಣಯನೊಡನಾಡೊ ಚಿನ್ನ ಗೋಪಾಲನೇ ೨

ಗೋಪಿಯರೊಡನಾಡಿ ಗೋಕುಲಾಂಬುಧಿ ಚಂದ್ರ
ಗೋಪಾಲಕೃಷ್ಣವಿಠಲ ಗೋವಳರೊಡೆಯ ೩

## ೧೭

ಕರಪಿಡಿದು ಕಾಯೊ ಶ್ರೀ ಕರುಣಾಳು ಧನ್ವಂತ್ರಿ
ವರ ವೆಂಕಟಾದ್ರಿವಾಸ ಪ.

ತರಳೆ ಸೇವೆಯ ಕೊಂಡು ಪರಿಪರಿಯ ಬಗೆಯಿಂದ
ವರ ಕೃಪೆಯ ಮಾಡೊ ಸ್ವಾಮಿ ಪ್ರೇಮಿ ಅ.ಪ.

ಆವ ಪರಿಯಿಂದ ಜಗದೊಳು ನೋಡೆ ಕಾವರಿ
ನ್ನಾವರುಂಟೆಲೊ ದೇವನೆ
ಪಾವಮಾನಿಯ ಪ್ರೀಯ ಪರಿಪರಿಯ ಪಾಪ ಫಲ
ದೀವಿಧದ ಬವಣೆಯನ್ನೇ
ನೀ ವಿಚಾರಿಸಿ ಕಾಯೊ ನಿನ್ನ ಶರಣ್ಹೊಕ್ಕಮೇ–
ಲಾವ ಸಂಶಯ ಕಾವನೇ
ಪಾವಕನ ತೆರದಿ ಭಸ್ಮವ ಮಾಡಿ ದುಷ್ಕರ್ಮ
ಜೀವಕ್ಹಿತ ಕೊಡು ಪ್ರೀತನೇ । ಇನ್ನೇ ೧

ಸುರರ ವ್ಯಾಕುಲ ಬಿಡಿಸಿ ಅಮರ ಪಕ್ಷವ ವಹಿಸಿ
ವರ ಸುಧೆಯನವರಿಗುಣಿಸೀ
ದುರುಳ ಸಂಘವ ಕೊಲಿಸಿ ಸುರ ರಾಜ್ಯಸ್ಥಿರಪಡಿಸಿ
ಪರಿಪರಿಯ ಸೌಖ್ಯ ಸುರಿಸೀ
ಮರೆದೆಯೋ ಗುಣಸಿಂಧು ನಿನ್ನ ಸೇವಕಳೆಂದು
ಪರಿಕರಿಸಿ ನೀನೀಕ್ಷಿಸೀ
ಪೊರೆಯದಿದ್ದರೆ ನಿನ್ನ ಬಿರುದುಳಿವ ಪರಿ ಕಾಣೆ
ಹರಿಸು ಭಯ ಶ್ರೀ ನರಹರೇ । ಶೌರೇ ೨

ಬರಿದು ಮಾಡದೆ ಎನ್ನ ಬಿನ್ನಪವ ಪೊರೆಯ ಬೇ–
ಕರವಿಂದ ದಳ ನೇತ್ರನೇ
ಗುರು ಹಿರಿಯರುಕ್ತಿಯಲ್ಲದೆ ಎನ್ನದೆಂಬುವ್ರೋ
ಗರುವ ನುಡಿಯಲ್ಲ ನೀನೇ
ಚರಣ ಸೇವಕರ ಪೊರೆವಂಥ ವಿಶ್ವಾತ್ಮಕನೆ
ಪರಿಹರಿಸು ಕ್ಲೇಶಗಳನೇ
ಕರುಣಿ ಶ್ರೀ ಗೋಪಾಲಕೃಷ್ಣವಿಠ್ಠಲ ಶೇಷ–
ಗಿರಿನಿಲಯ ಭಕ್ತ ಪ್ರೀಯಾ । ಜೀಯಾ ೩

## ೧೮

ಕರಿಗಿರೀಶ ನಿನ್ನ ಬೇಡುವೆನೀಗ
ಪರಿಪಾಲಿಸೊ ಸತತ ಪ.

ನರಹರಿ ಭಕ್ತರ ಪೊರೆಯುವೆ ನೀನೆಂ--
ದರುಹಿದರೆನಗೆ ಶ್ರೀ ಗುರುಗಳು ಇಂದು ಅ.ಪ.

ನಾರಸಿಂಹ ನಿನ್ನ ಸಾರಿ ಭಜಿಸುವೆನು
ತೋರೊ ನಿನ್ನ ಪದವ
ಬಾರಿಬಾರಿಗೆ ಸ್ತುತಿಸಲು ಬಾಲನು
ಘೋರ ದೈತ್ಯನ ಸೀಳಿ ಪೊರೆದೆಯೊ ೧

ಶೇಷಾಂತರ್ಗತ ನಾರಸಿಂಹ ವಿ–
ಶೇಷ ಮಹಿಮೆ ತೋರೊ
ಶೇಷಶಯನ ಮಹರುದ್ರಾಂತರ್ಗತ
ಪೋಷಿಸೊ ಭಕ್ತರ ಶಾಂತರೂಪದಿ ೨

ಲೀಲೆಯಿಂದ ಶ್ರೀ ಲಕುಮಿ ಹಿತದಿ
ವ್ಯಾಳಶಯನನಾಗಿ
ಪಾಲಿಸಬೇಕೆನ್ನನು ಸತತದಿ ಗೋ–
ಪಾಲಕೃಷ್ಣವಿಠ್ಠಲ ನೀ ದಯದಿ ೩

## ೧೯

ಕರುಣ ಬಾರದೆ ವಿಠ್ಠಲಾ । ಶ್ರೀ ಪಾಂಡುರಂಗ ಪ.

ಶರಣಳಲ್ಲವೆ ನಿನ್ನ ಚರಣ
ಸ್ಮರಣೆ ಮಾಡುತ ಪೊರೆ ಎಂದೆನ್ನುತ
ವರಲುವಾ ಧ್ವನಿ ಕೇಳದೇ ಈ
ಪರಿಯ ಗರ್ವವಿದೇನೊ ಹರಿಯೆ ಅ.

ದೂರದಿಂದಲಿ ಬಂದೆನೋ । ಇಲ್ಲಿಂದ ಮುಂದೆ
ದಾರಿ ಕಾಣದೆ ನಿಂದೆನೋ
ದ್ವಾರಕಾಪತಿ ನೀನಲ್ಲದಿ
ನ್ನಾರು ಕಾಯುವರೀಗ ಪೇಳು
ಸಾರಿದೆನು ನಿನ್ನಂಘ್ರಿ ಕಮಲವ
ಚಾರು ಚರಿತನೆ ಮಾರನೈಯ್ಯ ೧

ತನುಸುಖ ಬೇಡಲಿಲ್ಲಾ । ನಿನ್ನ ನಾನು
ಘನವಾಗಿ ಕಾಡಲಿಲ್ಲ
ಮನದ ಹಂಬಲ ನೀನೆ ಬಲ್ಲೆಯೊ
ಮನಕೆ ತಾರದೆ ಸುಮ್ಮನಿಪ್ಪೆಯೋ
ಎನಗೆ ಪ್ರೇರಕ ನೀನೆ ಅಲ್ಲವೆ
ನಿನಗೆ ದಾಸಳು ನಾನು ಅಲ್ಲವೆ ೨

ಕರೆಕರೆ ಪಡಿಸುವುದೂ । ಸರಿಯಲ್ಲ ನಿನಗೆ
ಕರಿವರದ ಕೇಳು ಇದೂ
ನರಸಖನೆ ದಯದಿಂದ ನಿನ್ನ
ಚರಣ ದರುಶನವಿತ್ತೆ ಒಲಿದು
ಕರಪಿಡಿದು ಸಲಹೆಂದರೀಗ
ತೆರೆದು ನೋಡದೆ ನೇತ್ರವಿರುವರೆ ೩

ಜ್ಞಾನಿ ಹೃತ್ಕಮಲವಾಸ । ಶ್ರೀ ರುಕ್ಮಿಣೀಶ
ಭಾನುಕೋಟಿ ಪ್ರಕಾಶ
ನೀನೆ ಗತಿ ಇನ್ನಿಲ್ಲ ಅನ್ಯರು
ಸಾನುರಾಗದಿ ಸಲಹೊ ಎನ್ನಲು
ಆನನದಿ ಈಕ್ಷಿಸದೆ ನಿಂತರೆ
ಮಾನ ಉಳಿವುದೆ ಭಕ್ತವತ್ಸಲ ೪

ಇಟ್ಟಿಗೆ ಕೊಟ್ಟವನೊ ಕೊಟ್ಟನಿನ್ನೇನು
ಅಷ್ಟು ಭಾಗ್ಯವನೂ
ಕೊಟ್ಟೆ ಬಡ ಬ್ರಾಹ್ಮಣನ ಅವಲಿಗೆ
ದೃಷ್ಟಿ ಬಿದ್ದರೆ ಕಷ್ಟ ಉಂಟೆ
ಕೊಟ್ಟು ಅಭಯ ಪೊರೆ ಗೋಪಾಲ-
ಕೃಷ್ಣವಿಠ್ಠಲ ಮನದಿ ತೋರೋ ೫

## ೨೦

ಕರುಣಿಸೈ ಶ್ರೀ ರಾಮ ಕೌಸಲ್ಯ ಪ್ರೇಮ
ಶರಣ ಜನಕನು ಪೊರೆವ ಕಾರುಣ್ಯಧಾಮ ಪ.

ದಶರಥಾತ್ಮಜ ಯಜ್ಞ ಕಾಯ್ದು ಸೀತೆಯ ವರಿಸಿ
ಕುಶಲದಿಂದಲಿ ಬಂದು ನಗರದಲ್ಲಿರಲೂ
ದಶರಥನ ಆಜ್ಞೆಯಲಿ ಸತಿ ಅನುಜಸಹ ವನದಿ
ನಸುನಗುತ ಚರಿಸಿ ರಕ್ಕಸರ ಸದೆಬಡಿದೆ ೧

ಸತಿಯೆ ಕಳೆದಿರೆ ಹನುಮ ಹಿತವಾರ್ತೆ ಬಿನ್ನೈಸೆ
ಹತಗೈದು ರಾವಣಾದಿಗಳನೆಲ್ಲ
ಹಿತದ ರಾಜ್ಯದ ವಿಭೀಷಣ ರವಿಜರಿಗೆ ಇತ್ತು
ವ್ರತ ಬಿಡಿಸಿ ಭರತನಿಗೆ ಧರಣಿಯಾಳಿದನೇ ೨

ಪಟ್ಟಾಭಿರಾಮ ಮಂಗಳ ನಾಮ ಕೃಪೆಯಿಂದ
ಇಷ್ಟಾರ್ಥವೀಯೊ ಸನ್ಮಂಗಳವನೂ
ದಿಟ್ಟ ಶ್ರೀ ಹನುಮ ವಂದಿತ ಚರಣ ನಮಿಸುವೆನು
ಶ್ರೇಷ್ಠ ಶ್ರೀ ಗೋಪಾಲಕೃಷ್ಣವಿಠ್ಠಲನೇ ೩

## ೨೧

ಕಂಟಕದ ಭವ ಹರಿಸೊ ಕರುಣಾ ಜಲಧಿ
ನೆಂಟ ನೀನಾಗಿ ಹೃನ್ಮಂಟಪದೊಳಗೆ ಪ.

ಎಂಟಕ್ಷರ ನುತನೆ ಎಂಟು ರೂಪಾತ್ಮಕನೆ
ಎಂಟು ಮೂರು ತತ್ವ ನಿರ್ಮಿಸಿಹನೆ
ಎಂಟು ದಳದಲಿ ನಿಂತು ಎಂಟು ವಿಧ ಪ್ರೇರಿಸುತ
ಎಂಟು ದಿಕ್ಪತಿಗಳಿಂ ಸೇವೆ ಕೊಳುತಿಹನೆ ೧

ಎಂಟು ವಿಧ ಕರ್ತೃವೆ ಎಂಟು ಭಾಗ್ಯಯುತನೆ
ಎಂಟು ಬಾಹು ಎಂಟು ಆಯುಧಧರನೆ
ಎಂಟು ಪತ್ನಿಯರಿಂದ ಎಂಟನೇ ಅವತಾರಿ
ನೆಂಟರೊಡನೆ ಜಗದ ಕಂಟಕರ ಸದೆದನೆ ೨

ಎಂಟೆರಡು ಕಲೆಪೂರ್ಣ ವೆಂಕಟರಮಣನೆ
ಎಂಟು ವಿಧ ಮದಗಳನು ಭೇದಿಸುತಲಿ
ಎಂಟೆರಡು ಒಂದು ಇಂದ್ರಿಯ ನಿನ್ನ ಕಡೆ ಮಾಡಿ
ಭಂಟನೆನಿಸೆನ್ನ ಶ್ರೀ ಗೋಪಾಲಕೃಷ್ಣವಿಠಲ ೩

## ೨೨

ಕಂಡು ಎಂದಿಗೆ ಧನ್ಯಳಾಗುವೆ ನಾನು
ಪಂಡರೀಶನ ಪಾದ ಪುಂಡರೀಕವನೂ ಪ.

ಪುಂಡರೀಕನಿಗೊಲಿದು ಒಂದು ಇಟ್ಟಿಗೆ ಮೇಲೆ
ಪಾಂಡವರ ಪ್ರಿಯ ಬಂಧು ನೆಲಸಿದಂಥಾ
ಪಂಡರೀ ಕ್ಷೇತ್ರದಲಿ ಚಂದ್ರಭಾಗದಿ ಮಿಂದು
ಮಂಡೆ ಬಾಗುತ ಹರಿಗೆ ಪಿಂಡಘವ ಕಳೆದೂ ೧

ಕೋಮಲದ ಚರಣಕಭಿನಮಿಸಿ ಕರಯುಗದಿಂದ
ಶ್ಯಾಮವರ್ಣನ ಪಾದಕಮಲ ಮುಟ್ಟೆ
ಆ ಮಹಾ ಆನಂದ ಅನುಭವಿಪ ಭಾಗ್ಯವನು
ಶ್ರೀ ಮಹಾಲಕುಮಿಪತಿ ಎಂದು ಕಾಂಬುವೆನೋ ೨

ಆಪಾರಭಕ್ತರಿಗೆ ವಲಿದ ವಿಠಲನ ಮೂರ್ತಿ
ಆಪಾದ ಮೌಳಿ ಈಕ್ಷಿಸುತ ಹೃದಯದಲಿ
ಇರ್ಪಮೂರ್ತಿಯ ತಂದು ಗುರುಬಿಂಬ ಸಹಿತದಲಿ
ಗೋಪಾಲಕೃಷ್ಣವಿಠಲನ ಎಂದು ಕಾಂಬೆ ೩

## ೨೩

ಕಂಡೆ ಕನಸಿನಲಿ ನಾ ಪಾಂಡುರಂಗನ
ಮಂಡೆ ಇಡುತಲಿ ಪುಂಡಲೀಕ ಚರಣದಲೀ ಪ.

ಪಂಡರೀಕ್ಷೇತ್ರದಲಿ ವಿಠ್ಠಲನ ದರ್ಶನಕೆ
ದಂಡೆ ಹಾರ ಕೊಂಡು ಪೋಗುತಿರಲೂ
ಹಿಂಡು ಜನ ಊಟಕೆಡೆ ಅಣಿಮಾಡುತಿರಲಲ್ಲಿ
ಕಂಡು ಸಾಗುತ ಮುಂದೆ ದ್ವಾರದೆಡೆ ಬಂದು ೧

ನಂತರದಿ ದ್ವಾರಗಳು ಮುಚ್ಚಿರಲು ಕಂಡು ಬಹು
ಚಿಂತಿಸಲು ಅಲ್ಲೊಬ್ಬ ಬರಲು ಅವಗೇ
ಅಂತರಂಗವನುಸುರೆ ಕದ ತೆರೆದು ನೋಡೆನಲು
ಸಂತೋಷದಿಂದೆರಡು ದ್ವಾರಗಳ ತೆರೆದೇ ೨

ರತಿಪತಿಯ ಬಿಂಬ ಶ್ರೀ ಪ್ರದ್ಯುಮ್ನವಿಠ್ಠಲನ
ಮೂರ್ತಿಯನೆ ಕಂಡು ಹಾರವನ್ಹಾಕಿ ನಮಿಸಿ
ಅತಿ ಪ್ರೀತಿ ಭಕ್ತಿಯಲಿ ಅಪ್ಪಿ ನಾ ಮೈ ಮರತೆ
ಸ್ತುತಿಸುತಲಿ ಗೋಪಾಲಕೃಷ್ಣವಿಠ್ಠಲನನಾ ೩

## ೨೪

ಕಂಡೆ ಕಂಡೆ ಪಂಡರೀಶನ । ಕಂಡೆ ಕಂಡೆ ಪ.

ಕಂಡೆ ಪಂಡರಿಪುರದಿ ಮೆರೆವನ
ಕಂಡೆ ಭಕ್ತರ ಕಾವ ಬಿರುದನ
ಕಂಡೆ ಮಂಡೆಯ ಚರಣದಲ್ಲಿಡೆ
ಹಿಂಡು ಅಘಗಳ ತರಿವ ವಿಠಲನ ಅ.ಪ.

ಕಟಿಯಲೀ ಕರವಿಟ್ಟು ಮೆರೆವನ
ಹಟದಿ ವಗದಿಟ್ಟಿಗೆಲಿ ನಿಂತನ
ಸ್ಪಟಿಕ ಹಾಟಕ ಕಟಕ ಮಕುಟನ
ವಟದೆಲೆ ಮೇಲೊರಗಿದಂಥನ
ಕುಟಿಲ ಕುಂತಳ ಫಣಿಯ ತಿಲುಕನ
ತ್ರುಟಿಯು ತೆರವಿಲ್ಲದಲೆ ನಮಿತನ
ವಟುವೆನಿಸಿ ಬಲಿರಾಯಗೊಲಿದನ
ನಟನೆಗೈಯ್ಯುವ ದಿವ್ಯರೂಪನ ೧

ಚಂದ್ರಭಾಗಾ ತೀರದಲ್ಲಿಹನ
ಚಂದ್ರ ಕೋಟಿಸ್ಮರನ ರೂಪನ
ಇಂದಿರೆಯ ಸಹಿತದಲಿ ನೆಲಸುತ
ಚಂದ್ರದ್ವಾರಗಳಿಂದಲೆಸವನ
ಬಂದ ಭಕ್ತರ ಭೇದ ನೋಡದೆ
ಸಂದರುಶನಾನಂದವೀವನ
ಚಂದ್ರಮಂಡಲ ಮಧ್ಯವರ್ತಿಯ
ಚಂದ್ರಕುಲಕೆ ತಾ ಚಂದ್ರನೆನಿಪನ ೨

ವಿಠ್ಠಲನ ಪುರದಲ್ಲಿ ಹರಿಯುವ
ಶ್ರೇಷ್ಠ ಇಂದುಭಾಗೆಯಲಿ ಮಿಂದು
ಮುಟ್ಟಿ ವಿಠಲನ ಚರಣಕಮಲವ

ಬಿಟ್ಟು ಮನದ್ದಂಬಲಗಳೆಲ್ಲವ
ವಿಠ್ಠಲಾ ನೀನೆ ಗತಿ ಕೈ
ಗೊಟ್ಟು ಕಾಯೆಂದೆನುತ ಸ್ತುತಿಸಿ
ಕಷ್ಟಹರ ಗೋಪಾಲಕೃಷ್ಣ
ವಿಠ್ಠಲನ ಚರಣಾಂಬುಜಗಳನು ೩

## ೨೫

ಕಂಡು ಧನ್ಯಳಾದೆ ನಾ
ಪಾಂಡುರಂಗವಿಠಲನಾ ಪ.

ಕಂಡು ಧನ್ಯಳಾಧೆ ಹರಿಯ
ಪುಂಡರೀಕ ಪದದಿ ಎನ್ನ
ಮಂಡೆ ಇಟ್ಟು ವಂದಿಸುತಲಿ
ಪುಂಡರೀಕ ವರದ ನಾ ಅ.

ದೂರದಿಂದ ಬಂದು ಹರಿಯ
ಸೇರಿವಂದಿಸುತಲಿ ಈಗ
ಹಾರಹಾಕಿ ನಮಿಸಿ ಮನೋ
ಹಾರ ನೋಡಿ ದಣಿದೆನಿಂದು ೧

ಗುರುಗಳಂತರ್ಯಾಮಿ ಹರಿಯ
ಇರಿಸಿ ಎನ್ನ ಬಿಂಬ ಸಹಿತ
ಸ್ಮರಿಸಿ ಚಿಂತಿಸಿ ವಿಠಲನಲ್ಲಿ
ಕರುಣಮೂರ್ತಿ ಪಾಂಡುರಂಗನ ೨

ಗುರುಪುರಂದರ ಸ್ತಂಭ ಕಂಡೆ
ವರದ ಚಂದ್ರಭಾಗ ತೀರದಿ
ಚರಣ ಇಟ್ಟಿಗೆಯಲಿ ಇಟ್ಟು
ಸಿರಿ ಗೋಪಾಲಕೃಷ್ಣವಿಠಲನ ೩

## ೨೬

ಕಂಡು ನಮಿಸಿದೆ ನಿನ್ನ । ಕಡಗೋಲ ಪಿಡಿ–
ದುದ್ದಂಡ ದೇವವರೇಣ್ಯ
ತಾಪತ್ರಯಗಳಘ ಹಿಂಡು
ಓಡಿಸು ರನ್ನ ಪೊರೆ ಸುಪ್ರಸನ್ನ ಪ.

ಕಂಡೆ ನಿನ್ನಯ ಬಾಲರೂಪವ
ಪುಂಡರೀಕದಳಾಯತಾಕ್ಷನೆ
ಕುಂಡಲೀಶಯ ನಿನ್ನ ಚರಣದಿ
ದಂಡವಿಕ್ಕುವೆ ಗೋಪಿಬಾಲ ಅ.ಪ.

ಜನನ ಮರಣದಿ ನೊಂದೆ । ಶ್ರೀ ಜಾನಕೀಪತೆ
ಪ್ರಣತ ಜನರಿಗೆ ತಂದೆ । ನೀ ಕಾಯದಿದ್ದರೆ
ಘನವೆ ನಿನಗಿದು ಎಂದೆ । ಪಾಲಿಪುದು ಮುಂದೆ
ಜನಮ ಜನುಮದ ಕರ್ಮಗಳ ನಾ
ಅನುಭವಿಸಿ ಪೂರೈಸಲಾಪೆನೆ
ಘನಮಹಿಮ ದಯ ಮಾಡಿದಲ್ಲದೆ
ಕೊನೆಯ ಕಾಣೆನು ವಿಷಯ ವಾಸನೆ
ವನಜ ಸಂಭವ ಪವನ ರುದ್ರಾ
ದ್ಯನಿಮಿಷರಿಗಿನಿತಿಲ್ಲ ಮಹಿಮೆಯು
ನಿನಗೆ ಮೀರಿದರುಂಟೆ
ದನುಜದಲ್ಲಣ ದಯದಿ ಸಲಹೊ ೧

ಕಾಮಪಿತ ಮಧ್ವೇಶ । ಸೌಂದರ್ಯ ಸಾರ
ತಾಮಸರ ವಿಧ್ವಂಸ । ಸಜ್ಜನರ ಕಾಯುವ
ಕೋಮಲಾಂಗನೆ ಶ್ರೀಶ । ಲಕ್ಷ್ಮೀ ನಿವಾಸ
ಹೋಮಕುಂಡದಿ ಪುಟ್ಟಿದಾ ಸತಿ
ಕಾಮಿಗಳ ಉಪಟಳಕೆ ಸಹಿಸದೆ
ಶ್ರೀ ಮನೋಹರ ಕಾಯೊ ದ್ವಾರಕೆ

ಧಾಮ ನೀ ಗತಿ ಎನುತವರಲೆ
ಪ್ರೇಮದಿಂದಕ್ಷಯವನಿತ್ತ
ನಾಮ ಮಂಗಳ ನಿರ್ಮಲಾತ್ಮಕ
ಸೋಮಶತಪ್ರಭ ಸೌಮ್ಯರೂಪ ತ್ರಿ–
ಧಾಮ ಭಕ್ತರ ಕಾಮಿತಾರ್ಥನೆ ೨

ಆದಿಮಧ್ಯವಿದೂರ । ಆನಂದ ಪೂರ್ಣ
ಸಾಧು ಮನದಿ ವಿಹಾರ । ಸರ್ವಜ್ಞರಾಯರ
ಹಾದಿ ತೋರಿಸೊ ಧೀರ । ಸುಜ್ಞಾನಸಾರ
ವೇದ ಶಾಸ್ತ್ರಗಳರ್ಥವರಿಯೆನು
ಮಾಧವನೆ ಮಮಕಾರದಲಿ ನಾ
ಹಾದಿ ತಿಳಿಯದೆ ನೊಂದೆ ಅಜ್ಞತೆ
ಹೋದಡಲ್ಲದೆ ನಿನ್ನ ಕಾಣುವ
ಮೋದ ಬರುವುದೆ ಮಧ್ವವಲ್ಲಭ
ಭೇದ ಮತಿ ಕೊಡು ತಾರತಮ್ಯದಿ
ನೀ ದಯದಿ ಒಲಿದೆನ್ನ ಮನದಲಿ
ಆದರದಿ ನೆಲೆಸಿನ್ನು ಪೊಳೆಯೊ ೩

ಕಡಲಶಯನನೆ ಶ್ರೀಶ । ಕಡಗೋಲ ಕೈ
ಪಡುಗಡಲ ತೀರದಿ ವಾಸ । ಕಮಲೇಶ ನಾ ನಿ–
ನ್ನಡಿಯ ಕಂಡೆನು ನಾಶ । ರಹಿತನೆ ಪ್ರಕಾಶ
ಎಡೆಬಿಡದೆ ನಿನ್ನಸ್ಮರಿಪ ಧ್ಯಾನವ
ಕೊಡುತ ಮಧ್ಯದಿ ತಡೆವ ಸಂಸೃತಿ
ತಡೆದು ಸಂತ ಚಿಂತನೆಯ ದೃಢ
ಒಡಲೊಳಗೆ ನೆಲೆಸಯ್ಯ ಬಿಡದೆ
ಕಡಲಸುತೆ ಪತಿ ಕಡಲ ಸತಿ ಪಿತ
ಕಡಲವಾಸನೆ ಕಡಲ ಬಂಧನ
ಕಡಲ ಮಧ್ಯದಿ ಪುರವ ರಚಿಸಿದೆ
ಕಡು ದಯಾಂಬಯಧೆ ಕಾಯೊ ಸತತ ೪

ಅಷ್ಟಯತಿ ನುತಪಾದ । ಸುಖ ತೀರ್ಥ ಹೃದಯ
ದೀಕ್ಷಿತನೆ ಸನ್ಮೋದ । ಸಜ್ಜನರ ಮನದಾ
ಭೀಷ್ಟವೀವ ಪ್ರಮೋದ । ಕರುಣಿ ಸುಪ್ರಸೀದ
ಕೊಟ್ಟೆ ಮನು ಮುನಿಗಳಿಗೆ ಜ್ಞಾನವ
ತುಷ್ಟಿಪಡಿಸುತ ಸುರರ ಸುಧೆಯಲಿ
ಕುಟ್ಟಿ ಅಸುರನ ಕೋರೆದಾಡಿಲಿ
ದಿಟ್ಟ ನರಹರಿ ಬ್ರಹ್ಮಚಾರಿ
ಕುಟ್ಟಿ ಅರಸರ ಕಟ್ಟಿ ಜಟೆಯನು
ಮಟ್ಟಿ ಕಂಸನ ಬಿಟ್ಟು ವಸನವ
ದಿಟ್ಟ ಕಲ್ಕಿ ಗೋಪಾಲಕೃಷ್ಣ
ವಿಠ್ಠಲನೆ ಶ್ರೀ ಉಡುಪಿಲೋಲ ೫

## ೨೭

ಕಾಯಬೇಕೆನ್ನ ಕರುಣದಲಿ ಧನ್ವಂತ್ರಿ
ಶ್ರೀಯರಸ ನರಹರಿಯೆ ಪ್ರಾರ್ಥಿಸುವೆ ನಿನ್ನ ಪ.

ಸುರರಿಗೆ ಮರಣ ಕಾಲವು ಪ್ರಾಪ್ತವಾಗಲು
ಗಿರಿಯಿಂದ ಶರಧಿಯನು ಮಥಿಸೆ ಪೇಳಿ
ಕರುಣದಿಂದಮೃತ ಕರದಿಂದ ಸುರರಿಗೆ ಎರೆದು
ಜರೆ ಮೃತ್ಯು ಬಿಡಿಸಿದಗೆ ಇದು ಒಂದು ಘನವೆ ೧

ಸಕಲ ನಾಡಿಗಳಲ್ಲಿ ಚೇಷ್ಟಪ್ರದ ನೀನಾಗಿ
ಸಕಲ ವ್ಯಾಪಾರಗಳ ನಡೆಸುತಿರಲು
ಯುಕುತಿಯಿಂದಲಿ ನಾಡಿ ನೋಡಿ ತಿಳಿಯುವನ್ಯಾರೊ
ಮುಕುತಿದಾಯಕ ನಿನಗೆ ಇದು ಒಂದು ಘನವೆ ೨

ಅನಾದಿಯಿಂದ ಅಪಥ್ಯದಲಿ ನರಳುವೆನೊ
ಈಗ ಪಥ್ಯವ ಮಾಳ್ಪ ಬಗೆ ಯಾವುದೊ
ಶ್ರೀನಿವಾಸನೆ ನಿನ್ನ ಧ್ಯಾನವೆ ಔಷಧವೊ
ಶ್ರೀ ಗುರುಗಳಾಜ್ಞೆಯೆ ಪಥ್ಯವೆನಗಿನ್ನು ೩

ಭಕ್ತಪ್ರಹ್ಲಾದನನು ಯುಕ್ತಿ ಶಕ್ತಿಗಳಿಂದ
ಮುಕ್ತಿಮಾರ್ಗವ ತೋರಿ ಸಲಹಲಿಲ್ಲೇ
ಭಕ್ತಿಹೀನರನೆ ಕಂಡು ಎನ್ನ ರಕ್ಷಿಸದಿರಲು
ಯುಕ್ತವೇ ನಿನಗಿನ್ನು ಭಕ್ತಪಾಲಕನೆ ೪

ನಿನ್ನ ದಾಸತ್ವದಲಿ ನೆಲಸಬೇಕಾದರೆ
ಬಿನ್ನಣದ ರೋಗಗಳ ಪರಿಹರಿಸಿ ಸಲಹೊ
ನಿನ್ನವರಾದ ಮೇಲಿನ್ನು ಕಾಯದೆ ಇಹರೆ
ಘನ್ನ ಶ್ರೀ ಗೋಪಾಲಕೃಷ್ಣವಿಠ್ಠಲನೆ ೫

## ೨೮

ಕೊಳಲಕೃಷ್ಣ ಬಂದು ನಿಲ್ಲೊ ಹೃದಯ ಕಮಲದಿ
ನಳಿನನಾಭ ನಿನ್ನ ದಿವ್ಯ ಚಲುವ ರೂಪದಿ ಪ.

ಶಿರದಿ ಮಕುಟ ಫಣೆಯ ತಿಲುಕ ಒಲಿವ ಮುಂಗುರುಳು
ಸರಸಿದಳ ನಯನ ನಾಸಿಕ ಗಲ್ಲ ಹೊಳೆಯುತ ೧

ಕರ್ಣದಲಿ ಕುಂಡಲಗಳು ಸ್ವರ್ಣ ಕಂಠವು
ನಿನ್ನ ದಂತ ಹೊಳೆಯುತಿರಲು ಚನ್ನ ಶ್ರೀಹರಿಯೆ ೨

ಕೊಳಲ ನಾದಗೈವೊ ಅಧರ ಉರದಿ ಲಕ್ಷ್ಮಿಯು
ನಳಿತೋಳಿನಲಿ ಶಂಖ ಚಕ್ರ ವೇಣು ಪಿಡಿದಿಹ ೩

ಹಾರ ಪದಕ ಕಮಲ ಮಾಲೆ ಮೇಲೆ ತುಳಸಿಯು
ಮಾರಜನಕ ಹೊಳೆವೊ ಜರಿಯ ಪೀತ ವಸನವು ೪

ರಕ್ತವರ್ಣ ವಸನ ಉಟ್ಟು ಕಟ್ಟಿ ಕಿರುಗೆಜ್ಜೆ
ಮುಕ್ತರೊಡೆಯ ಮುಕ್ತಿಕೊಡುವ ಪಾದಕಮಲವು ೫

ಶೇಷಶಯನ ಎನ್ನ ಮನದಿ ಕ್ಲೇಶ ಕಳೆಯುತ
ದಾಸ ಜನರ ಕಾಯ್ವ ಕೃಷ್ಣ ಘಾಸಿಗೊಳಿಸದೆ ೬

ಗುರುಗಳಲ್ಲಿ ನಿಂತು ಎನ್ನ ಹರುಷಪಡಿಸೊ ನೀ
ಪರಮಪುರುಷ ನರಹರಿಯೆ ದುರಿತದೂರನೆ ೭

ನೀರೊಳಾಡಿ ಭಾರಪೊತ್ತು ಕೋರೆ ತೋರಿದೆ
ಘೋರರೂಪಿ ಬ್ರಹ್ಮಚಾರಿ ಕ್ಷತ್ರಿಯಾರಿ ನೀ ೮

ಶ್ರೀ ಹರಿ ರಾಮ ಕೃಷ್ಣ ಬೌದ್ಧ ಕಲ್ಕಿಯೆ
ಗೋಪಾಲಕೃಷ್ಣವಿಠ್ಠಲ ರೂಪ ತೋರೊ ನೀ ೯

## ೨೯

ಕೊಳಲನೂದುವ ನಮ್ಮ ಚಲುವ ಕೃಷ್ಣಯ್ಯ
ನಳಿನಾಕ್ಷಿಯರ ಮಧ್ಯೆ ಪೊಳೆವ ರಂಗಯ್ಯ ಪ.

ಕರದ್ವಯದಲಿ ಶಂಖ ಚಕ್ರಪಿಡಿದಿಹ
ಕಿರುನಗೆ ನಗುತ ಸುಲಿಪಲ್ಲಿನ ಚಲುವ
ಸ್ವರಗಳ ಪಿಡಿಯುತ ವೇಣು ನುಡಿಸುವ
ಸರಸಿಜನಾಭ ಹೃನ್ಮಂದಿರದಿ ಮೆರೆವ ೧

ಜಗವ ಮೋಹಿಸುವಂಥ ನಗೆಯ ಮೊಗ ಚೆಲುವ
ಹೆಗಲು ಎಡದಲ್ಲಿ ಗಲ್ಲ ತಗುಲಿಸಿ ಇರುವ
ಖಗವಾಹನ ಹಸ್ತ ಸತಿ ಹೆಗಲಲಿ ಇಡುವ
ನಗಧರ ನರ್ತನವಾಡಿ ಮುದವೀವ ೨

ಕಾಲಕಡಗ ಗೆಜ್ಜೆ ಪಾಡಗರುಳಿಯು
ಮೇಲೆ ಪೀತಾಂಬರ ಜರಿಯ ವೈಭವವು
ಸಾಲ ಮುತ್ತಿನಹಾರ ಪದಕದ್ವಜ್ರಗಳು
ಓಲಾಡುವ ನೀಲಾಂಬರ ಹೊದ್ದಿಹ ಒಲಪು ೩

ಕಂಠ ಕೌಸ್ತುಭಮಣಿ ಅಧರದ ಕೆಂಪು
ಒಂಟಿ ಚೌಕುಳಿ ಕರ್ಣ ಕದಪು ಕನ್ನಡಿಯು
ಬಂಟರಾದವರನ್ನು ಪೊರೆಯುವ ದೃಷ್ಟಿ ವೈ –
ಕುಂಠನ ನಾಸಿಕ ಫಣೆಯ ತಿಲುಕವು ೪

ಶ್ರೀಪತಿ ಮುಂಗುರುಳು ಶಿರದಲ್ಲಿ ಮಕುಟ
ಪಾಪವ ದಹಿಸುವ ಪಾವನ ವೇಣು
ಆಪಾದ ಮೌಳಿಯ ರೂಪದ ಚಲುವ
ಗೋಪಾಲಕೃಷ್ಣವಿಠ್ಠಲ ಎನ್ನ ಕಾವ ೫

## ೩೦

ಗುರು ಅಂತರ್ಯಾಮಿ ಶ್ರೀನಿವಾಸ
ಸಿರಿರಮಣ ಶ್ರೀ ಕೃಷ್ಣ ಶ್ರೀನಿಧಿಯೆ ಶ್ರೀಶ ಪ.

ಸೃಷ್ಟಿಕರ್ತನೆ ನಿನ್ನ ಲಕ್ಷಿದೇವಿಯು ಸತತ
ಶ್ರೇಷ್ಠತನದಲ್ಲಿ ಪೂಜೆ ಮಾಡುತಿಹಳೊ
ಅಷ್ಟು ದೇವತೆಗಳು ಆಗಮವನನುಸರಿಸಿ
ಶಿಷ್ಟೇಷ್ಟನೆಂತೆಂದು ಪೂಜೆ ಮಾಡುವರೋ ೧

ಅಣು ನಾನು ನಿನ್ನ ಅರ್ಚಿಸ ಬಲ್ಲೆನೇ ದೇವ
ಘನಮಹಿಮ ಸ್ವೀಕರಿಸೊ ಅಲ್ಪ ಸೇವೆ
ಮನ ಮಂದಿರದಿ ನಿಂತು ಅನುಗಾಲ ನಿನ್ನ ದಿವ್ಯ
ಘನ ಮೂರ್ತಿಯನೆ ತೋರೋ ಪೂಜೆ ಮಾಡುವೆನೊ ೨

ಸರಸಿಜಾಕ್ಷನೆ ನಿನಗೆ ಸರಸದಿಂದ ಗುಲಾಬಿ
ಸರದ ಪೂಮಾಲೆಯನು ಕೊರಳಿಗ್ಹಾಕುವೆನೊ
ಸುರರ ಪಾಲಿಪ ಹರಿಯೆ ಸುರಹೊನ್ನೆ ಹಾರವನು
ಕರ ಚಕ್ರಯುತ ನಿನ್ನ ಕಂಧರದಿ ಧರಿಸೋ ೩

ಶ್ಯಾಮವರ್ಣನೆ ರತ್ನಹಾರಗಳು ಹೊಳೆಯುತಿರೆ
ಶ್ರೀ ಮನೋಹರ ಮುತ್ತಿನ್ಹಾರ ಪದಕಗಳು
ಈ ಮಧ್ಯೆ ದಿವ್ಯ ಶ್ಯಾವಂತಿಗೆ ಸುಮನದಿಂ
ಕಾಮಜನಕನೆ ಮಾಲೆಕಟ್ಟಿ ಹಾಕುವೆನೊ ೪

ಈ ಜಗವ ಉದರದಲಿ ಧರಿಸಿ ಮೆರೆಯುವ ದೇವ
ಜಾಜಿ ಪೂಮಾಲೆಯನು ಕಂಧರದಿ ಧರಿಸೊ
ಭೋಜಕುಲ ತಿಲಕನೆ ಕೆಂಡ ಸಂಪಿಗೆ ಸರವ
ಮಾಜದೇ ಎನ್ನಿಂದ ಸ್ವೀಕರಿಸೊ ದೇವ ೫

ಪಾತಕರಹಿತ ಹರಿ ಪಾವನರೂಪನೆ
ಪ್ರೀತಿಯಿಂ ಸ್ವೀಕರಿಸೊ ಕೇತಿಕೆಯ ಸರವ
ಶ್ರೀತರುಣಿ ಸತ್ಯಭಾಮೆಯರು ಕದನವಗೈದ
ಪ್ರೀತಿ ಪಾರಿಜಾತ ಧರಿಸಯ್ಯ ೬

ಮರುಗ ದವನಗಳಿಂದ ಸುರಹೊನ್ನೆಯನೆ ಕಟ್ಟಿ
ಇರುವಂತಿಗೆಯ ಹಾರ ಹರಿಯೆ ಅರ್ಪಿಸುವೆ
ಪರಿಮಳವ ಬೀರುತಿಹ ಪರಿಪರಿಯ ಮಲ್ಲಿಗೆಯ
ಸರಗಳನೆ ಧರಿಸಿನ್ನು ಸಾಕಾರರೂಪ ೭

ದುಂಡುಮಲ್ಲಿಗೆಯ ಮೊಗ್ಗು ಪಾಂಡವರ ಪಾಲಕಗೆ
ದಂಡೆಯನೆ ಕಟ್ಟಿ ನಾ ಕೊರಳಿಗ್ಹಾಕುವೆನೊ
ಚಂಡವಿಕ್ರಮ ಶಂಖ ಚಕ್ರಧಾರಿಯೆ ಪಾದ
ಮಂಡೆ ಪರಿಯಂತರದಿ ನೊಡಿ ದಣಿಯುವೆನೊ ೮

ಶ್ರೇಷ್ಠಳೆನಿಸಿ ಜಗಕೆ ಇಷ್ಟ ಸತಿ ನಿನಗಾಗಿ
ಕಾಷ್ಟದಳ ಮೃತ್ತಿಕೆಯ ಸೇವಿಸುವ ಜನಕೆ
ಇಷ್ಟ ಫಲವನೆ ಇತ್ತು ಕೃಷ್ಣನ್ನ ತೋರಿಸುವ
ಶ್ರೇಷ್ಠ ತುಳಸಿಮಾಲೆ ಕಟ್ಟಿ ಹಾಕುವೆನೊ ೯

ಕಮಲನಾಭನೆ ಕೃಷ್ಣ ಕಮಲಾಪತಿಯೆ ಸ್ವಾಮಿ
ಕಮಲಪಾಣಿಯೆ ದೇವ ಕಮಲಾಕ್ಷನೆ
ಕಮಲಮುಖ ನಿನ್ನ ಪದಕಮಲದಲಿ ನಲಿವಂತೆ
ಕಮಲದ್ವಾರವ ಕಟ್ಟಿ ಕೊರಳೀಗ್ಹಾಕುವೆನೋ ೧೦

ಈ ಪರಿಯ ಮಾಲೆಗಳ ನೀ ಪ್ರೀತಿಯಿಂ ಧರಿಸಿ
ಪಾಪಗಳ ತರಿದೆನ್ನ ಪಾವನವಗೈಯ್ಯೊ
ಆಪತ್ತು ಕಳೆವ ಶ್ರೀ ಗುರು ಕಟಾಕ್ಷದಿ ನುಡಿದೆ
ಗೋಪಾಲಕೃಷ್ಣವಿಠ್ಠಲನೆ ಕೃಪೆಮಾಡೊ ೧೧

## ೩೧

ಜಗಕೆ ಶಾಂತಿಯನೀವ ಜಗನ್ನಾಥನೇ । ನಿನ್ನ
ಬಗೆಯರಿತ ಸುಜನರಿಗೆ ಕ್ಲೇಶವಿನ್ನುಂಟೇ ಪ.

ನಾನಾ ಇಂದ್ರಿಯಗಳಿಗೆ ನೀನೇ ಪ್ರೇರಕನಾಗಿ
ನಾನಾ ವಿಧ ಸುಖದುಃಖ ತಗಲಿಸುತ ಮನಕೇ
ಜ್ಞಾನವಂತರ ಹೃದಯ ವಾಸನಾಗಿರುತಿರ್ದು
ಮಾನಿತರ ಬಳಲಿಸುವ ಕಾರಣವದೇನೈ ೧

ಭೂಸುರರ ಮನಕ್ಲೇಶ ನಾಶಗೈಸುತ ಸತತ
ಪೋಷಿಸೆಲೊ ಸ್ವಾಮಿ ಸಂತೋಷವಿತ್ತು
ನಾಶರಹಿತನೆ ಭಕ್ತರಾಶೆ ಪೂರೈಪ ಗುಣ
ರಾಶಿ ನಿನ್ನೊರತಿಲ್ಲ ಅಬುಜಜಾಂಡದೊಳೂ ೨

ಮನಕೆ ಶಾಂತಿಯ ನೀಡೋ ಮಾಧವನೆ ಮಮತೆಯಲಿ
ಮನದ ಅಭಿಮಾನಿಗಂತರ್ಯಾಮಿ ಸ್ವಾಮಿ
ಚಿನುಮಯನೆ ಗೋಪಾಲಕೃಷ್ಣವಿಠ್ಠಲ ಪ್ರೇಮಿ
ಘನ ಗುರುಗಳಂತರ್ಯಾಮಿಯೆ ಮಧ್ವನಾಥಾ ೩

೩೨

ಜಯ ಮಂಗಳಂ ನಿತ್ಯ ಶುಭ ಮಂಗಳಂ
ಭಯ ವಿನಾಶನದೇವ ಶ್ರೀನಿವಾಸನಿಗೆ ಪ.

ಮಂಗಳಂ ಜಲಚರಗೆ ಮಂಗಳಂ ಗಿರಿಧರಗೆ
ಮಂಗಳಂ ಭೂದೇವಿ ರಕ್ಷಕನಿಗೆ
ಮಂಗಳಂ ನರಹರಿಗೆ ಮಂಗಳಂ ಮಾಣವಗೆ
ಮಂಗಳಂ ಭಾರ್ಗವಗೆ ದಾಶರಥಿಗೆ ೧

ಮಂಗಳಂ ಗೋಪಾಂಗನೆಯರ ಕಾಯ್ದವನಿಗೆ
ಮಂಗಳಂ ತ್ರಿಪುರ ಸುರರಳಿದ ಹರಿಗೆ
ಮಂಗಳಂ ಹಯವೇರಿ ಕಲಿಮುಖರ ಗೆಲಿದವಗೆ
ಮಂಗಳಂ ಶ್ರೀಕೃಷ್ಣ ಶ್ರೀನಿವಾಸನಿಗೆ ೨

ಆಪಾದಮೌಳಿ ಪಾವನರೂಪನಿಗೆ
ಆಪನ್ನ ರಕ್ಷಕಗೆ ಆದಿರೂಪನಿಗೆ
ಆಪದ್ಬಾಂಧವ ಶ್ರೀಗುರುಗಳಂತರ್ಗತಗೆ
ಗೋಪಾಲಕೃಷ್ಣವಿಠ್ಠಲಮೂರ್ತಿಗೆ ೩

೩೩

ಜಿತಮನವ ನೀಡೆನಗೆ ಜಿಷ್ಣುಸಖನೆ
ರತಿಪತಿಪಿತ ನಿನ್ನ ಹಿತದಿ ಭಜಿಸುವೆನೊ ಪ.

ದುಷ್ಟ ಇಂದ್ರಿಯಗಳು ಕೆಟ್ಟ ವಿಷಯಗಳಲ್ಲಿ
ಕಟ್ಟೆ ಎನ್ನಯ ಮನವ ಸೆಳೆಯುತಿಹವೊ
ಕೃಷ್ಣಮೂರುತಿ ನೀನೆ ದೃಷ್ಟಿಯಿಂದಲಿ ನೋಡಿ
ಒಟ್ಟುಗೂಡಿಸಿ ನಿನ್ನ ಪಾದದಲ್ಲಿಡಿಸೊ ೧

ಎಂಟು ಜನ ದುಷ್ಟರು ಆರು ಜನ ಕಳ್ಳರು
ಕಂಟಕರಾಗಿನ್ನು ಕಾಡುತಿಹರೋ
ಎಂಟುದಳಗಳಿಪ್ಪ ನೆಂಟರೆನಗಾಗರೊ
ಎಂಟೆರಡು ಇಂದ್ರಿಯವ ಬಂಧನದೊಳಿರಿಸೊ ೨

ಮೂರು ತಾಪಗಳಿಂದ ಮೂರು ಗುಣದೊಳು ತಿರುಗಿ
ಮೂರು ಮಾರ್ಗವ ಕಾಣೆ ಮುರವೈರಿಯೆ
ಮೂರು ಅವಸ್ಥೆಗಳ ವಿವರವರಿಯದ ಎನಗೆ
ದಾರಿ ತೋರಿ ಸಲಹೊ ಕಾರುಣ್ಯನಿಧಿಯೆ ೩

ಡಿಂಬ ಮಧ್ಯದಲಿರುವ ಅಂಬರದಲಿ ನಿನ್ನ
ಬಿಂಬರೂಪವ ತೋರೊ ಶಂಭು ಸಖನೆ
ಅಂಬುಜನಾಭ ಎಪ್ಪತ್ತೆರಡು ಸಾಹಸ್ರ
ತುಂಬಿದ ನಾಡಿಯೊಳು ರೂಪಗಳ ತೋರೊ ೪

ಮನದಲ್ಲಿ ನೆಲಸಿಹನೆ ಮನುಶಬ್ದವಾಚ್ಯನೆ
ಮನದಿಂದ ಭಿನ್ನನೆ ಮನಪ್ರೇರಕ
ಮನವ ನಿನ್ನಲಿ ನಿಲಿಸಿ ಅನುಗಾಲ ಸಲಹುವುದು
ಚಿನುಮಯನೆ ಗೋಪಾಲಕೃಷ್ಣವಿಠ್ಠಲನೆ ೫

## ೩೪

ಜೋ ಜೋ ರುಕ್ಷಿಣಿರಮಣ ಜೋ ಜೋ ಕಲ್ಯಾಣ
ಜೋ ಜೋ ಗುಣಪರಿಪೂರ್ಣ ವೆಂಕಟರಮಣ ಪ.

ರನ್ನ ಮಾಣಿಕದೊಜ್ರ ಚಿನ್ನ ಮಂಟಪದಿ
ಘನ್ನ ನವರತ್ನದಿಂ ಮೆರೆವ ತೊಟ್ಟಿಲೊಳು
ರನ್ನೆರಿಬ್ಬರ ಕೂಡಿ ನಲವಿಂದ ಕೃಷ್ಣ
ಸನ್ನುತನಾಗಿ ಸುರರಿಂದ ಪವಡಿಸಿದ ಜೋ ಜೋ ೧

ಕನಕಮಯ ಸರಪಳಿ ಥಳಥಳನೆ ಹೊಳೆಯೆ
ಮಿನುಗುವಾಭರಣಗಳು ಝಗ ಝಗಿಸುತಿರಲು
ಸನಕಾದಿ ಒಡೆಯನ ಫಣಿಪ ಹಿಂತೂಗೆ
ಮುನಿವರನು ಮುಂದೆ ತಾ ಲಾಲಿ ಪಾಡಿದನು ಜೋ ಜೋ ೨

ವೇದವನೆ ಕದ್ದವನ ಕೊಂದವನೆ ಜೋ ಜೋ
ಸಾಧಿಸಿ ಸುಧೆ ಸುರರಿಗುಣಿಸಿದನೆ ಜೋ ಜೋ
ಭೇಧಿಸಿ ಜಲಧಿ ಮೇದಿನಿ ತಂದೆ ಜೋ ಜೋ
ಸಾಧಿಸಿ ಸುಧೆ ಸುರರಿಗುಣಿಸಿದನೆ ಜೋ ಜೋ ೩

ಬಲಿಯನೊಂಚಿಸಿದಂಥ ತರಳನೆ ಜೋ ಜೋ
ಕುಲವನೆ ಸವರಿದ ಬಲಶಾಲಿ ಜೋ ಜೋ
ಲಲನೆ ಸೀತೆಯ ತಂದ ಶ್ರೀರಾಮ ಜೋ ಜೋ
ಮೆಲಲು ಪಾಲು ಬೆಣ್ಣೆ ಕದ್ದವನೆ ಕೃಷ್ಣ ಜೋ ಜೋ ೪

ತ್ರಿಪುರ ಸತಿಯರ ವ್ರತವಳಿದೆ ಜೋ ಜೋ
ಚಪಲತನದಿಂ ಹಯವನೇರಿದನೆ ಜೋ ಜೋ
ಅಪರಿಮಿತದವತಾರದಿಂ ಬಳಲಿ ಬಂದು
ನಿಪುಣರೆಲ್ಲರು ಸ್ತುತಿಸೆ ಪವಡಿಸಿದೆ ಕೃಷ್ಣ ಜೋ ಜೋ ೫

ಅರಸು ಜಯದೇವಿ ಸಂಕರ್ಷಣನೆ ಜೋ ಜೋ
ಸಿರಿದೇವಿಪ್ರಿಯ ಶ್ರೀ ನರಹರಿಯೆ ಜೋ ಜೋ
ವರರುಕ್ಮಿಣಿ ಸತ್ಯವರ ಕೃಷ್ಣ ಜೋ ಜೋ
ಅರಸಿ ಪದ್ಮಾವತಿ ಸಹಿತ ವೆಂಕಟನೆ ಜೋ ಜೋ ೬

ನಾರದಾದಿಗಳೆಲ್ಲ ನರ್ತನದಿ ಪಾಡೆ
ಊರ್ವಶಿ ಅಪ್ಸರರು ನೃತ್ಯವನು ಮಾಡೆ
ತೋರೆ ಗಂಧರ್ವರು ಗಾನಗಳ ರಚನೆ
ಸಾರಿಸಾರಿಗೆ ಭಕ್ತರೆಲ್ಲ ನುತಿಗೈಯೆ ೭

ಭಕ್ತನಾದ ವಾಯು ಸಹಿತ ಪವಡಿಸಿದೆ
ಜೊತ್ತಾದ ತೊಟ್ಲುಗಳು ಭೃತ್ಯರು ತೂಗೆ
ಮತ್ತೆ ನಿಮ್ಮೊರ್ವರಿಗೆ ನಿದ್ರೆ ಇನ್ನುಂಟೆ
ಭಕ್ತರನು ಸಲಹಲು ಲೀಲೆ ಕೈಕೊಂಡೆ ಜೋ ಜೋ ೮

ಶ್ರೀಪಾದಪದ್ಮಯುಗಳಕೆ ಎರಗಿ ನಮಿಪೆ
ಗೋಪಾಲಕೃಷ್ಣವಿಠ್ಠಲನೆ ನೀ ಸಲಹೊ
ಶ್ರೀ ಪದ್ಮಭವ ಭವರಿಂ ಸೇವೆ ಕೊಳುತ
ಈ ಪಯೋಜ ಭವಾಂಡದೊಳು ಲೀಲೆ ತೋರ್ಪೆ ಜೋ ಜೋ ೯

## ೩೫

ತಂಗಿ ಕೇಳೆ ಅತಿಕೌತುಕ ಒಂದು ಸುದ್ಧಿಯ
ಸಿಂಗನ ಮೋರೆ ಮಗುವು ಪುಟ್ಟಿ ಮಾಡಿದಾ ಚರ್ಯ ಪ.

ತಂದೆ ತಾಯಿಗಳಿಲ್ಲಾದ್ಹಾಂಗೆ ಕಂದ ಪುಟ್ಟಿತು
ಬಂಧು ಎತ್ತು ಕೊಂಬೇನೆಂದರೆ ಗುಡು ಗುಡುಗುಟ್ಟಿತೂ
ಅಂದ ಛಂದವ ನೋಡೇನೆಂದರೆ ಘೊರಾಕೃತಿಯಾಯ್ತು
ತಂದ ತೊಟ್ಟಿಲೊಳಿಟ್ಟೇನೆಂದರೆ ಹೊಸಲೊಳ್ ಕೂತೀತು ೧

ತೊಡೆಯಲ್ಲಿಟ್ಟು ತಟ್ಟೇನೆಂದರೆ ಕಿಡಿ ಕಿಡಿ ಉಗುಳೀತು
ಕಡುಪಾಪಿ ರಕ್ಕಸನ ತನ್ನ ತೊಡೆಯಲ್ಲಿಟ್ಟಿತೂ
ಕಡು ಕೋಪದಿಂದಾಲಿ ಅವನ ಒಡಲ ಬಗೆದಿತು.
ಎಡಬಲಕೊಬ್ಬರು ಬರದಂತೆ ಆರ್ಭಟಿಸುತಲಿದ್ದಿತು ೨

ಹಾಲನೆರೆದೆನೆಂದರೆ ರುಧಿರ ಪಾನವ ಮಾಡಿತು
ಮಾಲೆ ಹಾಕಿ ಮುದ್ದಿಪನೆನೆ ಕರುಳ್ಮಾಲೆ ಹಾಕೀತು
ಮೇಲೆ ಕೇಶ ಕಟ್ಟೇನೆಂದರೆ ಕೆದರಿಕೊಂಡೀತೂ
ಬಾಲಲೀಲೆ ನೋಡೇನೆಂದರೆ ಜಗವ ಬೆದರಿಸಿತು ೩

ಸುರಹರ ಬ್ರಹ್ಮಾದಿಗಳು ಬಂದರು ತಿರುಗದೆ ಕೂತೀತು
ಸಿರಿಕಂಡೂ ಬೆರಗಾಗೆ ಮನವು ಕರಗದೆ ಕಲ್ಲಾಯ್ತು
ತರಳನೊಬ್ಬನ ಕೂಡೆ ತಾನೂ ಆಟವನಾಡಿತು
ಉರಿಮುಖ ಹುಬ್ಬೂ ಗಂಟೂ ಬಿಟ್ಟು ಕಿರುನಗೆ ನಕ್ಕೀತು ೪

ಶ್ರೀಪತಿ ಎಂದು ತರಳನು ಪೊಗಳೇ ಸಿರಿಯ ಬೆರತೀತು
ಆಪತ್ತನು ಪರಿಹರಿಪ ಲಕ್ಷ್ಮೀನರಹರಿ ಎನಿಸೀತು
ದ್ವಾಪರದಲ್ಲಿ ಮತ್ತೆ ಪುಟ್ಟಿ ಮುದುವ ಬೇಡೀತು
ಗೋಪಾಲಕೃಷ್ಣವಿಠ್ಠಲನೆನಿಸಿ ಗೋಪಿಯ ಮಗುವಾಯ್ತು ೫

## ೩೬

ತುಂಗಭದ್ರ ನದಿ ತೀರದಿ ನೆಲಸಿಹನ್ಯಾರೆ ಪೇಳಮ್ಮಯ್ಯ ಪ.

ಗಂಗಾಧರನರ್ಧಾಂಗಿಯಾಗಿ ಶ್ರೀ
ರಂಗ ತಾನು ಇಲ್ಲಿರುತಿಹನಮ್ಮ ಅ.ಪ.

ಶಂಖ ಚಕ್ರ ತ್ರಿಶೂಲವ ಧರಿಸಿಹನ್ಯಾರೇ ಪೇಳಮ್ಮಯ್ಯ
ಶಂಕರ ಸಹಿತಲಿ ನೆಲಸಿಹ ಕುರುಹನು
ಶಂಕಿಸದಂದದಿ ತೋರುವನಮ್ಮ ೧

ಈ ಪರಿರೂಪವ ಧರಿಸಲು ಕಾರಣವೇನೇ ಪೇಳಮ್ಮಯ್ಯ
ಪಾಪಿ ಗುಹನ ವರಬಲವನೆ ಕೆಡಹಲು
ಈ ಪರಿರೂಪವ ಧರಿಸಿಹನಮ್ಮ ೨

ಇದ್ದರೆ ಈ ಪರಿ ಶುದ್ಧ ಸಾತ್ವಿಕರಿಗೆ ಹ್ಯಾಗೇ ಪೇಳಮ್ಮಯ್ಯ
ಮಧ್ವಮತರಿಗೆ ಮನದಲಿ ಪ್ರೇರಕ
ಶುದ್ಧ ಜ್ಞಾನವನಿತ್ತು ಸಲಹುವನಮ್ಮ ೩

ವಿಷ್ಣು ಭಕ್ತರ ಮನಸಿಗೆ ತೋರುವ ಮತಿ ಏನೇ ಪೇಳಮ್ಮಯ್ಯ
ಶ್ರೇಷ್ಠ ವೈಷ್ಣವೋತ್ತಮ ಹರನನು ತಾ
ಬಿಟ್ಟಿರಲಾರದ ಗುಟ್ಟು ಕಾಣಮ್ಮ ೪

ಇನಕೋಟಿತೇಜನ ಈ ಪರಿ ಲೀಲೆ ಇದೇನೆ ಪೇಳಮ್ಮಯ್ಯ
ಮನಸಿಗೆ ಪ್ರೇರಕ ಹರನೊಲುಮಿಲ್ಲದೆ
ಹರಿಯು ತಾನು ಒಲಿಯನು ಕಾಣಮ್ಮ ೫

ಹರಿಹರ ರೂಪವ ಧರಿಸಿದ ಪರಿ ಹ್ಯಾಗೇ ಪೇಳಮ್ಮಯ್ಯ
ಸುರವಂದ್ಯನು ಪರಿಪರಿರೂಪಾಗ್ವಗೆ ಈ
ಪರಿ ಧರಿಸುವದೊಂದರಿದೇನಮ್ಮ ೬

ಹರಿಹರ ಕ್ಷೇತ್ರದಿ ನೆಲಸಿಹ ಸ್ವಾಮಿಯ ಭಜಿಸುವದ್ಹ್ಯಾಗೇ ಪೇಳಮ್ಮಯ್ಯ
ಹರನಂತರ್ಗತ ಹರಿಯೊಲುಮಿಂದಲಿ
ಕರಕರೆ ಭವವನು ಕಳೆಯಬೇಕಮ್ಮ ೭

ಶ್ರೀಸತಿ ಪಾರ್ವತಿ ಸಹಿತದಿ ನೆಲಸಿಹನ್ಯಾರೇ ಪೇಳಮ್ಮಯ್ಯ
ದಾಸರನಿಧಿ ಗೋಪಾಲಕೃಷ್ಣವಿಠ್ಠಲ
ಶೇಷಭೂಷಣ ಸಹ ಶ್ರೀನಿವಾಸ ಕಾಣಮ್ಮ ೮

## ೩೭

ದಾಸರ ನರಸಿಂಹ । ಶ್ರೀಹರಿ
ದಾಸರ ನರಸಿಂಹ ಪ.

ಯೊಗಾ ನರಸಿಂಹ । ಕರಿಗಿರಿ
ಭೋಗಾ ನರಸಿಂಹ
ಆಗಲೆ ಸುರಿಯುವ ಮಳೆಯನು ನಿಲ್ಲಿಸಿ
ಬೇಗನೆ ಕೈಕೊಂಡ ಉತ್ಸವ ನರಸಿಂಹ ೧

ಶಾಂತಾ ನರಸಿಂಹ । ಪ್ರಹ್ಲಾ–
ದಾಂತರ ನರಸಿಂಹ
ನಿಂತು ಹೆಜ್ಜೆ ಹೆಜ್ಜೆಗೆ ಆರತಿ ಕೊಂಡು
ಸಂತಸಪಡಿಸಿದ ಗುರುಗಳ ನರಸಿಂಹ ೨

ಕಾಮಿತ ನರಸಿಂಹ । ಪರಮ
ಪ್ರೇಮದ ನರಸಿಂಹ
ಸ್ವಾಮಿ ತಂದೆ ಮುದ್ದು ಮೋಹನದಾಸರ
ಧಾಮದಿ ನೆಲಸಿಹ ಸ್ವಾಮಿ ಶ್ರೀ ನರಸಿಂಹ ೩

ಭಕ್ತರ ನರಸಿಂಹ । ಭವಭಯ
ಒತ್ತುವ ನರಸಿಂಹ
ಭಕ್ತಿ ಭಾವದಿಂದ ಭಜನೆಯ ಮಾಳ್ಪರ
ಮುಕ್ತಿ ಮಾರ್ಗ ತೋರಿ ಸಲಹುವ ನರಸಿಂಹ ೪

ಸುಲಭ ನರಸಿಂಹ । ನೀ ಬಹು
ದುರ್ಲಭ ನರಸಿಂಹ
ಒಲಿಯುವ ಗೋಪಾಲಕೃಷ್ಣವಿಠ್ಠಲ ಹರಿ
ನೆಲಸಿ ಹೃದಯ ಮಂದಿರದಲಿ ನರಸಿಂಹ ೫

## ೩೮

ನಾರಸಿಂಹನೆ ಧೀರ । ನಂಬಿದೆನೊ ಪೊರೆಯೊ
ಶ್ರೀ ರಮಾಪತಿ ವೀರ । ಕರಿಗಿರಿ ವಿಹಾರ ಪ.

ಸಾರಿದೆನೊ ನಿನ್ನ ಪದವ ಅನುದಿನ
ಸೇರಿಸೆನ್ನನು ಭಕ್ತಕೂಟದಿ
ಗಾರು ಮಾಡುವುದುಚಿತವೇ ಹರಿ
ಪಾರುಗಾಣಿಸೊ ಭವ ಸಮುದ್ರದಿ ಅ.ಪ.

ತಡೆಯಲಾರೆನೊ ತಾಪ । ನಾನಾರಿಗುಸುರಲೊ
ಒಡಲ ದುಃಖವ ಭೂಪ । ನೀನಲ್ಲದಿಲ್ಲವೊ
ಕಡೆಮಾಡು ಭವ ಶ್ರೀಪ । ತೋರದಿರು ಕೋಪ
ಘುಡು ಘುಡುಸಿ ನೀ ಎನ್ನ ಬೆದರಿಸೆ
ತಡೆವೆನೇ ನಿನ್ನ ಕೋಪದಗ್ನಿಗೆ
ಬಿಡು ಬಿಡು ಬಿಂಕ ಎನ್ನೊಳು
ತಡೆಯೊ ಎನ್ನ ದುರುಳತನಗಳ
ಕಡುಕರುಣಿ ನೀನಲ್ಲವೆ ಹರಿ
ಒಡಲೊಳಗೆ ಪ್ರೇರಕನು ನೀನೆ
ನಡಸಿದಂದದಿ ನಡೆವೆನಲ್ಲದೆ
ಒಡೆಯ ಎನ್ನ ಸ್ವತಂತ್ರವೇನೊ? ೧

ದುರುಳತನದಲಿ ದೈತ್ಯ । ಭೂವಲಯವೆಲ್ಲವ
ಉರವಣಿಸಿ ದುಷ್ಕೃತ್ಯ । ಎಸಗುತಿರೆ ದುಃಖದಿ
ಸುರರು ಮೊರೆಯಿಡೆ ಸತ್ಯ । ದೃಢಮನದಿ ಭೃತ್ಯ
ಕರಕರೆ ಪಿತ ಬಡಿಸುತಿರಲು ದೊರೆಯೆ ನೀ
ಪೊರೆ ಎಂದು ಮೊರೆಯಿಡೆ
ಸರ್ವವ್ಯಾಪಕನೆಂದು ತೋರಲು
ತ್ವರಿತದಲಿ ಕಂಭದಲಿ ಬಂದು
ಸರಸಿಜವು ಕಂಗೆಡುವೊ ಕಾಲದಿ
ಧರಿಸಿ ತೊಡೆಯ ಮೇಲಸುರ ಕಾಯವ
ಕರುಳ ಬಗೆದು ಮಾಲೆ ಧರಿಸಿ
ಪೊರೆದೆಯೊ ಸ್ತುತಿ ಕೇಳಿ ಬಾಲನ ೨

ಅಜಭವಾದಿಗಳೆಲ್ಲ । ಸ್ತುತಿಸಿದರೆ ಮಣಿಯದ
ಭುಜಗಶಾಯಿ ಶ್ರೀ ನಲ್ಲ । ನಾ ನಿನ್ನ ಸ್ತುತಿಸಿ
ಭಜಿಸಲಾಪೆನೆ ಕ್ಷುಲ್ಲ । ಮಾನವನ ಸೊಲ್ಲ
ನಿಜಮನವ ನೀ ತಿಳಿದು ಸಲಹೊ
ಧ್ವಜವಜ್ರಪದ ಕಮಲ ತೋರಿ

ಕುಜನನಲ್ಲವೊ ಹಿರಿಯರೆನಗೆ
ನಿಜಗತಿಯ ಪಥ ತೋರುತಿಹರೊ
ರಜ ತಮವ ದೂರಟ್ಟಿ ಶುದ್ಧದಿ
ಭಜಿಸುವಂದದಿ ಕೃಪೆಯ ಮಾಡಿ
ಸುಜನರೆನ್ನನು ಪಾಲಿಸುತ್ತಿರೆ
ನಿಜದಿ ಗೋಪಾಲಕೃಷ್ಣವಿಠ್ಠಲ ೩

## ೩೯

ನಿನ್ನ ನೋಡಲಿ ಬಂದೆ ಘನ್ನ ಮಹಿಮನೆ ಕೃಷ್ಣಾ
ಮನ್ನಿಸಿ ಕೃಪೆಯ ಮಾಡೊ ಪ.

ನಿನ್ನ ದರುಶನವಿತ್ತು ಎನ್ನ ಪಾಪವ ಕಳೆದು
ನಿನ್ನ ಪಾದವನೆ ತೊರೋ ಸ್ವಾಮಿ ಅ.ಪ.

ರಜತಪೀಠಾಪುರದಿ ರಮ್ಯ ಮಂದಿರದಲ್ಲಿ
ರಾಜಿಸುತ್ತಿಹ ದೇವನೆ
ಕುಜನಮರ್ಧನ ಎನ್ನ ರಜ ತಮೋಗುಣ ಕಳದು
ನಿಜಭಕ್ತರೊಡನಾಡಿಸಿ
ಸುಜನವಂದಿತ ನಿನ್ನ ಭಜನೆಯಿಂದಲಿ ನಲಿದು
ನಿಜರೂಪ ನೋಡುವಂತೆ
ವಿಜಯಸಾರಥಿಯೆ ನೀ ಈ ತೆರದಿ ಪೊರೆಯದಿರೆ
ಭಜಿಸಲ್ಯಾತಕೆ ನಿನ್ನನು ದೇವ ೧

ಶ್ರೀ ತಂದೆ ಮುದ್ದುಮೋಹನದಾಸರೆಂತೆಂಬ
ನೀತ ಗುರುದ್ವಾರದಿಂದ
ನಾ ತಿಳಿದು ಬಂದೆ ನಿನ್ನಯ ಮಹಿಮೆ ಜಾಲಗಳ
ಪ್ರೀತನಾಗಿ ಕಾಯೋ
ನೀತಿಯಲ್ಲವು ನಿನಗೆ ಮಹಿಮೆ ತೋರದೆ ಎನ್ನ
ಘಾತಿಗೊಳಿಸುವರೆ ಹೀಗೆ

ನಾಥ ನಿನ್ನಗಲಿ ನಾನರಘಳಿಗೆ ಇರಲಾರೆ
ಸೋತು ಬಂದಿಹೆನೊ ಭವದಿ ಮನದಿ ೧

ಸತ್ಯಸಂಕಲ್ಪ ನೀನಾದಡೆ ಎನಗಿನ್ನು
ಅತ್ಯಧಿಕ ರೂಪ ತೋರೊ
ಮೃತ್ಯು ಬೆನ್ಹತ್ತಿ ಆಯುಷ್ಯವ ಪರಿಪರಿಸುವುದು
ಎತ್ತ ಪೋದರು ಬಿಡದೆಲೊ
ಭೃತ್ಯತನವನೆ ವಹಿಸಿ ನಿನ್ನ ತೋರೆಂದೆನಲು
ಮತ್ತೆ ಕರುಣವಿಲ್ಲವೆ
ಚಿತ್ತಜಾಪಿತ ನಿನ್ನ ಒಲುಮೆ ಮಾರ್ಗವನರಿಯೆ
ಚಿತ್ತಕ್ಕೆ ತಂದು ಕಾಯೊ ಕೃಷ್ಣ ೨

ಆನಂದಮುನಿವರದ ಆನಂದ ಕಂದನೆ
ಆನಂದನಿಲಯವಾಸ
ಆನಂದರತ್ನಪ್ರಭಾದಿಂದ ರಾಜಿತನೆ
ಆನಂದಮೂರ್ತಿ ಕೃಷ್ಣ
ಆನಂದಗೋಕುಲದಿ ಆನಂದದಲಿ ಮೆರೆದು
ಆನಂದ ಸುಜನಕಿತ್ತೆ
ನೀನಿಂದು ಎನ್ನ ಮನಕೆ ಆನಂದವನೆ ಇತ್ತು
ಆನಂದರೂಪ ತೋರೊ ಕೃಷ್ಣ ೪

ಥರವಲ್ಲ ನಿನಗೆನ್ನ ಕರಕರೆಗೊಳಿಸುವುದು
ಪೊರೆವರಿನ್ಯಾರು ಜಗದಿ
ಮರೆತು ಗರ್ವದಿ ಎನ್ನ ಮರೆವರೆ ನೀನ್ಹೀಗೆ
ಗುರುಗಳಂತರ್ಯಾಮಿಯೆ
ಸರ್ವನಿಯಾಮಕ ಸರ್ವವ್ಯಾಪಕನೆಂಬ
ಬಿರುದು ಪೊತ್ತಿಲ್ಲವೇನೊ
ಕರುಣಾಳು ಗೋಪಾಲಕೃಷ್ಣವಿಠ್ಠಲ ನಿನ್ನ
ಪರಿಪರಿಯ ರೂಪ ತೋರೊ ಕೃಷ್ಣ ೫

## ೪೦

ನಿಂದು ದರ್ಶನ ನೀಡೊ ಅರವಿಂದ ಮಧ್ಯದಲಿ
ಕಂದರ್ಪಜನಕ ದೇವ ಪ.

ನಂದಕಂದನೆ ನಿನ್ನ ಮಂದಮತಿ ನಾನೆಂತು
ವಂದಿಸಿ ಸ್ತುತಿಪೆನಯ್ಯ । ಜೀಯ ಅ.ಪ.

ಸತ್ವಗುಣವಾರಿಧಿಯೆ ತತ್ವಗಳ ತಿಳಿಸೆನಗೆ
ಉತ್ತಮ ಪಥವ ತೋರೋ
ನಿತ್ಯ ಸಂಸಾರದಲ್ಲಿ ಸುತ್ತಿಸದೆ ನಿನ್ನಪದ
ಭೃತ್ಯಸಂಗದಲಾಡಿಸೊ । ಸತತ ೧

ವಿಶ್ವತೈಜಸಪ್ರಾಜ್ಞತುರಿಯ ರೂಪಗಳಿಂದ
ವಿಶ್ವೇಶ ದೇಹದೊಳಗೆ
ವಿಶ್ವವ್ಯಾಪಕ ಹರಿಯೆ ಸ್ವಪ್ನ ಜಾಗ್ರತೆ ಸುಷುಪ್ತಿ
ವಿಶ್ವಮಯ ಜೀವಕೀವೆ । ಕಾವೆ ೨

ತತ್ವಾಧಿಪತಿಗಳೊಳು ವ್ಯಾಪ್ತನಾಗಿರುತ ನೀ
ಮತ್ತೆಲ್ಲ ಕಾರ್ಯ ಮಾಳ್ಪೆ
ಚಿತ್ತಾಭಿಮಾನಿ ಶ್ರೀ ಮಾರುತಾಂತರ್ಯಾಮಿ
ವ್ಯಾಪ್ತನಾಗಿರುವೆ ಜಗದಿ । ಮುದದಿ ૩

ಮಧ್ಯನಾಡೀ ಹೃದಯ ಮಧ್ಯಪದ್ಮದ ಮಧ್ಯೆ
ಇದ್ದೆನೆಗೆ ರೂಪ ತೋರೋ
ಒದ್ದಾಡುವೆನೊ ಭವದಿ ಉದ್ಧರಿಸಬೇಕಿನ್ನು
ಒದ್ದು ತಾಪತ್ರಯವನು । ನೀನು ೪

ಶ್ರೀನಿವಾಸನೆ ನಿನ್ನ ಧ್ಯಾನ ಅನವರತದಲಿ
ಮಾನಸದಲೆನಗೆ ನೀಡೋ
ಶ್ರೀನಿಧೇ ಗೋಪಾಲಕೃಷ್ಣವಿಠ್ಠಲ ಎನ್ನ
ಸಾನುರಾಗದಲಿ ಸಲಹೋ ಎಲವೋ ೫

## ೪೧

ನೀನಲ್ಲದಲೆ ಇನ್ನು ನಾನಾರ ಕೂಗಲೊ
ಮಾನನಿಧಿ ಗೋಪಾಲ ಶ್ರೀನಿಧಿಯೇ ಪ.

ಶ್ರೀನಿವಾಸನೆ ಎನ್ನ ನಾನಾ ಪರಿಯ ಕಷ್ಟ
ನೀನೆ ಬಿಡಿಸಿ ಸಲಹೊ ಮಾನಾಭಿಮಾನದೊಡೆಯ ಅ.ಪ.

ಕಡುಕೋಪದಿಂ ಖಳನು ಹುಡುಗನ ಬಾಧಿಸೆ
ದೃಢ ಭಕ್ತಿಯಿಂದ ನಿನ್ನಡಿಯ ಭಜಿಸೆ
ಘುಡು ಘುಡಿಸುತ ಕಂಭವ ಒಡದು ಆ ಕ್ಷಣ ಬಂದು
ಕೆಡಹಿ ಅಸುರನ ಕೊಂದು ಒಡನೆ ಭಕ್ತನ ಕಾಯ್ದೆ ೧

ತೊಡೆಯನೇರಲು ಬರೆ ಜಡಿದು ನೂಕಲು ತಾಯಿ
ಒಡನೆ ಮನದಿ ನೊಂದು ಪೊಡಮಡುತ
ಅಡವಿ ಅಡವಿ ತಿರುಗಿ ದೃಢದಿ ಭಜಿಸೆ ಧ್ರುವ
ಒಡನೆ ಓಡಿ ಬಂದು ದೃಢಪಟ್ಟ ಕೊಡಲಿಲ್ಲೆ ೨

ಮಡುವಿನೊಳ್ ಕರಿ ಕರೆಯೆ ತಡೆಯದೆ ಸಲಹಿದ
ಪೊಡವೀಶ ನೀನಲ್ಲೆ ಕಡುಕರುಣಿ
ಬಡವಗೆ ಸಿರಿಯಿತ್ತೆ ಮಡದಿಗಕ್ಷಯವಿತ್ತೆ
ಕಡುದ್ರೋಹಿಗಳ ಕೊಲಿಸಿ ಒಡನೆ ಐವರ ಕಾಯ್ದೆ ೩

ಚಿನುಮಯ ಗುಣಪೂರ್ಣ ಅಣು ಮಹತ್ ಅಂತರಾತ್ಮ
ಎಣಿಸಲಾಹೊದೆ ನಿನ್ನ ಘನ ಮಹಿಮೆ

ಮನ ಮಧ್ವಮಂದಿರ ಮನಸಿಜಪಿತ ಸರ್ವ
ಮನನಿಯಾಮಕ ಹರಿ ಮನದಲ್ಲಿ ನೀ ನಿಲ್ಲೊ ೪

ಶ್ರೀಪದ್ಮಭವನುತ ನಾ ಪಾಮರಾಳಿಹೆ
ಗೋಪಾಲಕೃಷ್ಣವಿಠಲ ಶ್ರೀಪತಿಯೆ
ನೀ ಪಾರು ಮಾಡದೆ ಕಾಪಾಡುವವರ್‍ಯಾರೊ
ಗೋಪಕುವರ ಪೇಳೋ ತಾಪ ಬಿಡಿಸಿ ಸಲಹೋ ೫

## ೪೨

ನೋಡಿ ದಣಿಯದೊ ನಯನ ಪಾಡಿ ದಣಿಯದೊ ಜಿಹ್ವೆ
ನಾಡಿಗೊಡೆಯನೆ ರಂಗ ದೇವ ದೇವ ಪ.

ಬೇಡಲೇನನೊ ಸ್ವಾಮಿ ಕಾಡಲ್ಯಾತಕೊ ದೇವ
ನೀಡೊ ನಿನ್ನ ಪದಕಮಲ ಶ್ರೀ ಶ್ರೀನಿವಾಸ ಅ.ಪ.

ಶಿರದಲ್ಲಿ ಮಕುಟ ವರ ಫಣೆಯಲ್ಲಿ ತಿಲುಕವು
ಉರದಲ್ಲಿ ಸಿರಿವತ್ಸ ಹಾರ ಪದಕಗಳು
ಕರ ಶಂಖ ಚಕ್ರಯುತ ನೆರಿಗೆ ಪೀತಾಂಬರವು
ಸುರರು ಪಾಲಿಸುವಂಥ ಪಾದ ಕಮಲಗಳ ೧

ಮಂದಹಾಸ ಮುಖಾರವಿಂದದಲಿ ಕಿರುನಗೆಯು
ಬಂದ ಭಕ್ತರಿಗಭಯ ತೋರ್ಪಕರವೊ
ನಿಂದು ಸ್ತುತಿಸುವರಿಗಾನಂದ ತೋರುವ ದಿವ್ಯ
ಒಂದೊಂದು ಅವಯವದ ಸುಂದರಾಕೃತಿಯ ೨

ವೇದವನೆ ತಂದು ಸುತಗಾದರದಿ ಇತ್ತೆ ಕ್ಷೀ–
ರೋದಧಿಯ ಮಥಿಸಿ ಸುಧೆಯ ಸುರರಿಗುಣಿಸಿದೆಯೊ
ಭೂದೇವಿಯನೆ ಪೊರೆದು ಉದ್ಭವಿಸಿ ಕಂಭದೊಳು
ಪಾದದಲಿ ಭೂಮಿಯನು ಅಳೆದ ವಟುರೂಪಿ ೩

ದುಷ್ಟ ಕ್ಷತ್ರಿಯರನೆ ಕುಟ್ಟಿ ಕೆಡಹಿದ ಶೌರಿ
ದಿಟ್ಟತನದಲಿ ಅನ್ನ ಬಟ್ಟೆಯನೆ ತೊರೆದೆ
ಕೊಟ್ಟು ಗೋಪಿಗೆ ಮುದವ ಮೆಟ್ಟಿ ಕಾಳಿಂಗನ
ಬಿಟ್ಟು ವಸನವ ಕಲಿದುಷ್ಟರನೆ ಕೊಂದೆ ೪

ಅಪದ್ರಕ್ಷಕ ನಿನ್ನ ವ್ಯಾಪಾರ ರೂಪಗಳು
ತಾಪ ಪರಿಹರಗೈದು ಕಾಪಾಡೆಲೊ
ಶ್ರೀಪತಿಯೆ ಅಂತರ್ಬಹಿರ್ವ್ಯಾಪ್ತ ನಿರ್ಲಿಪ್ತನೇ
ಗೋಪಾಲಕೃಷ್ಣವಿಠ್ಠಲ ತಾಪ ಪರಿಹಾರನೆ ೫

## ೪೩

ನೋಡಿದೆನು ವಿಠ್ಠಲನ ದಣಿಯ ಪ.

ನೋಡಿದೆನು ವಿಠ್ಠಲನ ರೂಪವ
ಪಾಡಿದೆನು ಮನದಣಿಯ ಹರುಷವು
ಮೂಡಿತಂಗದಿ ಮುಗಿದು ಕೈ ನಾ ಮಾಡಿ ಸಾಷ್ಟಾಂಗ
ಬೇಡಿ ಮನಸಿನಭೀಷ್ಟ ಸಂತತ
ನೀಡು ನಿನ್ನಯ ಚರಣ ಸ್ಮರಣೆಯ
ಪಾಡಿಪೊಗಳುವ ಭಾಗ್ಯಬೇಕೆಂದು ಕಾಡಿದೆನು ಹರಿಯಾ ೧

ಪಂಚ ಪಂಚ ಉಷಃ ಕಾಲದೀ
ಪಂಚ ಬಾಣನ ಪಿತಗೆ ಆರುತಿ
ಮುಂಚಿನೊಸನಗಳೆಲ್ಲ ತೆಗೆಯುತ ತೈಲವೆರೆಯುವರೂ
ಪಂಚರೂಪಗೆ ಚಂದ್ರಭಾಗೆಯ
ಪಂಚ ಗಂಗೋದಕಗಳೆರೆಯುತ
ಪಂಚ ಅಮೃತ ಸ್ನಾನಗೈಸುವ ಸೊಬಗ ನೋಡಿದೆನು ೨

ಅದರ ತೆರದಲಿ ವ್ರತವ ಗೈದ ವೇದವತಿಗಿನ್ನು
ಚದುರ ತನಯನ ವರವನಿತ್ತನು
ಯದುಕುಲಾಗ್ರಣಿ ಅವರ ಭಕ್ತಿಗೆ
ಒದಗಿ ಬಂದ ಮೂರ್ತಿವಾಮನನೆಂಬ ವಟುವರನ ೫

ದುಷ್ಟ ಕ್ಷತ್ರಿಯರನ್ನೆ ಕೊಲ್ಲುತ
ಅಷ್ಟು ಭೂಮಿಯ ದಾನಗೈಯುತ
ದಿಟ್ಟ ತಾನೆಲ್ಲಿರಲಿ ಎಂಬುವ ಯೋಚನೆಯ ತಳೆದು
ಅಟ್ಟಿ ಅಬ್ಧಿಯ ಪುರವ ನಿರ್ಮಿಸಿ
ಪುಟ್ಟ ರೂಪವ ತಾಳಿ ಬರುತಲಿ
ಮೆಟ್ಟಿ ನಿಂತಿಹ ರಜತ ಪೀಠದಿ ಶ್ರೇಷ್ಠ ಭಾರ್ಗವನ ೬

ಪಿತನ ಆಜ್ಞೆಯ ಪೊತ್ತು ಶಿರದಲಿ
ವ್ರತಧರಿಸಿ ಸತಿ ಅನುಜ ಸಹಿತದಿ
ಜತನದಲಿ ವನವಾಸ ಮುಗಿಸುತ ದಶಶಿರನ ಕೊಂದ
ಅತಿ ಸಹಾಯವ ಗೈದ ಶರಧಿಗೆ
ಪ್ರತಿಯುಪಕಾರವನು ಕಾಣದೆ
ಜತನದಲಿ ತಾ ನಿಲ್ಲೆ ನೆಲಸಿದ ಜಾನಕೀಪತಿಯ ೭

ಗೋಪಿಯರ ಉಪಟಳಕೆ ಸಹಿಸದೆ
ಗೋಪನಂದನರೊಡನೆ ಕಾದುತ
ತಾಪಪಡಿಸುವ ಕಂಸರನುಚರರಿಂದ ಕಳದೋಡಿ
ಗೋಪಿ ಮೊಲೆ ಕೊಡುತರ್ದದಲಿ ಬಿಡೆ
ಈ ಪರಿಯ ತಾಪಗಳ ಸಹಿಸದೆ
ತಾಪಸರ ಪೂಜೆಗಳ ಬಯಸುತ ಬಂದ ಗೋಪತಿಯ ೮

ವೇದ ಬಾಹಿರರಾದ ದುರುಳರು
ವೇದ ಮಾರ್ಗವ ಪಿಡಿಯೆ ಸುರತತಿ
ನೀ ದಯದಿ ಸಲಹೆಂದು ಪ್ರಾರ್ಥಿಸೆ ಜಿನ ವಿಮೋಹಕನೂ
ವೇದರ್ಥವ ಗುಪ್ತದಲಿ ತಾ

ಬೋಧಿಸುತ ಮೋಹಕವ ಕಲ್ಪಸಿ
ಮೋದದೊಸನವ ಕಳದ ಬುದ್ಧ ಪ್ರಮೋದನೆಂಬುವನಾ ೯

ಚತುರ ಪಾದವು ಕಳದು ಧರ್ಮವು
ಅತಿಮಲಿನವಾಗುತಲಿ ಕಲಿಜನ
ಚತುರ ಜಾತಿಯ ಕಲೆತು ಕಂಗೆಡೆ ಭಕ್ತವರ್ಗಗಳು
ಗತಿಯು ನೀನೆ ಪೊರೆಯೊ ಎಂದೆನೆ
ಸತಿಯ ಹೆಗಲೇರುತಲಿ ಖಡ್ಗದಿ
ಹತವಗೈಯ್ಯುತ ಖಳರ ಸುಜನರ ಪೊರೆದ ಕಲ್ಕಿಯನು ೧೦

ನೋಡಿದೆನು ವರ ಮಚ್ಛ ಕೂರ್ಮನ
ನೋಡಿದೆನು ಧರಣೀಶ ನೃಹರಿಯ
ನೋಡಿದೆನು ವಾಮನನ ಭಾರ್ಗವ ರಾಮಚಂದ್ರನನೂ
ನೋಡಿದೆನು ಕಡಗೋಲ ಕೃಷ್ಣನ
ನೋಡಿದೆನು ವರ ಬುದ್ಧ ಕಲ್ಕಿಯ
ನೋಡಿದೆನು ಗುರು ವರದ ಗೋಪಾಲಕೃಷ್ಣವಿಠ್ಠಲನ ೧೧

## ೪೫

ಪರಮ ಕರುಣಾಕರನೆ ಕರಪಿಡಿದು ಸಲಹೆನ್ನ
ವರ ತಂದೆ ಮುದ್ದುಮೋಹನರೊಡೆಯನೆ ಪ.

ಸಿರಿಯರಸ ಶ್ರೀ ಶ್ರೀನಿವಾಸ ಶ್ರೀ ಕೃಷ್ಣಹರೆ
ಪರಮದಯಾಳು ದೇವ । ದೇವ ಅ.ಪ.

ನಿರುತ ನೀ ಸ್ವಪ್ನದಲ್ಲಿ ಪರಿಪರಿಯ ರೂಪದಲಿ
ತ್ವರಿತದಲಿ ತೋರಿ ಕಾಯ್ದೆ
ಪರಮಪಾವನಮೂರ್ತಿ ಗುರು ಅಂತರ್ಯಾಮಿಯೆ
ಕರಕರೆಯ ಬಿಡಿಸಿ ಸಲಹೊ । ದೇವ ೧

ಸಿರಿಬೊಮ್ಮ ಸುರರ ಲೆಕ್ಕಿಸದೆ ಸದ್ಭಕ್ತರಾ
ಗರುವ ರಹಿತರ ಸ್ತುತಿಗೆ ಮೈದೋರುವಾ
ಪರಿಯ ತೋರಲು ಇತ್ತ ತಿರುಗಿದ್ಯಾ ಪೇಳಿನ್ನು
ಪರಮ ಪುರುಷನೆ ನಿನ್ನ ಪರಿ ತಿಳಿವರಾರೈ ೬

ಆನಂದ ಗುಣಪೂರ್ಣ ಆನಂದ ಮುನಿವರದ
ಆನಂದ ಕಂದ ಪಶ್ಚಿಮ ತಡಿಯವಾಸಾ
ಆನಂದ ಗೋಕುಲದಿ ಆನಂದ ತೋರಿದಾ
ಆನಂದ ಗೋಪಾಲಕೃಷ್ಣವಿಠಲೈಯ್ಯಾ ೭

## ೪೭

ಪಾಲಿಸೀ ಪಸುಳೆಯನು ಪರಮ ಪುರುಷ ಪ.

ಬಾಲೆ ನಿನ್ನವಳೆಂದು ಶ್ರೀ ಕರಿಗಿರೀಶ ಅ.ಪ.

ನರಹರಿಯೆ ಲಕ್ಷೀಶ ತರಳೆ ನಿನ್ನವಳಿನ್ನು
ತ್ವರಿತದಲಿ ಕಾಪಾಡು ತಡಮಾಡದೆ
ಕರಕರೆಯ ರೋಗ ಬಾಧೆಯ ಬಿಡಿಸಿ ಹರಿ ನಿನ್ನ
ಕರುಣಾಮೃತವಗರೆದು ಕಡುಕೃಪೆಯೊಳಿನ್ನು ೧

ಫಣಿರಾಜಶಯನ ಪರ್ಯಂಕ ದೇವರದೇವ
ಬಿನಗು ದೇವರ ಗಂಡ ಎಣೆಯುಂಟೆ ನಿನಗೆ
ಮಣಿಯದಾಗ್ರಹದೇವಗಣ ಉಂಟೆ ನಿನಗಿನ್ನು
ಕ್ಷಣ ಬಿಡದೆ ಸರ್ವಬಾಧೆಯ ಬಿಡಿಸಿ ಸತತ ೨

ಪ್ರಾಣದೇವನೆ ಸರ್ವ ದೇವತೆಗಳಧಿನಾಥ
ಪ್ರಾಣದೇವನು ನಿನ್ನ ಪ್ರಾಣ ಪದಕ
ಪ್ರಾಣದೇವಗೆ ಪೇಳಿ ಪ್ರಾಣ ಭಯವನೆ ಬಿಡಿಸಿ
ಪ್ರಾಣಸೂತ್ರವ ನಡಿಸಿ ತ್ರಾಣಗೆಡದಂತೆ ೩

ನಿನ್ನ ದಾಸರ ದಾಸಳಿವಳು ಶ್ರೀಹರಿ ಕೇಳು
ಎನ್ನ ಬಿನ್ನಪವ ನೀ ಬರಿದೆನಿಸದೆ
ಚನ್ನಾಗಿ ಆಯುರಾರೋಗ್ಯ ಸಂಪದವಿತ್ತು
ಮನ್ನಿಸಿ ಕಾಪಾಡು ಮಂಗಳಾತ್ಮಕನೆ ೪

ಗುರುಕರುಣ ವರಬಲದಿ ಪುಟ್ಟಿದಾ ಶಿಶು ಇವಳು
ಪರಮ ಮಂಗಳೆ ಎನಿಸಿ ಪಾಲಿಸೈ ಜಗದಿ
ನಿರುತದಲಿ ನಿನ್ನ ಪದಭಕ್ತಿ ಜ್ಞಾನವ ಕೊಟ್ಟು
ಹರಸಿ ಪೊರೆ ಗೋಪಾಲಕೃಷ್ಣವಿಠ್ಠಲನೆ ೫

## ೪೮

ಪಾಂಡುರಂಗನೆ ಪಾಲಿಸೆನ್ನನು
ಬೇಡಿಕೊಂಬೆನು ವರವ ನೀಡಯ್ಯ ನೀನು ಪ.

ಸಿರಿವಿರಂಚ್ಯಾದಿ ಸುರರು ನಿರುತ ನಿನ್ನನು ಬಿಡರು
ಕರಗಳನೆ ಜೋಡಿಸುವರು ವರಗಳನೆ ನೀಡೆಂಬರು
ಭರದಿ ಹದಿನಾಲ್ಕು ಜಗದ ಉದರದಿ ಇಂಬಿಟ್ಟ ಭೋಜ
ಸಿರಿಸ್ತುತಿಗೆ ಸಿಲ್ಕ ರಾಜವರ ರವಿಶತರ ತೇಜ
ಭೀಮರಥಿಯ ತೀರದಲ್ಲಿ ಮಹಾನಂದ ಭರಿತ ನಂದನ ಕಂದ
ಸ್ವಾಮಿ ನಂಬಿದೆ ಅಭಯವ ಕೊಟ್ಟು ವರಗಳನನಿಟ್ಟು
ಪೂರ್ಣಸುಖವನ್ನೆ ಕೊಟ್ಟು
ನಾಮ ಧ್ಯಾನಗಳ ಅನುದಿನ ಮಾಡುವ ಜ್ಞಾನ ಕೊಟ್ಟನಂತಾಸನ
ಧಾಮ ಶ್ವೇತದ್ವೀಪ ವೈಕುಂಠದಲ್ಲೆ ನಿನ ಭಂಟರೊಳು
ಸೇರಿಸೊ ವೈಕುಂಠ ೧

ಬಂದು ಕಂಡೆನು ನಿನ್ನ ಇಂದು ನಾ ಮಾಡ್ದ ಪುಣ್ಯ
ಬಂದು ಕೈಸೇರಿತಿನ್ನ ಸುಂದರಾಂಗನೆ ಎನ್ನ
ಬಂಧ ಪರಿಹರಿಸಿ ಬೇಗದಿಂದ ಉದ್ಧರಿಸೋ ಈಗ
ನಂದನ ಕಂದ ರಂಗ ಬಂಧುವೇ ಪಾಂಡುರಂಗ

ಪೂರ್ಣ ಭಕ್ತ ಚಕೋರ ಪೂರ್ಣಚಂದ್ರನೆ ಭಕ್ತಿ
ಪೂರ್ಣ ಶರಧಿಗೆ ಚಂದ್ರನೆ
ಪೂರ್ಣ ಬಾಧೆಯಪಡುವೆ ಪೂರ್ಣಗೈಸೆನ್ನಭವ
ಪೂರ್ಣಚಂದ್ರನೆ ತಾಪಕೆ
ಪೂರ್ಣ ನಂಬಿರುವೆನೊ ಪೂರ್ಣದಯವನೆಗರೆಯೊ
ಪೂರ್ಣ ಕೃಪೆ ಚಂದ್ರಿಕೆ ಈಗಲೇ । ಬೀರೆನ್ನ ಮೇಲೆ ೨

ಪೂರ್ಣಚಂದ್ರನ ವಂಶ ಪಾವನವಗೈಯಲು
ಪೂರ್ಣ ಯದುಕುಲದಿ ಜನಿಸಿ
ಪೂರ್ಣ ಭಕ್ತರು ಆದ ಆ ನರಾದಿಗಳನ್ನು
ಪೂರ್ಣ ಯುದ್ಧದಲಿ ಗೆಲಿಸಿ
ಪೂರ್ಣ ರಾಜ್ಯವನಿತ್ತೆ ಪ್ರಾಣಿ ಹೃದ್ಗುಹವಾಸಿ
ಪೂರ್ಣ ಶ್ರೀ ವೆಂಕಟೇಶ । ಶ್ರೀ ಶ್ರೀನಿವಾಸ ೩

ಪೂರ್ಣತತ್ವಗಳಿಗೆ ಪೂರ್ಣ ಶಕ್ತಿಯನಿತ್ತು
ಪೂರ್ಣಗೊಳಿಸಿದೆ ಸೃಷ್ಟಿಯ
ಪೂರ್ಣತತ್ವಾಧಿಪತಿ ಪ್ರಾಣದೇವನ ಪ್ರಿಯ
ಪೂರ್ಣ ಭಕ್ತರ ರಕ್ಷಕ
ಪೂರ್ಣ ಮನೋರಥದಾತ ಜೀವನಂತರ ವ್ಯಾಪ್ತ
ಜ್ಞಾನ ವಿಜ್ಞಾನದಾತ । ಸುಜನರಿಗೆ ಪ್ರೀತ ೪

ಪೂರ್ಣ ಭೂಮಂಡಲಕೆ ಪೂರ್ಣ ಪ್ರಭು ನೀನೆಂದು
ಪೂರ್ಣಬೋಧರು ನುಡಿವರೊ
ಪೂರ್ಣ ದೇವತೆಗಳು ಪೂರ್ಣ ನಿನ್ನನು ಭಜಿಸಿ
ಪೂರ್ಣ ಪದ ಪಡೆದಿರುವರೊ
ಪೂರ್ಣ ಹರಿ ಗೋಪಾಲಕೃಷ್ಣವಿಠ್ಠಲ ಎನ್ನ
ಪೂರ್ಣ ಇಚ್ಛೆಯನೆ ಸಲಿಸೊ । ನೀ ಮನದಿ ನೆಲಸೊ ೫

## ೫೧

ಬಾಗಿಲನು ತೆಗಿಸಿ ದರುಶನವ ಕರುಣಿಸಿದೆಯೋ
ಭೋಗ ನರಸಿಂಹಸ್ವಾಮಿ ಪ.

ನಾಗಶಯನನೆ ದೇವ ಕರಿಗಿರಿ ನಿಲಯ ಹರಿ
ಯೋಗಿ ಶ್ರೀಗುರು ಹೃದಯ ನಿಲಯ ಅ.ಪ.

ಸಿರಿಯನ್ನೆ ತೊಡೆಯ ಮೇಲೆರಿಸಿಕೊಂಡು ನಗುತ
ಪರಿಪರೀ ಸೇವೆಯನು ಭಕ್ತರಿಂ ಕೊಳುತ
ಪರಮಾತ್ಮ ಪಂಚಾಮೃತದ ಅಭಿಷೇಕವನು
ಎರೆಯುತಿರೆ ಕಂಡು ನಾ ಹರುಷಪಟ್ಟೆನೊ ಸ್ವಾಮಿ ೧

ಸುರನದಿಯ ಜಲ ತಂದು ನಿನಗಭಿಷೇಕವನೆ ಎರೆದು
ಪರಿಪರಿಯ ಪೂಜೆ ಅಲಂಕಾರವನೆ ಮಾಡಿ
ತರತರದ ಷಡ್ರಸವ ಭೋಜನವಗೈಸುತಲಿ
ವರ ಮಂಗಳಾರತಿಯನೆತ್ತಿದುದ ಕಂಡೆ ೨

ಘನ್ನ ಮಹಿಮನೆ ಸ್ವಾಮಿ ಎನ್ನ ಬಿನ್ನಪ ಕೇಳಿ
ಮನ್ನಿಸಿ ದರುಶನವ ಇನ್ನು ಕರುಣಿಸಿದೆ
ನಿನ್ನ ಸಮರಿನ್ಯಾರೊ ಪನ್ನಗಶಯನನೆ
ಧನ್ಯರೋ ನಿನ್ನ ಪದವ ನಂಬಿದವರು ೩

ಶಾಂತರೂಪವ ಧರಿಸಿ ಶಾಂತ ಮೂರುತಿ ಎನಿಸಿ
ಅಂತರಂಗದಿ ನಿನ್ನ ಧ್ಯಾನಿಸುವರ
ಸಂತೋಷಪಡಿಸುತಲಿ ಕಾಯ್ವ ಕಮಲಾಕಾಂತ
ಅಂತರಂಗವ ತಿಳಿದು ಸಂತೈಸೊ ಎನ್ನ ೪

ಅಪಾರಮಹಿಮ ಅದ್ಭುತಚರಿತ । ಶೇಷಾದ್ರಿಯೊಳ್ ನಿರುತ
ವ್ಯಾಪಾರ ಮಾಡುತ ಗುಪ್ತದೊಳಿರುತ । ನಿಜ ಭಕ್ತಗೆ ಕಾಣುತ್ತ
ಈ ಪರಿ ಅದ್ಭುತ ಚರಿತೆಯ ತೋರುವ
ಗೋಪಾಲಕೃಷ್ಣ ವಿಠ್ಠಲನೆ ನೀ ಕಾಯೊ ೭

## ೫೪

ಬಾಲಕ ಕಂಡೆನು ನಿನ್ನ । ಬಾಲಕ ಪ.

ಬಾಲಕ ಕಂಡೆನು ನಿನ್ನಾ । ಮುದ್ದು
ಬಾಲ ತೊಡಿಗೆ ಇಟ್ಟರನ್ನಾ । ಆಹ
ಶೀಲಯತಿಗಳಿಂದ ಕಾಲ ಕಾಲದ ಪೂಜೆ
ಮೇಲಾಗಿ ಕೈಕೊಂಡು ಪಾಲಿಪ ಸುಜನರ ಅ.ಪ.

ವಸುದೇವ ಕಂದ ಗೋವಿಂದ
ವಸುಧಿ ಭಾರವನಿಳುಹೆ ಬಂದಾ । ಪುಟ್ಟ
ಹಸುಗಳ ಕಾಯ್ದ ಮುಕುಂದ । ರ
ಕ್ಕಸರನೆಲ್ಲರ ತಾನೆ ಕೊಂದಾ । ಆಹಾ
ಹಸುಮಕ್ಕಳೊಡಗೂಡಿ ಮೊಸರು ಬೆಣ್ಣೆಯ ತಿಂದು
ಶಶಿಮುಖಿಯರಮನಕಸಮ ಸಂತಸವಿತ್ತು ೧

ವಿಶ್ವವ್ಯಾಪಕನಾದ ಬಾಲಾ । ಸರ್ವ
ವಿಶ್ವ ತನ್ನೊಳಗಿಟ್ಟ ಬಾಲಾ । ಸ
ರ್ವೇಶ್ವರನೆನಿಸುವ ಬಾಲಾ । ಬ್ರಹ್ಮ
ಈಶ್ವರ ಸುರ ಪರಿಪಾಲಾ । ಆಹ
ವಿಶ್ವಾದಿ ರೂಪಕ ವಿಶ್ವ ಪ್ರದೀಪಕ
ವಿಶ್ವನಾಟಕ ಸರ್ವ ವಿಶ್ವಚೇಷ್ಟಕನಾದ ೨

ಸಿರಿಗರಿಯದ ಗುಣನೀತಾ । ಮತ್ತೆ
ಸಿರಿಯ ತನ್ನೊಳಗಿಟ್ಟಾತಾ । ಆ

ಸಿರಿಯಲ್ಲಿ ತಾನಿರುವಾತಾ । ಸೃಷ್ಟಿ
ಸಿರಿಯಿಂದ ಮಾಡಿಸುವಾತಾ । ಆಹ
ಸಿರಿಯ ಬಿಟ್ಟಗಲದೆ ಸಿರಿಗೆ ಮೋಹಕನಾಗಿ
ಸಿರಿ ಸೇವೆ ಕೈಕೊಂಬ ಸಿರಿಕಾಂತ ಶ್ರೀಕೃಷ್ಣ ೩

ಪ್ರಳಯಾಂಬುವಟಪತ್ರ ಶಯನಾ । ಥಳ
ಥಳಿಸುವ ಪದತಳ ಅರುಣಾ । ವರ್ಣ
ಎಳೆಗೂಸಿನಂತಿಹ ಚಿಣ್ಣಾ । ಆರು
ತಿಳಿಯಲಾಗದ ಗುಣಪೂರ್ಣ । ಆಹ
ನಳಿನಭವನ ಪೊಕ್ಕಳಲಿ ಪಡದು ತನ್ನ
ನಿಲಯ ತೋರಿಸಿ ಕಾಯ್ದ ಚಲುವ ಚನ್ನಿಗ ದೇವ ೪

ಸತಿ ಪ್ರಾಯ ಕೆಡಿಸದೆ ತನ್ನಾ । ಮೈಯ್ಯೋಳ್
ಸುತರ ಪಡೆದಂಥ ಸಂಪನ್ನಾ । ವೇದ
ತತಿಗೆ ಶಿಲ್ಕದ ಸುಗುಣಾರ್ಣ । ಅ
ದ್ಭುತ ರೂಪ ಜಗದೇಕ ಘನ್ನಾ । ಆಹ
ಜಿತಮಾನಿಗಳಿಗೆ ಹಿತಕೃತಿ ಕಲ್ಪಿಸಿ
ಜತನದಿ ಜಗಜೀವತತಿಗಳ ಕಾಯೂವ ೫

ಸುರತತಿಗಳನೆ ನಿರ್ಮಿಸಿ । ಅವರೊಳ್
ತರತಮ ಭೇದ ಕಲ್ಪಿಸಿ । ತನ್ನ
ವರಪುತ್ರನೋಶಕೆ ವಪ್ಪಿಸಿ । ಸೃಷ್ಟಿ
ಗರಸನ್ನ ಮಾಡಿ ನೀ ನಿಲಿಸೀ । ಆಹ
ಕಿರಿಪುತ್ರನಿಗೆ ಭಾವಿ ಪರಮೇಷ್ಠಿ ಪದವಿತ್ತು
ಸರುವ ಜೀವರ ಶ್ವಾಸಕ್ಕರಸನೆಂದೆನಿಸಿದ ೬

ಸರಿ ಇಲ್ಲ ವಾಯುಗೆಂದೆನಿಸೀ । ತತ್ವ
ಸುರರಿಗಧೀಶನೆಂದೆನಿಸೀ । ತನ್ನ
ಶರಣರ ಕಾಯ್ವನೆಂದೆನಿಸೀ । ಅವ
ನಿರುವಲ್ಲಿ ತಾ ಸಿದ್ಧನೆನಿಸೀ । ಆಹ

ತರಣಿಜಗೊಲಿಯುತ್ತ ಕುರುಕುಲವಳಿಯುತ್ತ
ಪರಮತ ಖಂಡಿಸಿ ಕರೆಯೆ ತನ್ನನು ಬಂದಾ ೭

ತ್ರಿವಿಧ ಜೀವರಗತಿದಾತಾ । ನಮ್ಮ
ಪವನನಂತರ್ಯಾಮಿ ಈತಾ । ಪದ್ಮ
ಭವ ರುದ್ರ ತ್ರಿದಶರ ಪ್ರೀತಾ । ಭಕ್ತ
ರವಸರಕೊದಗುವ ದಾತಾ
ಧ್ರುವಗಜ ಅಜಮೀಳ ಪವನಜ ಸತಿಭಕ್ತ
ನಿವಹ ತಾಪದಿ ಕೂಗೆ ಭುವಿಯಲ್ಲಿ ಪೊರೆದಂಥ ೮

ಶುಕ್ಲ ಶೋಣಿತ ನೀಲ ಕಾಯಾ । ದೇವ
ಅಕ್ಲೇಶ ಆನಂದಕಾಯಾ । ಯುಗಕೆ
ತಕ್ಕಂಥ ವರ್ಣಸುಕಾರ್ಯ । ಮಾಳ್ಪ
ರಕ್ಕಸಾಂತಕ ಕವಿಗೇಯಾ । ಆಹ
ಪೊಕ್ಕಳ ನಾಡಿಯೊಳ್ ಸಿಕ್ಕುವ ಜ್ಞಾನಿಗೆ
ದಕ್ಕುವ ಸುರರಿಗೆ ಠಕ್ಕಿಪ ದನುಜರ ೯

ಸಚ್ಚಿದಾನಂದ ಸ್ವರೂಪ । ಭಕ್ತ
ರಿಚ್ಛೆ ಸಲ್ಲಿಸಿ ಕಳೆವ ತಾಪಾ । ಶ್ರೀ
ವತ್ಸ ಲಾಂಛನ ಭವ ಕೂಪಾ । ದಲ್ಲಿ
ಮುಚ್ಚಿಡ ತನ್ನನ್ನೆ ಸ್ತುತಿಪಾ । ಆಹ
ಅಚ್ಚ ಭಾಗವತರ ಮೆಚ್ಚಿ ಕಾಯುತ ಅಘ
ಕೊಚ್ಚಿ ತನ್ನುದರದಿ ಬಚ್ಚಿಟ್ಟು ಕಾಯುವ ೧೦

ವಲ್ಲನು ಸಿರಿಸತಿ ಪೂಜೆ । ಮತ್ತೆ
ವಲ್ಲನು ಸುರ ಸ್ತುತಿ ಗೋಜೆ । ತಾ
ನೊಲ್ಲನು ಮುನಿಗಳ ಓಜೆ । ಹರಿ
ವಲ್ಲನು ಋಷಿಯಾಗವ್ಯಾಜೆ । ಆಹ
ಬಲ್ಲಿದ ಭಕುತರ ಸೊಲ್ಲಿಗೊದಗಿ ಬಂದು
ಚಲ್ವರೂಪದಿ ಹೃದಯದಲ್ಲಿ ನಿಲ್ಲುವ ಕರುಣಿ ೧೧

ಅಂಬುದಿಶಯನ ಶ್ರೀಕಾಂತಾ । ಸರ್ವ
ಬಿಂಬನಾಗಿಹ ಮಹಶಾಂತ । ತನ್ನ
ನಂಬಿದ ಸುಜನರ ಅಂತಾ । ರಂಗ
ಅಂಬುಜ ಮಧ್ಯ ಪೊಳೆವಂಥಾ । ಆಹ
ಅಂಬುಜನಾಭ ಪ್ರಲಂಬ ಭಂಜನ ಪಶ್ಚಿ-
ಮಾಂಬುಧಿ ತಡಿವಾಸ ಶಂಬರಾರೀಪಿತ ೧೨

ಸ್ವಪ್ನದಿ ಗೋಪಿಕರ ತಂದು । ಎನ
ಗೊಪ್ಪಿಸೆ ತನ್ನ ಕೂಸೆಂದು । ಚಿನ್ನ
ದಪ್ಪಾರಭರಣವದೆಂದೂ । ನಾನು
ವಪ್ಪದಿರಲು ಎತ್ತೆನೆಂದೂ । ಆಹಾ
ತಪ್ಪಿಸಿಕೊಳ್ಳೆ ಮತ್ತೊಪ್ಪಿಸಿ ಪೋದಳು
ಅಪ್ಪಿ ಎನ್ನ ತೋಳೊಳೊಪ್ಪಿದ ಶಿಶುರೂಪ ೧೩

ಶ್ರೀ ಮಾಯಾಜಯ ಶಾಂತಿ ರಮಣಾ । ಕೃತಿ
ನಾಮಕ ಶಿರಿವರ ಕರುಣಾ । ಪೂರ್ಣ
ಹೇಮಾಂಡ ಬಹಿರಾವರ್ಣ । ವ್ಯಾಪ್ತ
ಮಾ ಮನೋಹರ ಪ್ರಣವ ವರ್ಣಾ । ಆಹ
ಸ್ವಾಮಿ ಸರ್ವೋತ್ತಮ ಧಾಮತ್ರಯದಿ ವಾಸ
ಶ್ರೀಮದಾಚಾರ್ಯರ ಪ್ರೇಮ ಮೂರುತಿ ಮುದ್ದು ೧೪

ದ್ವಿ ದಳ ಮಧ್ಯದಿ ರಥ ನಿಲಿಸೀ । ಪಾರ್ಥ
ನೆದೆಗುಂದೆ ತತ್ವಾರ್ಥ ತಿಳಿಸೀ । ನಿನ್ನ
ಅದುಭುತ ರೂಪ ತೋರಿಸೀ । ಸ-
ನ್ಮುದವಿತ್ತು ಕುರುಕುಲವರಸಿ । ಆಹ
ವಿದುರನ ತಾತ ನಿನ್ನೊಡೆಯ ಬಾಣದಿ ಘಣೆ
ಯದುವೀರ ಚಕ್ರ ಹಸ್ತದಿ ಧರಿಸುತ ಬಂದ ೧೫

ನಿತ್ಯನೂತನ ದೇವ ದೇವಾ । ಸರ್ವ
ಶಕ್ತ ನಿನ್ನೊರತಾರು ಕಾವಾ । ಎನ್ನ

ಚಿತ್ತದಿ ನೆಲಸು ಪ್ರಭಾವಾ । ಸರ್ವ
ಕೃತ್ಯ ನಿನ್ನದೊ ವಿಜಯ ಭಾವಾ । ಆಹಾ
ಮುಕ್ತಿ ಪ್ರದಾತನೆ ಮುಕ್ತರಿಗೊಡೆಯನೆ
ತತ್ವ ನಿಯಾಮಕ ತತ್ವಾರ್ಥ ತಿಳಿಸೈಯ್ಯಾ ೧೬

ಚರಣತಳಾರುಣ ಪ್ರಭೆಯೂ । ಪತ್ತು
ಬೆರಳ ನಖ ಪಂಕ್ತಿಯ ಪರಿಯೂ । ಗೆಜ್ಜೆ
ಸರಪಳಿ ಪಾಡಗರುಳಿಯೂ । ಮೇಲೆ
ಜರೆಯ ಪೀತಾಂಬರ ನೆರಿಗೆಯೂ । ಆಹ
ವರ ಜಾನುಜಂಘೆಯು ಕರಿಸೊಂಡಲಿನ ತೊಡೆ
ಸರ ಮಧ್ಯ ಉರುಕಟಿ ಕಿರಿಗೆಜ್ಜೆ ಉಡುದಾರ ೧೭

ಸರಸಿಜೋದ್ಭವ ವರಸೂತ್ರ । ಮೇಲೆ
ಮೆರೆವಂಥ ಸಿರಿಯ ಮಂದಿರ । ಹೃದಯ
ವರರತ್ನ ಪದಕದ ಹಾರ । ಸ್ವಚ್ಛ
ದರ ವರ್ಣ ಪೊಲ್ವ ಕಂಧಾರಾ । ಆಹ
ಕರದ್ವಯ ಕಂಕಣುಂಗುರ ತೋಳ ಬಾಪುರಿ
ಸುರರಿಗಭಯ ತೋರ್ಪ ಕರಕಮಲದ ಪುಟ್ಟ ೧೮

ಮೊಸರರ್ಥ ಕಡದಿರೆ ಜನನೀ । ಬಂದು
ಹಸುಗೂಸು ಮೇಲೆ ಬೇಡೆ ನನ್ನೀ । ಯಿಂದ
ಮುಸುಗಿಟ್ಟು ಪಾಲ್ಕುಡಿಯಲು ನೀ । ಒಲೆ
ಬಿಸಿ ಹಾಲುಕ್ಕಲು ಪೋಗೆ ಜನನೀ । ಆಹ
ಹಸಿವಡಗದ ಕೋಪಕ್ಕಸ್ರಗ್ಗಡಿಗೆಯ ಪಡ–
ದೆಸೆವ ಕಡಗೋಲ್ಪಡಿದ್ಮೊಸರೋಡಿ ಬಂದ ಹೇ ೧೯

ಪದ್ಮ ಮುಖದ ಕಾಂತಿ ಸೊಂಪೂ । ಅಧರ
ತಿದ್ದಿ ಮಾಡಿದ ದಂತ ಬಿಳುಪೂ । ತುಂಬಿ
ಮುದ್ದು ಸುರಿಸುವ ಗಲ್ಲದಿಂಪೂ । ಕರ್ಣ
ದ ದ್ವಯ ಕುಂಡಲ ಕೆಂಪೂ । ಆಹ

ಮಧ್ಯ ಮೂಗುತಿ ನಾಸ ಪದ್ಮದಳಾಕ್ಷವು
ಸದ್ಭಕ್ತರೇಕ್ಷಣ ಶುದ್ಧಾತ್ಮ ಸುಖಪೂರ್ಣ ೨೦

ಕಮಲಸಂಭವ ವಾಯುಚಲನಾ । ಹುಬ್ಬು
ವಿಮಲ ಫಣೆ ತಿಲುಕದಹನಾ । ಮೇಲೆ
ಭ್ರಮರ ಕುಂತಳ ಕೇಶ ಚನ್ನಾ । ವಜ್ರ
ಅಮಿತ ಸುವರ್ಣ ಮುತ್ತೀನಾ । ಆಹ
ಕಮನೀಯ ಮಕುಟವು ಸುಮನಸರೊಂದಿತ
ಕಮಲ ತುಳಸಿಹಾರ ವಿಮಲಾಂಗ ಸುಂದರ ೨೧

ಅಂತರ ಬಹಿರ ದಿವ್ಯಾಪ್ತಾ । ಸರ್ವ
ರಂತರ ಬಲ್ಲ ನೀ ಗುಪ್ತಾ । ಜೀವ
ರಂತರಂಗದಿ ವಾಸ ಸುಪ್ತಾ । ದಿಗ
ಳಂತಾನೆ ನಡೆಸುವ ಆತ್ತಾ । ಆಹ
ಸಂತತ ಚಿಂತಿಪರಂತರಂಗದಿ ನಿಂತು
ಕಂತುಪಿತ ಇನಕೋಟಿಕಾಂತಿ ಮೀರಿದ ಪ್ರಭ ೨೨

ಎಚ್ಚತ್ತು ಇರುವ ಸರ್ವದಾ । ಕಾಲ
ಮುಚ್ಚಿ ಕೊಂಡಿಪ್ಪೊದೆ ಮೋದಾ । ಅಜ
ನುಚ್ವಾಸದುತ್ಪತ್ತಿಯಾದ । ಬಾಯ
ಮುಚ್ಚಿದ ಅದ್ಭುತ ಪಾದ । ಆಹ
ಮುಚ್ಚೆ ಭೂವ್ಯೋಮವು ಹೆಚ್ಚಿನ ಕೋಪವು
ಇಚ್ಚಿಪವನವಾಸ ಸ್ವೇಚ್ಛಾ ವಿಹಾರನೇ ೨೩

ಗೊಲ್ಲರೊಡನಾಟ ಬಯಸೀ । ವಸ್ತು
ವಲ್ಲದೆ ಪರಸ್ತ್ರೀಯರೊಲಿಸೀ । ಮತ್ತೆ
ಚಲ್ವ ಕುದುರೆ ಏರಿ ಚರಿಸೀ । ತಾ
ನೆಲ್ಲಿ ನೋಡಲು ಪೂರ್ಣನೆನಿಸೀ । ಆಹ
ವಲ್ಲದೆ ದ್ವಾರಕೆ ಇಲ್ಲಿಗೈತಂದು ಮ
ತ್ತೆಲ್ಲರ ಕಾಯುವ ಚೆಲ್ವ ಮಧ್ವೇಶ ಶ್ರೀ ೨೪

ಗೋಪಿ ಕಂದನೆ ಮುದ್ದು ಬಾಲಾ । ಚೆಲ್ವ
ರೂಪ ಸಜ್ಜನ ಪರಿಪಾಲಾ । ಗುರು
ಗೋಪತಿ ನಿತ್ಯ ನಿರ್ಮಾಲಾ । ದೇವಾ
ಗೋಪಾಲಕೃಷ್ಣವಿಠ್ಠಾಲ । ಆಹ
ಈ ಪುಟ್ಟ ರೂಪದಿ ಈ ಪರಿ ನಿಂತು ಮ
ಹಾಪೂಜೆ ಕೈ ಕೊಂಡ ಶ್ರೀಪತಿ ಮರುತೇಶ ೨೫

## ೫೫

ಬಿಟ್ಯಾಗೆ ಇರಲಿನ್ನೀ ಚರಣ । ರಂಗ ಪ.

ವಿಠ್ಠಲನಾ ಪುಟ್ಟ ಚರಣ
ಬಿಟ್ಟು ಗೋಕುಲ ಪುಂಡಲೀಕನಿಗೊಲಿಯುತ
ಇಟ್ಟಿಗೆ ಮೇಲ್ಬೊಂದಿ ನಿಂತಂಥ ಚರಣ ಅ.ಪ.

ಭಕ್ತರಿಗೊಲಿಯುವ ಚರಣಾ । ವೇದ
ಉಕ್ತಿಗೆ ನಿಲುಕದ ಚರಣಾ
ಹತ್ತಿ ಪಾರ್ಥನ ರಥ ಮತ್ತೆ ಭೀಷ್ಮನಿಗೊಲಿದು
ಹಸ್ತದಿ ಚಕ್ರವ ಪಿಡಿದು ಬಂದಾ ಚರಣ ೧

ಬಲಿಯನ್ನು ತುಳಿದಂಥ ಚರಣಾ । ಮೂರು
ಇಳೆಯನಳೆದ ಪುಟ್ಟ ಚರಣ
ಕುಲಕೋಟಿ ಉದ್ಧಾರಗೈವಂಥ ಗಂಗೆಯ
ಚಲುವ ಉಂಗುಟದಲ್ಲಿ ಪಡೆದ ಕೋಮಲ ಚರಣ ೨

ಹಸ್ತಿ ಕರೆಯೆ ಬಂದ ಚರಣಾ । ಲಕ್ಷ್ಮಿ
ವತ್ತುವ್ರೋ ಮೃದುತಳ ಚರಣಾ
ಚಿತ್ತದೆ ಚಿಂತಿಪ ಭಕ್ತರ ಮನದೈವ
ತೆತ್ತಿಗನಾಗಿ ಐವರ ಪೊರೆದಾ ಚರಣ ೩

ಭೀಮ ತೀರಾ ವಾಸ ಚರಣಾ । ಭಕ್ತ
ರಾಮಯ ಹರಿಸುವ ಚರಣಾ
ಕಾಮಜನಕ ಪಾಂಡುರಂಗವಿಠ್ಠಲನೆಂದು
ಪ್ರೇಮದಿಂ ಭಜನೆಗೊಂಬುವ ಸ್ವಾಮಿ ಚರಣಾ ೪

ಬಿಟ್ಟಿರಲಾರೆ ನೀ ಚರಣ । ಮನದಿ
ಕಟ್ಟಿ ಹಾಕೂವೆ ನಾ ನೀ ಚರಣ
ದಿಟ್ಟ ಶ್ರೀ ಗೋಪಾಲಕೃಷ್ಣವಿಠ್ಠಲ ಚರಣ
ಇಟ್ಟು ಹೃತ್ಕಮಲದಿ ಪೂಜಿಪೆ ನೀ ಚರಣ ೫

## ೫೬

ಬಂದನಿದಕೋ ರಂಗ ಬಂದನಿದಕೋ
ಸುಂದರಾಂಗನು ನಮ್ಮ ಮಂದಿರಕೆ ಈಗಾ ಪ.

ಮುಗಳುನಗೆ ಮುಖದಲ್ಲಿ ಮುಂಗುರುಳು ನವಿಲುಗರಿ
ಖಗರಾಜ ವಾಹನನ ಕಂಬು ಕಂಠಾ
ಝಗ ಝಗಿಪ ಕುಂಡಲವು ಕಸ್ತೂರಿ ತಿಲಕ ಫಣಿ
ನಗಧರನು ನಮ್ಮ ಮನಸೂರೆಗೊಂಬುದಕೇ ೧

ಕರದಲಿ ಕಂಕಣವು ಬೆರಳಲ್ಲಿ ಉಂಗುರವು
ಕೊರಳಲ್ಲಿ ನವರತ್ನ ಮುತ್ತಿನಹಾರಗಳೂ
ಕಿರುಗೆಜ್ಜೆ ನಡುವಿನಲಿ ವಲಿವೋ ಪೀತಾಂಬರವು
ವರ ವೇಣು ವಯ್ಯಾರದಿಂದ ಊದುತಲೀ ೨

ಸುರರ ವಂಚನೆಗೈದು ವರ ಋಷಿಗಳನೆ ಜರಿದು
ಸಿರಿಗಗೋಚರನೆನಿಸಿ ಪರಮ ಪುರುಷಾ
ವರಧಾಮತ್ರಯಗಳನೂ ಮರದೆಮ್ಮ ಗೋಕುಲದಿ
ಮೆರೆವ ನೀ ಲೋಕಮೋಹನ ಚರಿಯ ತೋರೀ ೩

ಇಂದಿರೇಶನು ನಮ್ಮ ವೃಂದಾವನದೊಳಿಪ್ಪ
ಮಂದಿಗಳ ಮನ ಸೆಳೆದು ಮಾರಜನಕಾ
ಒಂದೊಂದು ರೂಪಿನಲಿ ಗೋಪಿಕಾ ಸ್ತ್ರೀಯರೊಳು
ಬಂದು ಬೆರೆಯುವ ಮದನಕಲೆ ನಿಪುಣ ಚೆಲುವಾ ೪

ಗೋವರ್ಧನೋದ್ಧಾರ ಗೋವಳರ ವಡಗೂಡಿ
ಗೋವುಗಳ ಕಾಯತಲಿ ಗೋಪಿ ಬಾಲಾ
ಗೋವಿಂದ ಗೋಪಾಲಕೃಷ್ಣವಿಠಲ ನಮ್ಮ
ಪೂರ್ವ ಪುಣ್ಯದ ಫಲದಿ ಭೂವನಿತೆ ಪಾಲಾ ೫

## ೫೭

ಬಂದಾ ಬಂದಾ ಉಡುಪಿಲಿ ನಿಂದ ನಿಂದಾ ಪ.

ಬಂದ ಗೋಪೇರ ವೃಂದಗಳ ತಾ
ನಂದು ದಣಿಸುತ ಸುಂದರಾಂಗನು
ನಂದಗೋಪಗೆ ನಂದನೆನಿಸಿದ
ಮಂದರೋದ್ಧರ ಬೃಂದೆಯಿಂದಲಿ ಅ.

ಮುದ್ದುಸುರಿಸುತ ಗೋಕುಲದೊಳಿರೆ
ಕದ್ದು ಬೆಣ್ಣೆಯ ತಿಂದನೆನುತಲಿ
ಸುದ್ದಿ ತಾಯಿಗೆ ಪೇಳಿ ಸತಿಯರು
ಗದ್ದಲದಿ ತನ್ನ ಗಾರು ಮಾಡಲು
ಮುದ್ದು ಯತಿಗಳು ಎದ್ದು ಪೂಜಿಸಿ
ಮುದ್ದಿ ಬೆಣ್ಣೆ ನೇವೇದ್ಯವಿಡುತಿರೆ
ಸದ್ದು ಇಲ್ಲದೆ ತಿಂದು ಸುಖದಲಿ
ಇದ್ದೇನೆಂಬುವ ಬುದ್ಧಿಯಿಂದಲಿ ೧

ಭಾರವಿಳುಹಲು ಕೋರೆ ಭೂಮಿಯು
ನಾರದಾದ್ಯರ ನುತನು ತಾ ಬರೆ

ನಾರಿಯರು ಮನ ಬಂದ ತೆರದಲಿ
ಜಾರ ಚೋರನೆನುತ್ತ ಬೈಯ್ಯಲು
ಧೀರ ಯತಿಗಳು ಸೇರಿ ಪರಬೊಮ್ಮ
ಶ್ರೀರಮಣನೆನ್ನುತ ಸ್ತುತಿಸುವೋ
ವಾರುತಿಗೆ ಮೈದೋರಿ ಭಕುತರ
ಪಾರಿಗಾಣಿಪೆನೆಂಬ ನೆವದಲಿ ೨

ಹಸಿದುಗೋಪರ ಯಜ್ಞವಾಟಕೆ
ಅಶನ ಬೇಡಲು ಕಳುಹೆ ಗೊಲ್ಲರ
ಪಸುಳರಿಗೆ ನೈವೇದ್ಯವಿಲ್ಲದೇ
ವಶವೆ ಕೊಡಲೆಂದೆನ್ನೆ ಋಷಿಗಳು
ವಸುಧಿಪತಿ ಸರ್ವೇಶನೆಂದರಿ
ದಸಮಯತಿಗಳು ಕ್ಷಣ ಕ್ಷಣಕ್ಕೆ ಷ
ಡ್ರಸದ ಆರೋಗಣೆಯ ಮಾಡಿಸೆ
ಕುಶಲದಲಿ ಮೃಷ್ಟಾನ್ನ ಭುಜಿಸಲು ೩

ಬಾಲ ಕಂದಗೆ ತೊಡಿಗೆ ತೊಡಿಸಲು
ಲೀಲೆಯಿಂದಲಿ ಗೋಪಿದೇವಿಯು
ಕಾಳ ಮಡುವಿಲಿ ಧುಮಿಕಿ ಎಲ್ಲವ
ಕಳೆದು ಬರೆ ಆಟಗಳ ಪರೆವೆಲಿ
ಶೀಲಯತಿಗಳು ವಾರ ವಾರಕೆ
ಬಾಲ ತೊಡಿಗೆ ಶೃಂಗಾರಗೈಯ್ಯಲು
ಆಲಯವ ಬಿಟ್ಟೆಲ್ಲಿ ಪೋಗದೆ
ಓಲಗವ ಕೈಕೊಳ್ವೆನೆನ್ನುತ ೪

ಗೋಪಜನ ಗೋವ್ಗಳನೆ ಕಾಯಲು
ಗೋಪಿಯರು ತನ್ನ ಗುಲ್ಲು ಮಾಡಲು
ಪಾಪಿ ಕಂಸ ಅಟ್ಟುಳಿಯ ಪಡಿಸಲು

ಭೂಪತಿಯ ಪದವಿಲ್ಲದಿರಲು
ಈ ಪರಿಯ ಬವಣೆಗಳ ತಾಳದೆ
ಗೋಪ್ಯದಿಂದಿಲ್ಲಡಗಿ ನಿಂತು
ಗೋಪಾಲಕೃಷ್ಣವಿಠಲ ಯತಿಗಳ
ಗೌಪ್ಯಪೂಜೆಯಗೊಂಬ ವಿಭವಕೆ ೫

## ೫೮

ಬಂದು ನಿಲ್ಲೆಲೊ ಮನಮಂದಿರದೊಳು ಹರಿ
ಇಂದುವದನ ಆನಂದದಿಂದ ಪ.

ಮುಂದಗಮನೆರ ಅಂದದಿ ಕೂಡ್ಯರ–
ವಿಂದ ಮಧ್ಯದಿ ಬಹು ಸುಂದರ ವೆಂಕಟ ಅ.ಪ.

ಗಜವ ಪಾಲಿಸಿದಂಥ ಭುಜಗಶಯನ ಹರೆ
ತ್ರಿಜಗದೊಳಗೆ ದಿಗ್ವಿಜಯ ಮೂರುತಿ ಗೋ–
ವ್ರಜವ ಪಾಲಿಸಿ ಭೂಭುಜರ ಪೊರೆದೆ ಅಂ–
ಬುಜನೇತ್ರ ಅಜಪಿತ ಭಜಿಸಲಾಪೆನೆ ನಿನ್ನ
ಅಜಸುತಗೊಲಿದನೆ ಭುಜಗ ಭೂಷಣವಂದ್ಯ
ರಜ ತಮೊ ಸತ್ವದಿ ತ್ರಿಜಗವ ಸೃಷ್ಟಿಪೆ
ಕುಜನರ ಶಿಕ್ಷಿಪೆ ರಜ ತಮೊ ದೂರನೆ
ಸುಜನರ ಪೊರೆಯುವ ಋಜುಗಣವಂದಿತ ೧

ವ್ಯಾಪ್ತಾ ಜಗದಿ ನಿರ್ಲಿಪ್ತ ಗುಣಗಳಿಂದ
ಆಪ್ತ ಜೀವಕೆ ಸುಷುಪ್ತಿ ಕಾಲದಿ ನೀ
ಗುಪ್ತನಾಗಿ ಪೊರೆವ ಶಕ್ತನಹುದೊ ತ್ರಿ–
ಸಪ್ತ ಇಂದ್ರಿಯಗಳ ತೃಪ್ತಿಗೊಳಿಸು ನಿನ್ನೊಳ್
ಸಪ್ತ ಋಷಿಗಳಿಂದ ಗುಪ್ತರ್ಚನೆಗೊಂಬೆ

ಸಪ್ತಜಿಹ್ವನೊಳು ವ್ಯಾಪ್ತನಾಗಿ ಸುರರ
ತೃಪ್ತಿಪಡಿಸುವ ವ್ಯಾಪ್ತ ಮೂರುತಿಯೆ
ಸಪ್ತ ಸಪ್ತ ಭುವನೇಶ ಪ್ರಕಾಶ ೨

ವೇದಸುತಗೆ ಇತ್ತು ಆದರದಿ ಸುಧೆ
ಮೋದದಿ ಸುರರಿಗುಣಿಸಿ ಭೂದೇವಿಯನು ಕಾಯ್ದೆ
ಬಾಧಿಸೆ ಖಳ ಸುತನ ಭೇದಿಸಿ ಕಂಭ ಬಂದೆ
ಪಾದದಿ ಗಂಗೆ ಪೆತ್ತು ಬಾಧೆ ಕ್ಷತ್ರಿಯರಿಗಿತ್ತೆ
ಆದರದಲಿ ಸುಗ್ರೀವನ ಪೊರೆದೆ
ಯಾದವ ವಂಶ ಮಹೋದಧಿ ಚಂದ್ರ
ಸಾಧಿಸಿ ತ್ರಿಪುರರ ಛೇಧಿಸಿ ಕಲಿಮುಖ–
ರಾದ ದುಷ್ಟರ ಸೀಳಿ ಬಾಧೆಯ ಬಿಡಿಸಿದೆ ೩

ಪದ್ಮನಾಭನ ತೋರೊ ಪದ್ಮಸಂಭವ ಜನಕ
ಪದ್ಮನಾಭನೆ ಹೃತ್ಪದ್ಮ ಮಧ್ಯದಿ ವಾಸ
ಪದ್ಮ ಬಾಂಧವ ತೇಜ ಪದ್ಮ ನಯನಕರ
ಪದ್ಮದಿಂದಲಿ ನೀ ಪದ್ಮಾವತಿಯ ಕೂಡ್ದೆ
ಪದ್ಮವೈರಿಯ ಕೋಟಿ ಮುದ್ದು ಮುಖದ ತೇಜ
ಪದ್ಮ ಉದರ ಷಟ್ಪದ್ಮದಿ ವಾಸ
ಪದ್ಮ ಸರೋವರ ತೀರವಾಸ ಹೃ
ತ್ಪದ್ಮ ಮಧ್ಯದಿ ಭೂಪದ್ಮಿನಿ ಸಹಿತ ೪

ಅಪಾರ ಮಹಿಮನೆ ಗೋಪಾಲಕೃಷ್ಣವಿಠ್ಠಲ
ಭೂಪರೈವರ ಕಾಯ್ದೆ ದ್ರೌಪದಿ ಮಾನದೊಡೆಯ
ಪಾಪಿ ಜರಾಸಂಧ ಭೂಪರ ಬಂಧಿಸೆ
ನೀ ಪ್ರೀತಿಯಿಂದ ಪೋಗಿ ತಾಪವ ಬಿಡಿಸಿದೆ
ವ್ಯಾಪಕನೊ ಜಗಸ್ಥಾಪಕನೊ ಬಹು
ರೂಪಕನೊ ದುಷ್ಟತಾಪಕನೊ ಹರಿ
ಪಾಪ ಪರಿಸಿ ಕರ್ಮಲೇಪನ ಮಾಡದೆ
ನೀ ಪರಿ ಪರಿಯಿಂದ ಕಾಪಾಡೊ ಭಕ್ತರ ೫

## ೫೯

ಬಂದೆನ್ನ ಮನಮಂದಿರದಲಿ ನಿಲ್ಲೊ । ಹೇ ಶ್ರೀನಿವಾಸ
ಬಂದೆನ್ನ ಮನಮಂದಿರದಲಿ ನಿಲ್ಲೊ ಪ.

ಇಂದಿರೇಶ ವೈಕುಂಠದಿಂದ ನೀ
ಬಂದು ಈಗ ಎನ್ನ ಹೃದಯ ಕಮಲದಿ ಅ.ಪ.

ಜಗದಂತರಾತ್ಮ ನಿರ್ಮಲಾತ್ಮ । ನಿರ್ಗತ ದುರಿತಾತ್ಮ
ನಿಗಮಾದಿಗಳೊಂದ್ಯ ನೀ ನಿತ್ಯಾತ್ಮ । ಜೀವಂತರಾತ್ಮ
ಸುಗುಣವಂತ ನಿನ್ನ ಬಗೆ ಬಗೆ ಮಹಿಮೆಯ
ಪೊಗಳಬಲ್ಲೆನೆ ನಾ ಖಗವಾಹನನೆ ೧

ಅರಿಯೇನೋ ಅನ್ಯರ ಹರಿ ಸರ್ವೇಶ । ಹೃತ್ಕಮಲದಿ ವಾಸ
ಪರಿಹಾರಗೈಸೊ ಈ ಭವಕ್ಲೇಶ । ನಂಬಿದೆ ಸರ್ವೇಶ
ಅರಘಳಿಗೆ ನಿನ್ನಗಲಿರಲಾರೆನೊ
ಸಿರಿಸಹಿತದಿ ನಿನ್ನರಮನೆಯಿಂದಲಿ ೨

ಅರುಹಿದರೆನಗೆ ಶ್ರೀ ಗುರುಗಳು ಇಂದು । ನೀ ರಕ್ಷಕನೆಂದು
ಕರಕರೆಗೊಳಿಪುದು ಧರ್ಮವೆ ನಿಂದು । ನೀ ಕಾಯಲಿಬೇಕಿಂದು
ಸರಿಯಲ್ಲವು ಈ ತೆರದಲಿ ತೊರೆವುದು
ಶರಣ ರಕ್ಷಕನೆಂಬೊ ಬಿರುದು ಪೊತ್ತಿಲ್ಲವೆ ೩

ಎಂತೆಂತು ಸಹಿಸಲಿ ಈ ಭವಕ್ಲೇಶ । ಜೀವಾಂತರವಾಸ
ಕಂತುಪಿತ ಎಣಿಪರೆ ಎನ್ನಯ ದೋಷ । ಸರಿಯಲ್ಲ ಸುರೇಶ
ಇಂತು ನಿನಗೆ ಒಪ್ಪಿಸಿದರೊ ಗುರುಗಳು
ಚಿಂತಿತಾರ್ಥ ನಿನಗೆನ್ನ ತರ ತಿಳಿಯದೆ ೪

ಬೆಟ್ಟದ ಒಡೆಯ ಬೇಗನೆ ಬಾರೊ । ಹೃತ್ಕಮಲದಿ ತೋರೊ
ಶ್ರೇಷ್ಠ ಶ್ರೀ ಗುರುಗಳ ಕರುಣವ ಬೀರೊ । ಸಲಹುವರಿನ್ಯಾರೊ
ಮುಟ್ಟಿ ಭಜಿಪೆ ನಿನ್ನ ಶ್ರೇಷ್ಠ ಪದಂಗಳ
ಸೃಷ್ಟೀಶ ಗೋಪಾಲಕೃಷ್ಣವಿಠ್ಠಲನೆ ೫

## ೬೦

ಭಕ್ತವತ್ಸಲ ಭಾರಕರ್ತಾ । ಕರುಣವಂತ
ನಿತ್ಯ ನಿರ್ಮಲ ಸರ್ವ ಶಕ್ತ । ಶಾಂತಾತ್ಮಕ ಪ.

ಸುತ್ತ ವಿರಜೆ ಉನ್ಮತ್ತ ಮುಕ್ತರ
ನೃತ್ಯ ಗೀತೆ ವೈಚಿತ್ರದೋಲಗವು
ಇತ್ತಂಡದಿ ಮೈಹತ್ತಿ ಕುಳಿತ ಸತಿಯ
ರೆತ್ತಲಿತ್ತ ಬಂದ ಚಿತ್ರ ಮಹಿಮ ಹೇ ಅ.ಪ.

ಮಂಗಳ ಮಹಿಮ ವಿಹಂಗ ಗಮನ ತು–
ರಂಗರೂಪನೆ ಅಂತರಂಗದಿ ನೆಲಸಿ ಸು–
ಸಂಗದಿಂದಲಿ ಲಿಂಗ ಭಂಗಗೈಸುತ ಜ–
ನ್ಮಂಗಳ ಕಡೆ ಮಾಡು ರಂಗ ಕರುಣಾಪಾಂಗ
ಇಂಗಡಲಳಿಯನೆ ತುಂಗ ಮಹಿಮ ನರ–
ಸಿಂಗ ನಿನ್ನಯ ಚರಣಂಗಳ ತೋರಿಸೋ
ಭಂಗಪಡುವೆ ಭವಹಿಂಗಿಸಿ ಪೊರೆ ಕಾ–
ಳಿಂಗ ಮಥನ ಯದುಪುಂಗವ ಕರುಣಿ ೧

ಗತಿ ನೀನೆ ಎಂದು ಶ್ರೀಪತಿ ನಿನ್ನ ಮೊರೆಹೊಕ್ಕೆ
ಹಿತದಿಂದ ಕಾಯೊ ದ್ರೌಪದಿಯ ಕಾಯ್ದಂಥ ದೈವ
ಚ್ಯುತದೂರ ಮುಕ್ತರ ಸ್ತುತಿಪ್ರಿಯ ಶ್ರೀ ವಾಯು–
ಸುತನಿಂದರ್ಚಿತ ಪಾದ ಪ್ರತಿ ಕಾಣೆ ನಿನಗೆಣೆ
ವ್ರತನೇಮಗಳೊಂದಿತರ ಕರ್ಮ ಸು–
ಪಥ ಕಾಣೆನು ಗತಿಯಿಲ್ಲದೆ ಶ್ರೀ–

ಪತಿ ಕೃಪೆ ಮಾಡುತ ತತುವ ಮಾನಿಗಳ
ಕೃತಿ ತಿಳಿಸುತ ನಿನ ತುತಿಸುವ ಮತಿಕೊಡು ೨

ಗೋಪಿಕಂದನೆ ಬಾಲರೂಪಧಾರಕ ಮಧ್ವ–
ರಪಾರ ಸ್ತುತಿ ಕೇಳಿ ಗೋಪೀಚಂದನದಿ ಬಂದು
ಈ ಪರಿ ನಿಂತ ದೇವಪತಿ ಜನಗಳ ಪೊರೆದು
ಕಾಪಾಡುವ ಕರ್ತ ಗೋಪಾಲಕೃಷ್ಣವಿಠ್ಠಲ
ಶ್ರೀಪದ್ಮಜಮುಖ ಸುರಾಪ ಧರೇಂದ್ರರು
ತಾಪಸಿಗಳೂ ನಿನ್ನ ವ್ಯಾಪಾರ ತಿಳಿಯದೆ
ಗೋಪ್ಯಾದಿ ನುತಿಸಿ ಸ್ವರೂಪ ಯೋಗ್ಯತೆಯಂತೆ
ವ್ಯಾಪಕ ನಿನ್ನಯ ರೂಪವ ಕಾಂಬರು ೩

## ೬೧

## ಉಗಾಭೋಗ

ಭಕ್ತಿದಾಯಕ ಕೇಳೊ ನಿನ್ನನು ಒಲಿಸಲು
ಶಕ್ತಿ ಎನಗೆ ಇಲ್ಲ ಸರ್ವೇಶ್ವರ
ಭಕ್ತಿಪಾಶದಿ ನಿನ್ನನುಕ್ತಿಯಿಂದಲಿ ಬಿಗಿವೆ
ಮುಕ್ತಿಗೊಡೆಯ ಹೃದಯ ಮಧ್ಯದಿ ಬಂಧಿಸುವೆ
ಶಕ್ತಿ ನಿನಗಿಲ್ಲ ಬಿಡಿಸಿಕೊಳ್ಳಲು ಇನ್ನು
ಯುಕ್ತಾಯುಕ್ತ ತಿಳಿಸಿ ಉದ್ಧರಿಸಬೇಕಿನ್ನು
ಶಕ್ತನಿಲ್ಲವೊ ನಿನಗೆ ಸರಿ ಜಗದೊಳು ಮಹ
ಶಕ್ತನಹುದೊ ಸಿರಿ ಗೋಪಾಲಕೃಷ್ಣವಿಠ್ಠಲಾ

## ೬೨

## ಉಗಾಭೋಗ

ಮಕ್ಕಳ ಮಾಣಿಕ್ಯ ಮಧುರೆ ಗೋಕುಲ ಬಿಟ್ಟು
ಚಿಕ್ಕಯತಿಗಳಿಂದ ಪೂಜೆಯ ಕೈಕೊಂಡು

ರಕ್ಕಸಾಂತಕ ತನ್ನ ಭಕ್ತರ ಕಾಯುತ್ತ
ಲಕ್ಕುಮಿ ಅಜ ಶಿವ ಇಂದ್ರಾದಿ ವರದನು
ಚೊಕ್ಕ ಚಿನ್ನದ ಬೊಂಬೆಯಂತೆ ನಿಂತಿರುವನು
ಮುಕ್ತಾಮುಕ್ತರ ಬಿಂಬ ಗೋಪಾಲಕೃಷ್ಣವಿಠಲ

೬೩

ಮಧ್ವಾಂತರ್ಯಾಮಿ ಶ್ರೀ ಗುರು ಬಿಂಬ ಕಾಯೊ ಪ.

ಹೃದ್ವನಜದಲಿ ನೆಲಸಿ ಅಜ್ಞಾನ ಹರಿಸಿ ಅ.

ಕೋಟಿ ಜನ್ಮದ ಪುಣ್ಯ ಕೂಡಿಸಲು ದೊರಕುವುದೆ
ಸಾಟಿ ರಹಿತನೆ ನಿನ್ನ ಮುಖ ದರ್ಶನಾ
ಹಾಟಕೋದರ ಮುಖರು ಅರಿಯದಂತವನನ್ನು
ಕೋಟಲೆಯಭವ ಜನರು ಅರಿವದೆಂತಯ್ಯಾ ೧

ತ್ರಿವಿಧ ಜೀವರ ತೆಗೆದು ಜನ್ಮದಲಿ ತೊಡಕಿಸೀ
ಅವನಿಯಲ್ಲಿಟ್ಟು ನೀ ಕರ್ಮ ಬಲೆ ಬೀಸಿ
ಪವನನ್ನೈಯ್ಯನೆ ನಿನ್ನ ಮಾಯ ಮೋಡವ ಕವಿಸಿ
ಭವಣಪಡಿಸಲು ಇನ್ನು ಬಿಡುಗಡೆಯದೆಂತೋ ೨

ನೀನಾಗೆ ವಲಿದು ನಿನ್ನ ಭಕ್ತರನು ಕಾಯುತಿಯೊ
ಮಾನಾಭಿಮಾನದೊಡೆಯನೆ ಆರ್ತಪಾಲ
ಗಾನಲೋಲನೆ ನಿನ್ನ ಧ್ಯಾನ ಮೌನವನಿತ್ತು
ಮಾನಸದಿ ನಿನ್ನ ತೋರೊ ದೀನ ರಕ್ಷಕನೇ ೩

ಅಂಗುಟದಿ ಗಂಗೆಯನು ಪೆತ್ತ ಪಾವನಪಾದ
ಶೃಂಗಾರ ವಸನ ವಡ್ಯಾಣ್ಯನಡುವೂ
ಅಂಗನೆಯು ವಕ್ಷದಲಿ ಹಾರಪದಕಗಳುಲಿಯೆ
ಉಂಗುರದ ಬೆರಳು ಕಂಕಣ ಕಡಗ ಪಾಣೀ ೪

ಕರ್ಣಕುಂಡಲ ಕಾಂತಿ ಮುಗುಳುನಗೆ ಕುಡಿನೋಟ
ರನ್ನ ತಿಲಕದ ಫಣಿಯ ಮುಂಗುರುಳ ಸೊಬಗೊ
ಸ್ವರ್ಣಕಾಂತಿಯ ತೇಜ ಕಡಗೋಲ ಕೈ ಸೊಬಗು
ಚನ್ನಗೊಪಾಲಕೃಷ್ಣವಿಠಲ ಉಡುಪೀಶಾ ೫

೬೪

ಮನರಥದಿಂದಲಿ ಘನರಥಕೀಗಲೆ ಬೇಗನೆ ಬಾರೊ ಪ.

ಶ್ರೀ ಶ್ರೀನಿವಾಸ ಶ್ರೀ ವೆಂಕಟೇಶ
ದನುಜದಲ್ಲಣ ಬೇಗ ಬಾರೋ ಕೃಷ್ಣ ಅ.ಪ.

ಮುತ್ತಿನ ತೋರಣ ಸುತ್ತು ಛತ್ತರಿಗೆಯು ಬೇಗನೆ ಬಾರೊ
ಕೆತ್ತಿಹ ವಜ್ರದ ರಥದಲಿ ಸಿರಿ ಸಹ ಬೇಗನೆ ಬಾರೊ
ಉತ್ತಮ ಭಕ್ತರು ಎತ್ತಿ ಕೈ ಕರೆವರು ಬೇಗನೆ ಬಾರೊ
ನಿತ್ಯ ಮಂಗಳ ನಿನ್ನ ಉತ್ತಮ ರೂಪವ
ಚಿತ್ತದಿ ತೋರುತ ಸತ್ಯ ಸಂಕಲ್ಪನೆ ೧

ಗಡಗಡ ನಡೆಯುವ ಘನರಥದಲಿ ನಿಂದು ಬೇಗನೆ ಬಾರೊ
ಎಡಬಲದಲಿ ಶ್ರೀ ಭೂಮಿಯರೊಡಗೂಡಿ ಬೇಗನೆ ಬಾರೊ
ಧಡಧಡ ನಡೆಯುತ ದೈತ್ಯದಲ್ಲಣನೆ ಬೇಗನೆ ಬಾರೊ
ನುಡಿಸುವ ವಾದ್ಯಗಳ್ ಪಿಡಿದಿಹ ಚಾಮರ
ಕಡೆಗಣ್ಣೊಳು ಭಕ್ತರನೀಕ್ಷಿಸುತಲಿ ೨

ನಾರದ ತುಂಬುರ ನಾಟ್ಯವನಾಡ್ವರು ಬೇಗನೆ ಬಾರೊ
ಬಾರಿ ಬಾರಿಗೆ ಭಕ್ತರು ನುತಿಗೈವರು ಬೇಗನೆ ಬಾರೊ
ವಾರಿಜಾಸನ ವಂದ್ಯ ಶ್ರೀನಿವಾಸ ದೊರಿ ಬೇಗನೆ ಬಾರೊ
ತೋರುತ ರೂಪವ ಬೀರುತ ಕರುಣವ
ಮಾರಜನಕ ಅಪಾರ ಮಹಿಮನೆ ೩

ವಂದಿಸಿ ಕರೆವರೊ ನಿಂದು ಭಕ್ತರೆಲ್ಲ ಬೇಗನೆ ಬಾರೊ
ಇಂದಿರೆಯರಸನೆ ಮಂದರೋದ್ಧರ ಕೃಷ್ಣ ಬೇಗನೆ ಬಾರೊ
ಇಂದು ಸ್ಥಿರವಾರ ಸ್ಥಿರವಾಗಿ ಸಲಹಲು ಬೇಗನೆ ಬಾರೊ
ಹಿಂದೆ ಮುಂದೆ ಭಕ್ತ ಸಂದಣಿಯೊಳು ಗುರು
ವೃಂದ ಬಿಂಬ ಮನ್ಮನ ಬಿಂಬನೆ ರಥಕೆ ೪

ಅಪಾರ ಕರುಣದಿ ಭಕ್ತರ ಪೊರೆಯಲು ಬೇಗನೆ ಬಾರೊ
ಶ್ರೀಪತಿ ಶೇಷಾಚಲನಿಲಯನೆ ಹರಿ ಬೇಗನೆ ಬಾರೊ
ಗೋಪಾಲಕೃಷ್ಣವಿಠ್ಠಲನೆ ತ್ವರಿತದಿ ಬೇಗನೆ ಬಾರೊ
ಭೂಪರ್‍ವೈರ ಕಾಯ್ದ ಗೋಪಕುವರ ಕೃಷ್ಣ
ಈ ಪರಿಯಿಂದಲಿ ಭಕ್ತರ ಪೊರೆಯಲು ೫

## ೬೫

ಮುದ್ದು ಕೃಷ್ಣ ಮುನಿ ಶರಣ
ಉದ್ಧರಿಸು ನೀ ಉಡುಪಿ ರನ್ನ ಪ.

ಮುದ್ದೆ ಬೆಣ್ಣೆ ಕೊಡುವೆ ಚೆನ್ನ
ಮಧ್ವಮುನಿಯ ಮನ ಪ್ರಸನ್ನ ಅ.ಪ.

ಬಾಲೆಯರನು ಕೂಡಿ ವನದಿ
ಲೀಲೆಯಿಂದ ಕೊಳಲನೂದಿ
ಕಾಳಿಮಡುವ ಕಲಕಿ ನಿಂದ
ಲೀಲೆ ಕೇಳೆ ಮನಕಾನಂದ ೧

ನಿನ್ನ ಮಹಿಮೆ ಅಧಿಕವಾಗಿ
ಎನ್ನ ಮನಕೆ ಹರುಷವಾಗಿ
ಪನ್ನಗೇಂದ್ರಶಯನ ಸ್ವಾಮಿ
ನಿನ್ನ ರೂಪ ತೋರೊ ಪ್ರೇಮಿ ೨

ಪೊರೆ ಗೋಪಾಲಕೃಷ್ಣವಿಠ್ಠಲ
ನಿರುತ ನಿನ್ನ ಚರಣ ಕಮಲ
ಮೊರೆಯ ಹೊಕ್ಕೆ ಮರೆಯದೆನ್ನ
ಕರುಣೆಯಿಂದ ಕಾಯೊ ಘನ್ನ ೩

## ೬೬

ಮುದ್ದು ಕೃಷ್ಣನ್ನ ನೋಡ ಬನ್ನಿರೆಲ್ಲ ನಮ್ಮ
ಮಧ್ವರಾಯರಿಗೊಲಿದ ಸಿರಿ ಭೂಮಿ ನಲ್ಲ ಪ.

ಪಂಚ ಪಂಚ ಉಷಃ ಕಾಲದಲಿ ಎದ್ದು ಯತಿವರರು
ಪಂಚಬಾಣನ ಪಿತಗೆ ನಿರ್ಮಾಲ್ಯ ತೆಗೆದು
ಪಂಚ ಗಂಗೋದಕದಿ ಸ್ನಾನಗೈಸುತ ಹರಿಗೆ
ಪಂಚವಿಧ ಪಕ್ವಾನ್ನ ಉಣಿಸಿ ದಣಿಸಿಹರು ೧

ಕಾಲ್ಕಡಗ ಗೆಜ್ಜೆ ಪೈಜಣ ಘಲ್ಲು ಘಲ್ಲೆನುತ
ಮೇಲೆ ಉಡುದಾರ ಉಡುಗೆಜ್ಜೆ ನಡುವಿನಲಿ
ಬಾಲಕೃಷ್ಣಗೆ ಅಸಲಿ ಹುಲಿ ಉಗುರು ಹೊನ್ನು ಸರ
ತೋಳ ಬಾಪುರಿಗಡಗ ಉಂಗುರಗಳ್ವೊಳೆಯೆ ೨

ಮುದ್ದು ಮುಖಕೊಂದು ಮೂಗುತಿ ಕರ್ಣಕುಂಡಲವು
ಕದ್ದು ಬೆಣ್ಣೆಯನು ಕಡಗೋಲ ಪಿಡಿದಿಹನು
ತಿದ್ದಿದ ತಿಲುಕ ಮುಂಗುರುಳೂ ಮುತ್ತಿನ ಸಾಲು
ಶುದ್ಧ ಚಿನ್ನದ ರತ್ನ ಮಕುಟ ಶಿರದಲ್ಲಿ ೩

ರಮ್ಯವಾಗಿಪ್ಪ ವೈಕುಂಠಪುರಿಯನೆ ಬಿಟ್ಟು
ಜನ್ಮಸ್ಥಳವಾದ ಗೋಕುಲವ ತ್ಯಜಿಸಿ
ತಮ್ಮವರಿಗಾಗಿ ಕಟ್ಟಿದ ದ್ವಾರಕಿಯ ಕಳೆದು
ಬ್ರಹ್ಮಾದಿ ವಂದ್ಯ ತಾನಿಲ್ಲಿ ನೆಲೆಸಿಹನು ೪

ಅಪಾರ ಮಹಿಮನು ಆನಂದ ತೀರ್ಥರಿಗೊಲಿದು
ಪಾಪಿ ಜನರುಗಳ ಉದ್ಧರಿಸಬೇಕೆಂದು
ಶ್ರೀಪತಿಯು ತಾ ಪುಟ್ಟ ರೂಪಧಾರಕನಾಗಿ
ಗೋಪಾಲಕೃಷ್ಣವಿಠ್ಠಲನಿಲ್ಲಿ ನಿಂತ ೪

## ೬೭

ಮೂರು ನಾಮಗಳ ಧರಿಸಿರುವ ಕಾರಣವೇನು
ಸಾರಿ ಪೇಳಲೊ ಈಗಲೆ ಪ.

ಶ್ರೀ ರಮಾಪತಿ ಶ್ರೀನಿವಾಸ ವೆಂಕಟರಮಣ
ಯಾರು ಇಟ್ಟರೋ ನಿನಗೆ ಈ ಮೂರು ನಾಮ ಅ.ಪ.

ಶುದ್ಧ ವೈಷ್ಣವರೆಲ್ಲ ಶುದ್ಧ ಮೂರುತಿ ಎಂದು
ಬಿದ್ದು ಪಾದಕೆ ನಮಿಸಿ ಕರವ ಮುಗಿದು
ಎದ್ದು ನೋಡಲು ನಿನ್ನ ಫಣಿಯೋಳೀ ತರವಿರಲು
ಮಧ್ವಮತ ದೈವವೆಂದಿನ್ನು ತಿಳಿಯುವರೆ ೧

ಮೂರುರೂಪನು ನಾನು ಮೂರು ಲೋಕಗಳಿಹವು
ಮೂರು ಮಾಳ್ಪೆನು ಜಗವ ಮೂರು ಗುಣದಿ
ಮೂರು ತಾಪವ ಗೆದ್ದು ಮೂರು ಮಾರ್ಗದಿ ಭಜಿಸೆ
ಪಾರು ಮಾಡುವೆನೆಂದು ತೋರುವ ಸೊಬಗೊ ೨

ಸಾಲದೆ ನಿನಗೆ ಸೌಂದರ್ಯಕೆ ಒಂದು ತಿಲುಕ
ಪಾಲಸಾಗರಶಾಯಿ ಚಲುವಮೂರ್ತಿ
ಕಾಲಕಾಲಕೆ ಜನರ ದೃಷ್ಟಿ ತಗುಲುವುದೆಂದು
ಲೀಲೆಯಿಂದಲಿ ಹೀಗೆ ಧರಿಸಿದೆಯ ಪೇಳೊ ೩

ಮೂರೆರಡು ಎರಡೊಂದು ಇಂದ್ರಿಯವನರ್ಪಿಸಲು
ತೋರುವನು ನಿಜರೂಪ ಭಕ್ತಗೆಂದು

ಸಾರುತ್ತಿದ್ದರು ವಾಯು ಅರಿಯದೆ ಭಜಿಸಿದರೆ
ಮೂರುನಾಮವೆ ಗತಿ ಎನ್ನುವ ಬಗೆಯೊ ೪

ಶ್ರೀಲೋಲ ಗೋಪಾಲಕೃಷ್ಣವಿಠ್ಠಲ ನಿನ್ನ
ಈ ಲೀಲೆ ಬಗೆಯನು ಅರಿವವರ್‍ಯಾರೊ
ವ್ಯಾಳಶಯನ ವೆಂಕಟೇಶ ಎನ್ನ ಮನದಿ
ಕಾಲಕಾಲಕೆ ನಿನ್ನ ರೂಪವನೆ ತೋರೋ ೫

## ೬೮

ಮಂಗಳಂ ಜಯ ಮಂಗಳಂ
ಮಂಗಳಂ ಬೆಟ್ಟದೊಡೆಯ ಹರಿಗೆ ಜಯ ಪ.

ಮಂಗಳಂ ಕೊಳಲನೂದುವ ದೊರೆಗೆ
ಮಂಗಳಂ ಶ್ರೀ ಶ್ರೀನಿವಾಸ ವೆಂಕಟನಿಗೆ
ಮಂಗಳಂ ಶೇಷಾಚಲ ಹರಿಗೆ ಅ.ಪ.

ವೈಕುಂಠದಲಿ ಬಂದವಗೆ
ಆ ಕೋಲಗಿರಿಯಲಿ ನಿಂದವಗೆ
ತಾ ಕಾಸುಕಾಸಿಗೆ ಬಡ್ಡಿಯ ಕೊಳುತಲಿ
ಬೇಕಾದ ವರಗಳ ಕೊಡುವನಿಗೆ ೧

ಬುತ್ತಿ ಪೊಂಗಲುಗಳ ಮಾರುವಗೆ
ಮತ್ತೆ ದರ್ಶನ ಕೊಡದೆ ಒದೆಸುವಗೆ
ನಿತ್ಯ ಸ್ವಾಮಿಪುಷ್ಕರಣಿ ತೀರದಿ ನಿಂತು
ಭೃತ್ಯವರ್ಗಗಳನು ಪೊರೆವವಗೆ ೨

ಶಂಖ ಚಕ್ರ ವರ ಹಸ್ತನಿಗೆ
ಶಂಕೆಯಿಲ್ಲದೆ ಅಭಯ ಕೊಡುವನಿಗೆ
ಶಂಕರಮಿತ್ರಗೆ ಪರಮಪವಿತ್ರಗೆ
ಸಂಕೋಲೆ ಹನುಮಗ್ಹಾಕಿಸಿದವಗೆ ೩

ವೃಂದಾವನದಲಿ ಮೆರೆದವಗೆ
ಮಂದಗಮನೆಯರ ಮೋಹಿಪಗೆ
ಚಂದದ ಪೊಂಗೊಳಲೂದಿ ಗೋಪಿಯರ ಕಾಯ್ದ
ಇಂದುವದನ ಗೋಪಿ ಕಂದನಿಗೆ ೪

ನಾಗರಾಜನ ಗಿರಿ ನಿಲಯನಿಗೆ
ಯೋಗಿಗಳಿಗೆ ನಿಲುಕದ ಹರಿಗೆ
ಸಾಗರನಿಲಯ ಗೋಪಾಲಕೃಷ್ಣವಿಠ್ಠಲ
ಭೋಗಿಶಯನ ಲಕ್ಷ್ಮೀಪತಿಗೆ ೫

## ೭೯

ಮಂಗಳಂ ಶ್ರೀ ಶ್ರೀನಿವಾಸಗೆ ಶೃಂಗಾರರೂಪಗೆ
ಮಂಗಳಂ ಶ್ರೀ ಶ್ರೀನಿವಾಸಗೆ ಪ.

ಪದ್ಮನಾಭ ಪದ್ಮ ಮುಖಿಗೆ
ಪದ್ಮಪಾದಗೆ
ಪದ್ಮವತಿಯ ವರಿಸಿದವಗೆ
ಪದ್ಮೋದ್ಭವನ ಸೇವೆ ಕೊಂಬಗೆ ೧

ಆರ್ತ ಜನರ ಪೊರೆಯುವನಿಗೆ
ಪಾರ್ಥಸಾರಥಿಗೆ
ಕೀರ್ತಿಸುವರ ಕಾಯ್ವೆನೆಂದು
ಅರ್ಥಿಯಿಂದ ನಿಂತಿರುವಗೆ ೨

ಯೋಗಿಗಳಿಗೆ ನಿಲುಕದವಗೆ
ಭೋಗಿಶಯನಗೆ
ಭಾಗವತರು ಸ್ತುತಿಸಲು ಅನು–
ರಾಗದಿಂದ ಲಾಲಿಪನಿಗೆ ೩

ಭಕ್ತ ಜನರ ಕಾಯುವನಿಗೆ
ಮುಕ್ತಿದಾಯಕನಿಗೆ
ನಿತ್ಯಮುಕ್ತ ನಿಗಮವೇದ್ಯ
ಸತ್ಯಸಂಕಲ್ಪ ಹರಿಗೆ ೪

ಭೂಪರ್‍ಯೆವರ ಪೊರೆದವಗೆ
ತಾಪಹರನಿಗೆ
ಗೋಪಾಲಕೃಷ್ಣವಿಠ್ಠಲಗೆ
ಶ್ರೀಪತಿ ಶ್ರೀ ಶ್ರೀನಿವಾಸಗೆ ೫

## ೭೦

ಮಂಗಳ ಪಂಡರಿವಾಸನಿಗೆ ಜಯ
ಮಂಗಳ ಇಟ್ಟಿಗೆ ನಿಲಯನಿಗೆ ಪ.

ಗೋಕುಲವಾಸಗೆ ಆಕಳ ಪಾಲಗೆ
ಲೋಕ ಲೋಕಗಳನ್ನು ಪೊರೆವನಿಗೆ
ಪಾಕಶಾಸನ ವಂದ್ಯ ರುಕ್ಮಿಣಿ ರಮಣಗೆ
ಲೋಕಮೋಹನ ಪಾಂಡುರಂಗನಿಗೆ ೧

ಪಾಂಡವ ಪಾಲಕ ಪುಂಡಲೀಕನಿಗೊಲಿದು
ಪಂಡರಿಕ್ಷೇತ್ರದಿ ನೆಲಸಿದಗೆ
ತಂಡ ತಂಡದ ಭಕ್ತ ಮಂಡೆ ಸೋಕಿಸಿಕೊಂಬ
ಪುಂಡರೀಕ ಪಾದಯುಗಳನಿಗೆ ೨

ಕಟಿಯಲ್ಲಿ ಕರವಿಟ್ಟು ಕೈಲಿ ಶಂಖವ ಪಿಡಿದು
ನಟನೆಗೈಯ್ಯುವ ವೇಷಧಾರಕಗೆ
ತಟಿನಿ ಚಂದ್ರಭಾಗೆ ತೀರದಿ ಮೆರೆಯುವ
ವಟುರೂಪಿ ಗೋಪಾಲಕೃಷ್ಣವಿಠ್ಠಲಗೆ ೩

## ೭೧

ಮಂಗಳಂ ಶ್ರೀ ರಾಮಚಂದ್ರನಿಗೆ
ಕಂಗೊಳಿಪ ದೇವಗೆ ಪ.

ಬಿಟ್ಟು ಪಟ್ಟ ತೊಟ್ಟು ವ್ರತವ ಮೆಟ್ಟಿ ವನವನೂ
ದುಷ್ಟರನ್ನು ಕುಟ್ಟಿ ಬಂದು ಪಟ್ಟವಾಳ್ದ ಶ್ರೇಷ್ಠ ಮೂರ್ತಿಗೆ ೧

ಸೀತೆ ಅನುಜರೊಡನೆ ವೆರಸಿ ವಾತತನಯನ
ಪ್ರೀತಿ ಸೇವೆ ಕೊಳುತ ರಾಜ್ಯ ನೀತಿಯಿಂದ ನಡೆಸಿದವಗೆ ೨

ಶ್ರೇಷ್ಠ ಭಕ್ತರೊಡನೆ ವೆರಸಿ ದಿಟ್ಟತನದಲಿ
ಪಟ್ಟವಾಳಿ ಪ್ರಜರ ಪೊರೆದು ಇಷ್ಟ ಸಲಿಸಿ ಮುದವಿತ್ತವಗೆ ೩

ರಾಮನಾಮ ಪಠಿಪ ಜನರ ಕಾಮಿತಾರ್ಥವ
ಪ್ರೇಮದಿಂದ ಕೊಟ್ಟು ಪೊರೆವ ಸ್ವಾಮಿ ಸುಗುಣಧಾಮ ಹರಿಗೆ ೪

ಭೂಪರೊಳಗೆ ಶ್ರೇಷ್ಠ ರಾಮರೂಪ ಮಂಗಳಂ
ಗೋಪಾಲಕೃಷ್ಣವಿಠ್ಠಲಗೆ ದೀಪದಾರತೀಯ ಬೆಳಗಿ ೫

## ೭೨

ಮಂಗಳ ಮುದ್ದು ಕೃಷ್ಣನಿಗೆ ಜಯ
ಮಂಗಳ ಮದನ ಜನಕ ಬಾಲ ಹರಿಗೆ ಪ.

ಕಡಗೋಲ ನೇಣು ಪಿಡಿದಗೆ ಪಾಲ್
ಗಡಿಗೆ ಒಡೆದು ಇಲ್ಲಿ ಓಡಿ ಬಂದವಗೆ
ಕಡಲ ತಡಿಯಲಿ ನಿಂತವಗೆ ಅಷ್ಟ
ಮಡದಿಯರರಸನೆಂತೆಂಬ ಪುರುಷಗೆ ೧

ಯತಿವರರಿಂದರ್ಚಿತಗೆ ಬಹು
ಜತನದಿ ಭಕ್ತವರ್ಗಗಳ ಕಾಯ್ವನಿಗೆ
ಯತಿ ಮಧ್ವರಾಯಗೊಲಿದಗೆ ನಿತ್ಯ
ಚ್ಯುತ ದೂರವಾದ ಸರ್ವೇಶನೆಂಬುವಗೆ ೨

ಗರುಡನ್ನ ಎಡದಿ ನಿಲಿಸಿದಗೆ ಬಲದಿ
ಮರುತನ್ನ ನಿಲಿಸಿ ಕೊಂಡ್ಹರುಷಪಡುವನಿಗೆ
ಕಿರಿದ್ವಾರದಿ ಮಧ್ವ ಉಳ್ಳವಗೆ ನಮ್ಮ
ಸಿರಿಪತಿ ಗೋಪಾಲಕೃಷ್ಣವಿಠ್ಠಲಗೆ ೩

## ೭೩

ಯದುನಾಥ ಯದುನಾಥ
ಮುದದಿಂದಲಿ ಪೊರೆ ಪದುಮಿಣಿ ವಲ್ಲಭ ಪ.

ಪೊಡವಿಯೊಳಗೆ ಪಡುಗಡಲೆಡೆವಾಸ
ತಡವೇತಕೆ ಪಾಲ್ಕಡಲಶಯನ ಪೊರೆ ೧

ಅಣುಮಹ ಕಾಲಾತ್ಮಕ ಸರ್ವೇಶ್ವರ
ಗುಣಗಣಪೂರ್ಣನೆ ಸರ್ವವ್ಯಾಪಕ ೨

ಚಿಂತನೆದೂರ ಅಚಿಂತ್ಯ ಮಹಿಮ ಗುಣ
ವಂತ ಅನಂತ ಮಹಂತ ಕಾಲಾಂತಕ ೩

ಸ್ಥಾವರ ಜಂಗಮ ಜೀವರ ಬಿಂಬ ಶ್ರೀ
ಪಾವಮಾನಿ ಮತ ಸುಜನೋದ್ಧಾರಕ ೪

ಬಾಲರೂಪ ಕಡಗೋಲ ಪಿಡಿದ ಗೋ
ಪಾಲಕೃಷ್ಣವಿಠ್ಠಲ ಉಡುಪೀಶ ೫

## ೭೪

ಯಾಕಿಲ್ಲಿ ಪವಡಿಸಿದ್ಯೊ
ಶ್ರೀಕರಾರ್ಚಿತ ರಂಗನಾಥ ಜಗದೇಕನಾಥ ಪ.

ಪಾಕಶಾಸನವಂದ್ಯ ಪರಮ ಕಾರುಣ್ಯನಿಧಿ
ಜೋಕೆಯಿಂ ಭಕ್ತರನು ರಕ್ಷಿಸಲು ಬಂದೆಯೊ ಅ.ಪ.

ಅಂದು ಪ್ರಳಯೋದಕದಿ ಸಿರಿ ಆಲದೆಲೆಯ ಮೇ-
ಲೊಂದು ಬೆರಳನೆ ಚೀಪುತ
ಮುಂದೆ ಶೇಷಶಯನನಾಗಿ ಬ್ರಹ್ಮನ ಪಡೆದು
ಮಂದಹಾಸದಿ ನಲಿಯುತ
ಇಂದಿರೆ ಸಹಿತಲಿರೆ ಭಕ್ತರೆಲ್ಲರು ಆಗ
ನೋಡಲಿಲ್ಲೆಂದೆನುತ
ಇಂದು ಈ ನಾಗರಾಜನ ಮಂಚವನೆ ಏರಿ
ಸಿಂಧುಶಯನನೆ ಮಲಗಿದ್ಯಾ ಸ್ವಾಮಿ ೧

ಅಜಗೆ ವೇದವನಿತ್ತು ಅಸುರನ್ನ ಕೊಂದು ನೀ
ಭುಜಗಶಯನನೆ ಮಲಗಿದ್ಯಾ
ಋಜುಗಣವಂದಿತನೆ ಬೆನ್ನಲಿ ಗಿರಿಪೊತ್ತ
ಆಯಾಸದಿಂ ಮಲಗಿದ್ಯಾ
ದ್ವಿಜಧ್ವಜನೆ ಭೂಮಿಯನು ಮೇಲೆತ್ತಿ ತಂದು
ಸಾಕಾಗಿಲ್ಲಿ ಶಯನಿಸಿದೆಯಾ
ಭಜಿಸಿದ ಬಾಲಕನ ಪಿತನೊಡನೆ ಕಾದಾಡಿ
ಬಳಲಿ ನೀ ಪವಡಿಸಿದೆಯಾ ಸ್ವಾಮಿ ೨

ಇಂದ್ರ ಪದವಿಗೆ ಬಂದ ಬಲೀಂದ್ರನ ನೆಲಕೊತ್ತಿ
ಬಂದಿಲ್ಲಿ ಮಲಗಿಪ್ಪೆಯಾ
ಕೊಂದು ಜನನಿಯ ಚಿಂತೆಯಿಂದ ಮನದಿನೊಂದು
ಬಂದಿಲ್ಲಿ ಮಲಗಿಪ್ಪೆಯಾ

ತಂದೆ ತಾಯಿ ಆಜ್ಞೆಯಿಂದ ಅಡವಿಯ ಅಲೆದು
ಬಂದಿಲ್ಲಿ ಮಲಗಿಪ್ಪೆಯಾ
ಮಂದರೋದ್ಧರ ಶ್ರೀಶ ಮಾವನ್ನ ಕೊಂದು ನೀ
ಬಂದಿಲ್ಲಿ ಪವಡಿಸಿದೆಯಾ ಸ್ವಾಮಿ ೩

ನಾರಿಯರ ವ್ರತ ಕೆಡಿಸಿ ನಾಚಿಕೆಯಿಂ ಬಂದು
ಏರಿ ಮಂಚವ ಮಲಗಿದ್ಯಾ
ಏರಿ ಕುದುರೆಯನು ದುಷ್ಟರ ಶಿರವ ತರಿಯುತ್ತ
ಸೇರಿ ಶೇಷನ ಮಲಗಿದ್ಯಾ
ಬಾರಿ ಬಾರಿಗೆ ಇಂಥ ಕಾರ್ಯಗಳ ಮಾಡಿಸಿ
ಬಳಲಿಲ್ಲಿ ಮಲಗಿಪ್ಪೆಯಾ
ನಾರದಾದ್ಯರ ಗಾನ ಕೇಳುತಾನಂದದಿಂ
ನಿದ್ರೆಗೈಯುತ ಮಲಗಿದ್ಯಾ ಸ್ವಾಮಿ ೪

ಭಕ್ತರಾಡುವ ಸಲಿಗೆ ಬಿನ್ನಪಕೆ ಬ್ಯಾಸತ್ತು
ಯುಕ್ತಿಯಿಂ ಪವಡಿಸಿದೆಯಾ
ಮುಕ್ತರ ಸ್ತುತಿಗೆ ನಿದ್ರೆಯು ಬಾರದೆಂತೆಂದು
ಮುಕ್ತೇಶ ಇಲ್ಲಿ ಮಲಗಿದೆಯಾ
ಎತ್ತ ನೋಡಲು ಮಾರ್ಗಬಿಡಳು ಕಾವೇರಿ ಎಂದು
ಸೋತಿಲ್ಲಿ ಮಲಗಿಪ್ಪೆಯಾ
ಚಿತ್ತಜಾಪಿತ ಸ್ವಾಮಿ ಭಕ್ತರೆಬ್ಬಿಸಲೆಂದು
ಚಿತ್ತದಲಿ ಇಪ್ಪದೇನೋ ದೇವ ೫

ಅಸುರರ ಕಾಟ ವೆಗ್ಗಳವಾಗೆ ಬಂದಿಲ್ಲಿ
ಅಡಗಿ ನೀ ಮಲಗಿಪ್ಪೆಯಾ
ಬಿಸಜನಾಭನೆ ನಿನ್ನ ಬಗೆಯರಿತು ಎಬ್ಬಿಸುವ
ಬಲವಂತರನ್ಯಾರೆಲೊ
ಶಶಿವದನ ಭಕ್ತರನುದ್ಧರಿಸಲೋಸುಗದಿ

ಬಂದಿಲ್ಲಿ ಮಲಗಿಪ್ಪೆಯಾ
ಅಸುರಾರಿ ಎನ್ನ ಭವ ಬಂಧನವ ಪರಿಹರಿಸಿ
ಘಾಸನಗೊಳಿಸದಲೆ ಕಾಯೊ ಜೀಯ ೬

ಏಳು ಫಣೆಯ ಸರ್ಪನ ಮೇಲೆ ಮಲಗಿ
ಏಳು ಕಣ್ದೆರದು ನೋಡೋ
ತಾಳಲಾರೆನೊ ನಿನ್ನ ಸೇವೆಯಗಲಿದ ದುಃಖ
ಏಳು ಮನ್ನಿಸಿ ಪಾಲಿಸೊ
ವ್ಯಾಳಶಯನನೆ ನಿನ್ನ ಸೇವೆಯನು ಎನ್ನಿಂದ
ಲೀಲೆಯಿಂ ಸ್ವೀಕರಿಸೆಲೊ
ಭಾಳ ಬೇಡುವದೇನೊ ಗೋಪಾಲಕೃಷ್ಣವಿಠ್ಠಲ ಈ
ವ್ಯಾಳೆ ಎನ್ನ ಸಲಹೊ ಸ್ವಾಮಿ ೭

## ೭೫

ರಂಗನಾಥನ್ನ ಈ ಕಂಗಳಿಂದಲಿ ಕಂಡು
ಹಿಂಗಿತೆನ್ನಘದ ಹಿಂಡು ಪ.

ಮಂಗಳಾತ್ಮಕ ದೇವ ಮಮ ಸ್ವಾಮಿ ಸಲಹೆಂದು
ಅಂಘ್ರಿಗಳಿಗೆರಗಿ ನುತಿಪೇ ಸ್ತುತಿಪೇ ಅ.

ಮಾಂಡವ್ಯರಿಗೆ ವಲಿದು ಶ್ರೀನಿಕೇತನ ದೇವ
ಗಂಡಕೀಶಿಲೆ ರೂಪದಲ್ಲಿ
ಅಂಡಜವಾಹನನು ಉದ್ಭವಿಸಿ ಸ್ವರ್ಣಾದ್ರಿ
ಎಂಬ ಸುಕ್ಷೇತ್ರದಲ್ಲೀ
ಹಿಂಡುಭಕ್ತರ ಸೇವೆ ಕೈಯಕೊಳುತ ಬದಿಯಲ್ಲಿ
ನಿಂದು ವಿಗ್ರಹ ರೂಪದಲ್ಲೀ
ಕಂಡು ಪುಳಕಾಂಕಿತದಿ ಕರುಣ ಮೂರ್ತಿಯ ನುತಿಸಿ
ಕೊಂಡಾಡಿ ದಣಿದೆ ನಿಂದೂ ಇಂದೂ ೧

ಶಂಖಚಕ್ರಾಂಕಿತದ ಚತುರ್ಭುಜವು ಶ್ರೀವತ್ಸ
ಪಂಕಜಾಕ್ಷಿಯರುಭಯದಿ
ಶಂಕೆಯಿಲ್ಲದ ಭಕ್ತರಿಗೆ ವಲಿವ ಸೌಂದರ್ಯಾ
ಲಂಕಾರ ಉಡಿಗೆ ಮುದದಿ
ಪಂಕಜಾಸನ ಮುಖ್ಯದಿವಿಜಗಣ ಸೇವಿತನು
ಕಿಂಕರರಿಗೊಲಿವ ದಯದೀ
ವಂಖಿ ಬಾಪುರಿ ತೋಳು ಕಡಗ ಕಾಲ್ಗೆಜ್ಜೆಗಳು
ಕಂಕಣ ಕಿರೀಟ ನಿಟ್ಟಾ ದಿಟ್ಟಾ ೨

ಆಗಮವ ಅಜಗಿತ್ತು ಸುರರಿಗಮೃತವಿತ್ತು
ಭೂದೇವಿ ಭಯ ಬಿಡಿಸಿದಾ
ಬೇಗ ಕಂಬದಿ ಬಂದು ಮಗುವ ರಕ್ಷಿಸಿ ಬಲಿಯ
ಯಾಗದಲ್ಲಿ ಭೂ ಬೇಡಿದಾ
ನೀಗಿ ಕ್ಷತ್ರಿಯ ಕುಲ ದಶಶಿರಿನ ಸಂಹರಿಸಿ
ಮಾಗಧನ ಬಲವ ಮುರಿದಾ
ನೀಗಿ ಅಂಬರ ಕಲ್ಕಿ ಗೋಪಾಲಕೃಷ್ಣವಿಠಲಾ
ಮಾಗಡಿ ತಿರುಮಲೇಶಾ ಶ್ರೀಶಾ ೩

## ೭೬

ಲಕ್ಷ್ಮೀಶ ಪಾಲಿಸು ಎನ್ನ ಲಕ್ಷ್ಮೀಶ ಪ.

ಲಕ್ಷ್ಮೀಶ ಪಾಲಿಸೊ ಎನ್ನ । ಜಗ
ದ್ರಕ್ಷಕ ಪರಮಪಾವನ್ನ
ಈಕ್ಷಿಸು ಕರುಣ ಕಟಾಕ್ಷವ ಬೀರುತ
ಕುಕ್ಷಿಯೊಳಗೆ ಜಗ ರಕ್ಷಿಸುತಿಪ್ಪನೆ ಅ.ಪ.

ನಾಗರಾಜನ ಗಿರಿವಾಸ । ಭೋಗ
ಆಗುಮಾಡೆಲೊ ಸರ್ವೇಶ । ನಿನಗೆ
ಬಾಗಿ ನಮಿಸುವೆ ಜಗದೀಶ । ಭವ

ರೋಗ ಹರಿಸು ಕ್ಲೇಶನಾಶ । ಆಹ
ಕೂಗಿದರು ನಿನಗೀಗ ಕೇಳಿಸದೇನೊ
ಭಾಗವತರ ಸಂಗ ಜಾಗುಮಾಡದೆ ನೀಡೊ ೧

ಸೃಷ್ಟಿಗೆ ಎನ್ನನು ಕರೆದೆ । ಭವ
ಕಷ್ಟದಿ ಬಂಧಿಸಿ ತಂದೆ । ಇನ್ನು
ಘಟ್ಯಾಗಿ ಕಾಪಾಡು ಎಂದೆ । ಮೊರೆ
ಮುಟ್ಟದೆ ನಿನಗಿನ್ನು ತಂದೆ । ಆಹ
ಎಷ್ಟು ಬೇಡಿದರು ಸೊಟ್ಟ ತಿರುಗಿ ಮೊಗ
ಅಟ್ಟಕೆ ಏರುವಿ ಬೆಟ್ಟದೊಡೆಯ ಹರಿ ೨

ಕರ್ಮಬಂಧನಗಳ ಕಡಿಯೊ । ಶ್ರೀಶ
ನಿರ್ಮಲರೂಪ ಕೈಪಿಡಿಯೊ । ಬೇಗ
ಧರ್ಮ ಅಧರ್ಮವ ತಿಳಿಯೊ । ಜಗ
ತ್ಕರ್ಮ ಸಾಕ್ಷಿಯೆ ಬೇಗ ಪೊರೆಯೊ । ಆಹ
ಧರ್ಮವಲ್ಲವೊ ಹೀಗೆ ಮರ್ಮವ ನುಡಿವುದು
ಪೆರ್ಮೆಯಿಂದಲಿ ಅಂತರ್ಮರ್ಮವರಿತು ಕಾಯೊ ೩

ಶ್ರೀನಿವಾಸ ಬಾರೊ ಬೇಗ । ನಿನ್ನ
ನಾನು ನಂಬಿದೆನೊ ಶ್ರೀ ಭೋಗ । ನೀಗು
ನೀನೆ ತ್ರಿಕರ್ಮದ ಭೋಗ । ಬೇಗ
ಆಗು ಮಾಡೆಲೊ ಭವ ರೋಗ । ಆಹ
ಪೋಗುತಲಿದೆ ದಿನ ಜಾಗುಮಾಡಲು ಸಲ್ಲ
ನಾಗಶಯನ ಎನ್ನ ಬೇಗನೆ ರಕ್ಷಿಸೊ ೪

ಕಣ್ಣು ಬಿಟ್ಟಿರುವೆಯೊ ನೀನು । ನಿನ್ನ
ಬೆನ್ನ ಭಾರವಿದಿನ್ನೇನು । ಕೋರೆ
ಮಣ್ಣು ಆರ್ಭಟಿಸುವೆ ನೀನು । ವಟು

ಚೆಣ್ಣ ಭಾರ್ಗವ ನೀನು । ಆಹ
ಮನ್ನಿಸಿ ಕಪಿಗಳ ಬೆಣ್ಣೆ ಕಳ್ಳನೆನಿಸಿ
ಬಣ್ಣಗೆಟ್ಟು ಹಯವನ್ನೇರಿದ ಧೀರ ೫

ನಿತ್ಯ ತೃಪ್ತನೆ ಎನ್ನ ಮನದಿ । ಸರ್ವ
ತತ್ವಾಧಿಪತಿಗಳು ಮುದದಿ । ಜಗ
ತ್ಕರ್ತನೆ ಕಾಯ್ವ ದಯದಿ । ಬೇಗ
ಇತ್ತು ಮತಿಯ ಸಲಹೊ ದೃಢದಿ । ಆಹ
ಸತ್ಯರೂಪನೊ ನೀ ಸತ್ಯ ಸಂಕಲ್ಪನೊ
ಹೃತ್ಕಮಲದಿ ನೀ ನಿತ್ಯ ನಿಂತು ಕಾಯೊ ೬

ಗೋಪಾಲಕೃಷ್ಣ ವಿಠ್ಠಲ । ಭವ
ಕೂಪದಿಂದೆತ್ತೊ ಶ್ರೀ ನಲ್ಲ । ಎನ್ನ
ರಾಪು ಮಾಡುವುದುಚಿತಲ್ಲ । ಜಗ
ದ್ವ್ಯಾಪಕ ಭಕ್ತವತ್ಸಲ । ಆಹ
ಈ ಪಯೋಜಜಾಂಡದಿ ರೂಪ ರೂಪಾಂತರದಿ
ವ್ಯಾಪಾರ ನಡೆಸುವ ಗೋಪಕುವರ ಕಾಯೊ ೭

## ೭೭

ವೈಕುಂಠಗಿರಿಯವಾಸನ ಮಹಿಮೆ ಸ್ಮರಿಸು
ಜೋಕೆಯಿಂದಲಿ ಪೊರೆವ ಶ್ರೀಹರಿಯ ಭಜಿಸು ಪ.

ಭಕ್ತ ರಕ್ಷಕ ಹರಿಯು ಭಾಗ್ಯೋದಯದ ಸಿರಿಯು
ಮುಕ್ತಿದಾಯಕ ದೇವ ಮುನಿವರದ ಕಾವ
ಮುಕ್ತಿಯೋಗ್ಯರ ಸಂಗ ಮುದದಿಂದ ನೀಡೆಂದು
ಭಕ್ತಿಯಿಂದಲಿ ಭಜಿಸೆ ಬಂದು ಪೊರೆಯುವನು ೧

ನೀರೊಳಗೆ ಆಡಿದನು ಭಾರ ಬೆನ್ನೊಳು ವಹಿಸಿ
ಕೋರೆ ಹಲ್ಲನು ತೆರೆದು ಕಂಭದಲಿ ಬಂದ

ಮೂರಡಿಯ ಭೂ ಬೇಡಿ ಕ್ಷತ್ರಿಯ ಕುಲವನೆ ಸವರಿ
ವೀರ ರಾವಣನಸುವ ಹೀರಿದ ಹರಿಯು ೨

ಶ್ರೇಷ್ಠ ಯದುಕುಲದಲ್ಲಿ ಪುಟ್ಟಿ ಬತ್ತಲೆ ಕಲಿಯ
ಕುಟ್ಟಿ ಜಗ ರಕ್ಷಿಸಿದ ಸೃಷ್ಟಿಕರ್ತ
ದಿಟ್ಟ ಮೂರುತಿ ಸತತ ಕಾಯ್ವ ಶ್ರೀ ಗೋಪಾಲ–
ಕೃಷ್ಣವಿಠಲ ಶ್ರೀನಿವಾಸ ಜಗದೊಡೆಯ ೩

## ೭೮

## ಉಗಾಭೋಗ

ವೈಕುಂಠಗಿರಿಯ ವಾಸ
ಲೋಕೈಕನಾಥ ಶ್ರೀಶ
ಏಕಮನಸು ನಿನ್ನ ಪಾದಧ್ಯಾನದಿ ಕೊಡು
ನಾ ಕೇಳಲಿನ್ನೇನು
ನಾಕ ಜನರ ನಾಥ
ಬೇಕೊ ನಿನ್ನ ಭಕ್ತರ
ಏಕಾಂತ ಸಹವಾಸ
ನೀ ಕರುಣಿಸು ಇದನಾ–
ನೇಕ ಜನ್ಮಗಳಲ್ಲಿ
ಶ್ರೀಕಳತ್ರ ಶ್ರೀಶ ಗೋಪಾಲಕೃಷ್ಣವಿಠಲ

## ೭೯

ವಂದಿಪೆ ಹರಿಹರನೇ । ನಿನಗೆ ನಾ
ವೃಂದಾರಕನುತನೇ ಪ.

ಬಂದು ಈ ಕ್ಷೇತ್ರದಿ ನಿಂದು ಸದ್ಭಕ್ತರ
ಛಂದದಿ ಪೊರೆಯುವ ಸುಂದರ ಮೂರ್ತಿ ಅ.ಪ.

ಚತುರ ಹಸ್ತದಿಂದಾ । ಶೋಭಿಸೆ
ಅತಿ ಕೌತುಕದಿಂದಾ
ಪತಿತಪಾವನ ಪಾದ ಕಮಲಜನ
ತತಿಗೆ ತೋರದಂತೆ ಕ್ಷಿತಿಯಲಡಗಿದೇ ೧

ಸೋಮಶೇಖರವಂದ್ಯಾ । ಆರ್ಧದ
ಲಾಮಹ ಹರನಿಂದಾ
ಪ್ರೇಮದಿ ಕೂಡಿಕೊಂಡೀ ಮಹಿ ಜನರಿಗೆ
ನೀಮೋಹಕ ತೋರುವ ಜಗದ್ವಂದ್ಯಾ ೨

ಪಾಪಿಗುಹನವರವಾ। ಕೆಡಿಸಲು
ಈ ಪರಿಯಲಿ ದೇವಾ
ರೂಪಧರಿಸಿ ತಾಮಸರಿಗಂಧಮತಮ
ಕೂಪದಿ ಕೆಡಹುವೆ ಶ್ರೀ ಮೋಹಿತ ೩

ಅರ್ಧಹರನ ರೂಪಾ। ಕೃತಿಯಲಿ
ಶುದ್ಧ ವಿಷ್ಣು ರೂಪಾ
ಮುದ್ದು ಸುರಿವ ಭವ್ಯಾಂಗ ಸ್ವರೂಪ
ಉದ್ಧರಿಸೆನ್ನನು ಶುದ್ಧ ಬುದ್ಧಿಮತಿಯನಿತ್ತು ೪

ಶಂಖಚಕ್ರ ಅಭಯಾ। ತ್ರಿಶೂಲವ
ಬಿಂಕದಿ ಧರಿಸಿದೆಯಾ
ಪಂಕಹೋದ್ಭವೆ ಪಾರ್ವತಿಯ ಉಭ
ಯಾಂಕದಲ್ಲಿ ಪೊಂದಿಹೆ ಶುಭಕಾಯಾ ೫

ಅರ್ಧಶಿರದಿ ಮಕುಟಾ। ಆರ್ಧದಿ
ಶುದ್ಧಗಂಗೆ ತ್ರಿಜಟಾ
ಅರ್ಧಚಂದ್ರ ಶೋಭಿಸುತಿದೆ ಜಗತ್ತಿಗೆ
ಅದ್ಭುತ ಅಚ್ಚರಿ ರೂಪಧಾರಕ ೬

ಪಣೆಯ ತಿಲಕ ಢಾಳಾ । ಕಂಠಾಭ
ರಣಗಳು ಪೂಮಾಲಾ
ಮಿನುಗುವವಲ್ಲಿ ಪೀತಾಂಬರನುಟ್ಟಿಹ
ಗುಣಗಣ ಪೂರ್ಣನೆ ಹನುಮನಯ್ಯ ಹರಿ ೭

ನಿನ್ನವರಿಗೆ ಮಾಯಾ । ಕವಿಸದೆ
ಇನ್ನು ಕಾಯೊ ಜೀಯಾ
ಘನ್ನ ಭಕ್ತಿ ಸುಜ್ಞಾನ ವೈರಾಗ್ಯವ
ಮನ್ನಿಸಿ ಕರುಣಿಸಿ ನಿನ್ನ ಪದವಿ ಕೊಡು ೮

ಹರನೊಳು ಹರ ಶಬ್ದಾ । ವಾಚ್ಯನೆ
ಸಿರಿವರ ನಿರವದ್ಯಾ
ಸರ್ವ ಶಬ್ದ ಸುರವಾಚ್ಯ ಈ ಪರಿಯೊಳು
ಹರಿಹರ ಕ್ಷೇತ್ರದಿ ವರಗೃಹ ಮಾಡಿದಿ ೯

ತುಂಗಭದ್ರ ತೀರಾ । ವಾಸನೆ
ರಂಗ ಪಾಪ ದೂರಾ
ಮಂಗಳ ಗೋಪಾಲಕೃಷ್ಣವಿಠಲ ಭವ
ಹಿಂಗಿಸಿ ಪೊರೆ ದುಸ್ಸಂಗ ಬಿಡಿಸಿ ಹರಿ ೧೦

## ೮೦

ಶರಣರ ಪರಿಪಾಲಾ ಶ್ರೀಲೋಲಾ
ಪರಮ ಸುಂದರ ಬಾಲಾ ಪ.

ರುಕ್ಮಿಣಿ ರಮಣಾ ರಕ್ಕಸ ಹರಣಾ
ಶಕ್ರಾದಿನುತ ಚರಣಾಭರಣಾ ೧

ಮಧ್ವ ಮುನೀಶಾ ಶುದ್ಧ ಪ್ರಕಾಶಾ
ಪದ್ಮನಾಭ ಮನಶುದ್ಧಿಯ ನೀಡೋ ೨

ಕಾಮಿತ ಫಲದಾ ಕೋಮಲ ಪಾದಾ
ಶ್ರೀ ಮನೋಹರ ಸುರ ಕಾಮ್ಯ ಪ್ರದಾತಾ ೩

ಉಡುಪಿಯ ನಿಲಯಾ ಮೃಡ ಸುರ ಪ್ರೀಯಾ
ಧೃಡಮನ ಕೊಡು ನಿನ್ನಡಿಯಲಿ ಜೀಯಾ ೪

ಗೋಪಿಯ ತನಯಾ ನೀ ಪಿಡಿ ಕೈಯ್ಯಾ
ಗೋಪಾಲಕೃಷ್ಣವಿಠ್ಠಲ ಹೇ ಜೀಯ್ಯಾ ೫

## ೮೧

ಶ್ರೀ ಕರಗ್ರಹ ಎನ್ನ ಸಾಕಲಾರದೆ ಹೀಗೆ
ನೂಕಿ ಬಿಡುವುದು ನ್ಯಾಯವೆ ಪ.

ಬೇಕೆಂದು ನಿನ್ನ ಪದ ನಾ ಕಾಣ ಬಂದರೆ
ಈ ಕಪಟತನವು ಸರಿಯೆ ಹರಿಯೆ ಅ.ಪ.

ಎಲ್ಲರನು ಸಲಹಿದಂತೆನ್ನ ನೀ ಸಲಹೆನ
ನಿಲ್ಲದೆ ನೀರ ಪೊಗುವೆ
ಸೊಲ್ಲು ಸೊಲ್ಲಿಗೆ ನಿನ್ನ ಸ್ತುತಿಪೆನೊ ಬಾರೆನಲು
ಕಲ್ಲಡೀ ಅವಿತುಕೊಳುವೆ
ಖುಲ್ಲನಲ್ಲವೊ ನಾನು ತಲ್ಲಣಿಪೆ ಪೊರೆ ಎನಲು
ಹಲ್ಲು ಕೋರೆಯ ತೋರುವೆ
ಎಲ್ಲಿ ಹೋಗಲೊ ನಾನು ಇಲ್ಲವೊ ಇನ್ನೊಬ್ಬ
ಸೊಲ್ಲು ಕೇಳುವರನರಿಯೆ । ದೊರೆಯೆ ೧

ತಡಬಡಿಸುತಿಹೆನೆನ್ನ ಪಿಡಿದು ಕೈ ಸಲಹೆನಲು
ಘುಡು ಘುಡಿಸಿಕೊಂಡು ಬರುವೆ
ಬಡವನೋ ನಾನು ನಿನ್ನಡಿಯನೇ ನೀಡೆನಲು
ಹುಡುಗತನದಲಿ ಬೇಡುವೆ

ತಡೆಯಲಾರೆನೊ ಭವದ ದಡವ ಸೇರಿಸು ಎನಲು
ಕೊಡಲಿಯ ಪಿಡಿದು ಬರುವೆ
ಕಡು ಬವಣೆ ಬಿಡಿಸೆಂದು ಅಡಿಗಡಿಗೆ ಎರಗಲು
ಅಡವಿ ಅಡವಿಯ ತಿರುಗುವೆ । ಥರವೇ ೨

ಹತ್ತು ನಾಲ್ಕು ಲೋಕಕೆ ತೆತ್ತಿಗನೊ ನೀನೆನಲು
ಮುತ್ತ್ಯದೊರೆ ಎಂದೆನ್ನುವೆ
ಸುತ್ತಿರುವ ಆವರಣ ಮತ್ತೆ ನೀ ಭೇದಿಸೆನೆ
ಬತ್ತಲೆ ನೀ ನಿಲ್ಲುವೆ
ಎತ್ತ ಪೋದರು ಬಿಡೆನೊ ಭೃತ್ಯ ನಾ ನಿನಗೆನಲು
ಹತ್ತಿ ಕುದುರೆಯ ಓಡುವೆ
ನಿತ್ಯ ಮೂರುತಿ ನಿನ್ನ ಕೃತ್ಯವೇ ಹೀಗಿರಲು
ಮತ್ತಿನ್ನ ಹ್ಯಾಗೆ ಪೊರೆವೆ । ಕರೆವೆ ೩

ದೊರೆಯು ನೀ ಜಗಕೆಂದು ಸುರರೆಲ್ಲ ನುಡಿಯುವರೊ
ಅರಿಯೆ ನಾನದರ ಮಹಿಮೆ
ಸಿರಿಗೊಡೆಯನಾದರೆ ಪೊರೆಯದಲೆ ಎನ್ನನು
ಕರೆಕರೆಗೊಳಿಸುವರೆ
ತಿರಿಯ ಬರಲಿಲ್ಲ ನಾ ಸಿರಿಯ ನೀಡೆಂದೆನುತ
ಉರುತರದ ಭಯವೇತಕೆ
ಚರಣ ಧ್ಯಾನವನಿತ್ತು ಪರಮ ಭಕ್ತರೊಳಿಡಿಸಿ
ದೊರೆಯೆ ನೀ ಸಲಹ ಬೇಕೋ । ಸಾಕೋ ೪

ಅಪಾರ ಮಹಿಮನೆ ಆರ್ತಜನ ರಕ್ಷಕ
ಪಾಪಿ ನಾನಿಹೆನೋ ಈಗ
ನೀ ಪಿಡಿದು ಪೊರೆಯದಿರೆ ಕಾಪಾಡುವವರ್‍ಯಾರೊ
ಶ್ರೀ ಪತಿಯೆ ನೀನೆ ತೋರೊ
ತಾಪಪಡಲಾರೆ ಭವಕೂಪದೊಳು ಬಿದ್ದಿಹೆನು ನೀ
ಕೃಪಾದಿಂದೀಕ್ಷಿಸೋ

ಗೋಪಾಲಕೃಷ್ಣವಿಠ್ಠಲನೆ ನೀನಲ್ಲದಲೆ
ಕಾಪಾಡುವವರನರಿಯೆ ದೊರೆಯೆ ೫

## ೮೨

## ಭಯ ನಿವಾರಣ ಸುಳಾದಿ

ಶ್ರೀಕಂಜಭವರುದ್ರ ನಾಕೇಶ ದೇವತತಿ
ಆ ಕಮಲನಾಭ ಯತಿ ನಿಕರಗೊಲಿದನೆ
ಶ್ರೀಕರವದನ ಸರ್ವಲೋಕಕಧಿಪ ಕೃಪಾ–
ಲೋಕನದಲಿ ನೋಡಿ ಸುಖತೀರ್ಥನುತ ಚರಣ
ವ್ಯಾಕುಲ ಬಿಡಿಸಿ ನಿನ್ನಾನೇಕ ಮಹಿಮೆ ತಿಳಿಸಿ
ಜೋಕೆಯಿಂ ಕಾಯ್ದ ಗುರು ಆಕಾರಂತರ್ಯಾಮಿ
ಈ ಕಾಲದಲಿ ಮನ ವ್ಯಾಕುಲಪಡಿಸುವ
ಕಾಕು ಭಯವ ಬಿಡಿಸಿ ನೀ ಕಾಯಬೇಕೊ ದೇವ
ಲೋಕ ಲೋಕಾದಿಗಳ ಸಾಕುವ ಭಾರಕರ್ತ
ಆ ಕಮಲಭವನಭಯ ವ್ಯಾಕುಲ ಬಿಡಿಸಿದೆ
ಲೋಕ ಸೃಷ್ಟಿಪ ಶಕ್ತಿ ಏಕಚಿತ್ತವ ಕೊಟ್ಟು
ಲೋಕಲೋಕಾಧಿಪರ ನೀ ಕಾಯ್ದೆ ಕರುಣದಿ
ಲೋಕವೆಲ್ಲವ ಕೊನೆಗೆ ಏಕಾಪೋಶನಗೈವ
ಲೋಕಪತಿಯೆ ಭಕ್ತಾನೀಕಕಭಯದಾತ
ಭೀಕರ ಬೆನ್ಹತ್ತಿ ತಾಕಿದ ಮನಸಿನ
ವ್ಯಾಕುಲ ಭಯಬಿಡಿಸಿ ಜೋಕೆಯಿಂದಲಿ ಕಾಯೊ
ಗೋಕುಲಾಂಬುಧಿ ಚಂದ್ರ ಗೋಪಾಲಕೃಷ್ಣವಿಠ್ಠಲ
ಈ ಕಾಲಕೊದಗೆ ನಿನ್ನಾನೇಕ ಕೀರ್ತಿಯು ನಿಜವೋ ೧

ಭಯ ನಿವಾರಕದೇವ ಭಕ್ತವತ್ಸಲ ನೀನೆ
ದಯಮಾಡು ಮನಸಿನಲಿ ತಗುಲಿದ ಭಯವನೆ ಬಿಡಿಸಿ
ಭಯಪಡಿಸುತಿರೆ ಖಳನು ಬಾಲಕನ ಪ್ರತಿದಿನದಿ

ನಯವಿನಯದಿ ಕಂದ ನಿನ್ನನು ಮೊರೆಯಿಡೆ ಕೇಳಿ
ದಯಮಾಡುತ ತರಳನಲಿ ಕನಲುತ ದೈತ್ಯನ ಕೊಂದು
ಭಯ ಬಿಡಿಸಿದೆ ಬಾಲಕಗೆ ಭಕ್ತವತ್ಸಲ ನೃಹರೆ
ಅಯೋನಿಜೆ ದ್ರೌಪದಿಗೊದಗಿದ ಅನುತಾಪಗಳನೆಲ್ಲ
ದಯದಲ್ಲಿ ಪರಿಹರಿಸಿದ ಆಪದ್ಬಾಂಧವ ಸ್ವಾಮಿ
ಭಯಪಡಿಸುತ ಭಸ್ಮಾಸುರ ಮೃತ್ಯುವಿನಂದದಿ ಮೃತ್ಯುಂ
ಜಯನನು ಬೆನ್ನಟ್ಟಿ ಬರೆ ಹರನು ನಿನ್ನನು ಮೊರೆಹೋಗಲು
ಪ್ರಿಯವಚನದಿ ಸಂತೈಸಿ ತರುಣಿಯ ರೂಪದಿ ಖಳನ
ಕೈಯಿಂದಲೆ ಅವನ ಶಿರ ಉರಿಸುತ ಶಿವನನು ಪೊರೆದೆ
ಭಯಹಾರಕ ನರಹರೆ ಶ್ರೀ ಗೋಪಾಲಕೃಷ್ಣವಿಠ್ಠಲ
ಜಯವಲ್ಲದೆ ದಾಸರಿಗೆ ಭಯವುಂಟೆ ಪೇಳೋ ೨

ಮೃತ್ಯುಂಜಯನ ಪ್ರಿಯ ನಿತ್ಯ ನಿನ್ನನು ನಂಬಿ
ಚಿತ್ತದಿ ನೆನೆವಂಥ ಆಪ್ತವರ್ಗಕೆ ಇನ್ನು
ಮೃತ್ಯು ಭಯವು ಉಂಟೆ
ಆಪ್ತನಲ್ಲವೆ ನೀನು ಚಿತ್ತಕಂಟಿದ ಭಯ ಮೃತ್ಯು ಪರಿಹರಿಸೈಯ್ಯ
ಎತ್ತ ನೋಡಲು ನಿನ್ನ ವ್ಯಾಪ್ತಿ ಸುತ್ತಿರೆ ಜಗದಿ
ಮೃತ್ಯುವೆತ್ತಣದೊ ನಿನ್ನುತ್ತಮ ಭಕ್ತರಿಗೆ
ಇತ್ತ ದೇಹವು ನಿಂದು ಚಿತ್ತಾದಿಂದ್ರಿಯ ನಿಂದು
ನಿತ್ಯ ನಡೆವ ಜೀವಕೃತ್ಯವು ನಿನದೈಯ್ಯ
ಸುತ್ತುವೊ ಗ್ರಹಗತಿ ಮೃತ್ಯು ಪರಿವಾರವೆಲ್ಲ
ಭೃತ್ಯರಲ್ಲವೆ ನಿನ್ನ ಚಿತ್ತಕ್ಕೆದುರಾಗುವರೆ
ಸತ್ಯ ಸಂಕಲ್ಪ ನೀನು ಇತ್ತ ದೇಹವು ನಿನ್ನ
ಭೃತ್ಯತ್ವದಲ್ಲಿರೆ ಎತ್ತಣ ಭಯವೈಯ್ಯ
ಹತ್ತಿಕಾಡುವ ದುಷ್ಟಗ್ರಹಗಳ ಕಡೆಗೆ ನೂಕಿ
ಚಿತ್ತ ನಿರ್ಮಲವಿತ್ತು ಮತ್ತೆ ಮಂಗಳವಿತ್ತು
ನಿತ್ಯ ಕಾಯಲಿಬೇಕೊ ನಿನ್ನ ಸೇವೆಯನಿತ್ತು
ಮೃತ್ಯು ಮೃತ್ಯುವೆ ಮಹಾದೈತ್ಯ ಸಂಹರಣನೆ

ಚಿತ್ತದಲ್ಲಿ ನೀನು ಆಪ್ತನಾಗಿರೆ ಬೇರೆ
ಹತ್ತಿಕಾಡುವ ಗ್ರಹ ಹತ್ತಿರ ಬರಲುಂಟೆ
ಸತ್ಯಮೂರುತಿ ಸಿರಿ ಗೋಪಾಲಕೃಷ್ಣವಿಠ್ಠಲ
ಹತ್ತಿದ ಮೃತ್ಯು ಭಯ ಕಿತ್ತಿ ಬಿಸುಟು ಕಾಯೊ ೩

ವಾಸುದೇವನೆ ನಿನ್ನ ದಾಸನ ಕಾಯುವಂಥ
ಈಶನಲ್ಲವೆ ಜೀವರಾಶಿಗಳಿಗೆ ಬಿಂಬ
ಸುಷುಪ್ತಿಯಲ್ಲಿ ಕಾವ ಆತ್ಮ ಆನಂದರೂಪ
ತಾಸು ತಾಸಿಗೆ ಬಂದ ಭಯವ ಬಿಡಿಸುವದರಿದೆ
ದಾಶರಥಿಯೆ ನಿನ್ನ ಅನುಜನ ಜೀವಭಯ
ದಾಸ ಹನುಮನಿಂದ ಗಿರಿತರಿಸಿ ಹರಿಸಿದೆ
ಆ ಸುಗ್ರೀವನ ಮೊರೆ ಕೇಳಿ ಅಭಯವಿತ್ತು
ತೋಷದಿಂದಲಿ ಒಲಿದು ರಾಜ್ಯ ಸುಖವನಿತ್ತೆ
ವಾಸವ ಮೊರೆಯಿಡೆ ಒಲಿದು ಅಮೃತವಿತ್ತು
ಘಾಸಿಗೊಳಿಪ ಮೃತ್ಯುದೈತ್ಯರ ಸದೆಬಡಿದೆ
ನಾಶರಹಿತ ನೃಹರಿ ಗೋಪಾಲಕೃಷ್ಣವಿಠ್ಠಲ
ನಾಶದ ಭಯ ಉಂಟೆ ನಿನ್ನ ನಂಬಿದವರಿಗೆ ೪

ತರಳತ್ವದಲಿ ಭಯವು ವರ ಯೌವ್ವನದಲಿ ಭಯವು
ಜರೆ ಮರಣದಲಿ ಭಯವು ಪರಿಪರಿ ರೋಗದ ಭಯವು
ಅರೆಘಳಿಗೆಯು ಬರದಂತೆ ಹರಿ ನೀ ಪರಿಹರಿಸುತಲಿ
ಪರತರ ನಿನ್ನಯ ಮಂಗಳ ಚರಿತೆಯ ಸ್ಮರಣೆಯನಿತ್ತು
ಹರಿಭಕ್ತರ ಕಾಯುವುದು ಬಿರುದಲ್ಲವೆ ನಿನಗಿನ್ನು
ಪರಿಪರಿ ಭಯ ಕ್ಲೇಶಗಳ ಪರಿಹರ ಮಾಡುತ ಕಾಯೊ
ವರಯಂತ್ರ ಮಂತ್ರಗಳು ಪರಿಪರಿ ಜಪ ಹೋಮಗಳು
ತರತರದೌಷಧ ಪಥ್ಯ ನರಹರಿ ಎಲ್ಲವು ನೀನೆ
ಹೊರಗೊಳಗೆಡಬಲದಲ್ಲಿ । ಮರೆವು ಸ್ಮರಣೆಗಳಲ್ಲಿ
ಪರಿಪರಿ ಕ್ರೀಡೆಗಳಲ್ಲಿ ಚರಿಸುವ ಕರ್ಮಗಳಲ್ಲಿ

ನೆರೆದಿಹ ಜನವೃಂದದಲಿ ಹಗಲಿರುಳು ಸಂಧಿಯಲಿ
ಪರಿಪರಿ ಕಾಲಗಳಲ್ಲಿ ಪರಿಪರಿ ದೇಶಗಳಲ್ಲಿ
ನರಹರಿ ದುರ್ಗಾಸಹಿತ ವರ ಮೃತ್ಯುಂಜಯ ವರದ
ಸಿರಿಭಾರತಿಪತಿಸಹಿತ ಚರಿಸುತ ಬೆಂಬಿಡದಲೆ ನೀ
ನಿರುತದಿ ಕಾಯಲಿಬೇಕೊ ಬರಿದನು ಮಾಡದೆ ಸ್ತುತಿಯ
ವರ ಸುದರ್ಶನ ಪಾಂಚಜನ್ಯ ಪದ್ಮವ ಪಿಡಿದ
ಪರಮ ಮಂಗಳರೂಪ ದೈತ್ಯರಿಗತಿ ಘೋರ
ಗುರುಬಿಂಬನೆ ನೀನೆಂದು ಪರಿಪರಿ ಪ್ರಾರ್ಥಿಪೆನಿನ್ನು
ಕೊರಗಿಸದಲೆ ಮನವನ್ನು ಹರಿ ಸೌಭಾಗ್ಯವನಿತ್ತು
ಕರೆಕರೆಗೊಳಿಸದೆ ಕಾಯೊ ಕರುಣಾಬ್ಧಿಯೆ ದಾಸರನು
ವರಭಾಗ್ಯವು ಆಯಸ್ಸು ಆರೋಗ್ಯಂಗಳೂ ಎಲ್ಲ
ನಿರುತವಿರಲಿ ಬೇಕೊ ನಿನ್ನವರಿಗೆ ಸಾಧನಕೆ
ಕರುಣಾಕರ ಗೋಪಾಲಕೃಷ್ಣವಿಠ್ಠಲ ನಿನ್ನ
ಸ್ಮರಿಸಿದ ಮಾತ್ರದಿ ಸಕಲ ಭಯ ಪರಿಹಾರಕವೋ ೫

### ಜತೆ

ನಿತ್ಯ ಮಂಗಳ ನಿನ್ನ ಸ್ಮರಿಪರ ಮನದ ಭಯವ
ಕಿತ್ತು ಬಿಸುಟು ಸಲಹೋ ಗೋಪಾಲವಿಠ್ಠಲ

## ೮೩

ಶ್ರೀನಿವಾಸ ನಿನಗೆ ನಾ ಮಣಿದು ಫಲವೇನೊ
ಕಾಣಿಸದೊ ನಿನಗೆನ್ನ ಕಷ್ಟ ಪ.

ಜಾಣತನವಿದನೆಲ್ಲಿ ಮಾನನಿಧಿ ಕಲಿತೆಯೊ
ಗಾನವಿಲೋಲ ಸ್ವಾಮಿ ಪ್ರೇಮಿ ಅ.ಪ.

ಎಷ್ಟು ಕೂಗಲು ದಯವು ಪುಟ್ಟಲಿಲ್ಲವೊ ನಿನಗೆ
ಕೃಷ್ಣಮೂರುತಿಯೆ ಕೇಳೊ
ಕಷ್ಟಪಡಿಸುವುದೀಗ ದಿಟ್ಟತನವೇ ನಿನಗೆ

ಶ್ರೇಷ್ಠ ನೀನೆನಿಸಿಕೊಂಡು
ಪಟ್ಟವ್ಯಾತಕೆ ನಿನಗೆ ಮೂರು ಲೋಕದ ರಾಜ್ಯ
ಬಿಟ್ಟು ಬಿಡು ನೀನೀಗಲೆ
ದೃಷ್ಟಿಯಿಂದಲಿ ನೋಡಿ ನಿನ್ನ ತೋರೆಂದೆನಲು
ಸೊಟ್ಟ ತಿರುಹಿರುವೆ ಮುಖವ ದೇವ ೧

ತೋರೊ ಮೋರೆಯನೆನಲು ನೀರ ಪೋಗುವೆ ಬೆನ್ನು
ಭಾರ ಪೊತ್ತು ಕೋರೆ ತೆರೆವೆ
ಘೋರ ರೂಪವ ತೋರಿ ಈ ರೀತಿ ಬೆದರಿಸುವೆ
ದಾರಿ ಎನಗಿನ್ನಾವುದೊ
ನಾರಿಯನೆ ಪೆತ್ತು ನೀ ನಾರಿಯನೆ ಕೊಂದು ನಿನ್ನ
ನಾರಿ ಚೋರನ ವಧಿಸಿದೆ
ನಾರೆರೋಸ್ತ್ರವ ಕದ್ದು ನಾರಿಯರ ವ್ರತ ಕೆಡಿಸಿ
ಏರಿ ಓಡಿದೆ ಕುದುರೆಯ ಜೀಯಾ ೨

ಈ ಪರಿಗೈದರೆ ಕಾಪಾಡುವವರ್‍ಯಾರೊ
ಭೂಪರ್‍ಯಾವರ ಪೊರೆದನೆ
ತಾಪಪಡುವುದು ನಿನಗೆ ತೋರ್ಪುದಿಲ್ಲವೆ ದೇವ
ಪಾಪಿ ಎಂದೆನಬೇಡವೊ
ನೀ ಪಾರುಗೊಳಿಸಬೇಕೀಪರಿಯ ಬವಣೆಗಳ
ಶ್ರೀಪತಿಯೆ ಶ್ರೀನಿವಾಸ
ಗೋಪಾಲಕೃಷ್ಣವಿಠ್ಠಲನೆ ನೀನಲ್ಲದೆ
ಕಾಪಾಡುವವರನರಿಯೆ ದೊರೆಯೆ ೩

## ೮೪

ಶ್ರೀನಿವಾಸ ಸ್ಥಿರವಾರದೊಡೆಯ ಹರಿಯೆ ನಂಬಿದೆ
ಪೊರೆ ದೊರೆಯೆ ಪ.

ಭಾನು ಪ್ರಕಾಶ ಪದ್ಮವತಿಗೆ ಪ್ರಿಯ ತಿಳಿಯೆನೊ
ನಿನ್ನ ಮಾಯ ಅ.ಪ.

ಎಷ್ಟು ಛಲವೋ ಎನ್ನಿಂದಲಿ ಸೇವೆಯನು ಕೈಕೊಳ್ಳು ಇನ್ನು
ಶ್ರೇಷ್ಠರಾದ ಶ್ರೀ ಗುರುಗಳ ಆಜ್ಞೆಯಲಿ ಬಂಧಿಸಿ ಎನ್ನಿಲ್ಲಿ
ದಿಟ್ಟತನದಿ ಕೈಕೊಂಡೆಯೊ ಧ್ಯಾನವನು
ಮಹ ಮಹಿಮನೊ ನೀನು
ಗುಟ್ಟು ಪೇಳಲು ಎನ್ನಿಂದಲಿ ಅಳವೇ ನಿತ್ಯದಿ ನಿನ್ನ ನೆನವೆ ೧

ನಾನಾ ರೂಪ ಧ್ಯಾನದಲಿ ಬಂದ್ಯೊ ಎನ್ನಲಿ ನಿಂದ್ಯೊ
ಮಾನವ ಜನ್ಮ ಸಾರ್ಥಕವೆನಿಸಿದ್ಯೊ ಶ್ರೀ ಗುರುದಯ ನೀಡ್ದ್ಯೊ
ಏನು ಹೇಳಲೋ ನಿನ್ನಯ ಮಹ ಚರಿತೆ
ನಿನ್ನ ಪಾದದಲಿ ಮಮತೆ
ಸಾನುರಾಗದಿ ಕೊಟ್ಟು ಎನ್ನ ಸಲಹೊ ಬಿಡೆನು ನಿನ್ನೆಲವೊ ೨

ಮಚ್ಛಕೂರ್ಮ ಹರಿ ಸ್ವಚ್ಛ ವರಹರೂಪ ನರಹರಿ ಪ್ರತಾಪ
ಸ್ವಚ್ಛಮನದಲಿಹ ಬಲಿಯನೆ ಬಂಧಿಸಿದ್ಯೊ ರಾಜರ ಮರ್ಧಿಸಿದ್ಯೊ
ಅಚ್ಚ ಜೀವೋತ್ತಮಗಜನ ಪದವನಿತ್ಯೊ ಗೋಪಿಗೆ ಮುದವಿತ್ಯೊ
ಬಿಚ್ಚಿ ವಸನವ ಹಯವನೇರಿದ್ಯಲ್ಲಾ ಗೋಪಾಲಕೃಷ್ಣವಿಠಲಾ ೩

## ೮೫

ಶ್ರೀನಿವಾಸ ಕರುಣದಿ ಕಾಯೊ ಶ್ರೀನಿಧೆ ದಯದಿ
ಬಾನು ಪ್ರಕಾಶ ಶ್ರೀಹರಿಯೆ ಪ.

ಈ ನರಜನ್ಮದಲಿ ಬಂದು
ಬೇನೆ ಬಿಟ್ಟು ಸಂಸಾರದಿ
ಕಾನನದಿ ಕಣ್ಣು ಮುಚ್ಚಿ
ನೀನೆ ಎನ್ನ ಬಳಲಿಸುವರೆ ಅ.ಪ.

ಎಷ್ಟು ವಿಧದಿ ಕರೆದರೂ ನಿನಗೆ । ಈಗಿನ್ನು ದಯ
ಪುಟ್ಟದ್ದೋಹಿತಲ್ಲೊ ದೇವನೆ
ಬೆಟ್ಟದೊಡೆಯ ನಿನ್ನ ನಂಬಿ

ಕಷ್ಟ ಬಿಡಿಸು ಎಂದು ಬಾಯಿ
ಬಿಟ್ಟು ಕೂಗಿದರೂ ಕರುಣ
ಪುಟ್ಟಲಿಲ್ಲೊ ಸೃಷ್ಟಿಗೊಡೆಯ ೧

ಯಾಕೆ ಎನ್ನ ಈ ಪರಿಯಿಂದ । ಜರೆದು ತೊರೆಯುತ್ತ
ನೂಕುವುದು ನ್ಯಾಯವೇ ಶ್ರೀಶ
ವಾಕುಲಾಲಿಸೆನ್ನನೀಗ
ಸಾಕಿದರೆ ನಿನ್ನ ಭಕ್ತರೊಡನೆ
ಬೇಕೆಂದು ನಿನ್ನ ಪದ ಸ್ಮರಣೆಯ
ಏಕಮನದಿ ಧ್ಯಾನಿಸುವೆನೊ ೨

ನಡೆನುಡಿಗಳ ತಪ್ಪನೆಣಿಸಿದರೆ । ಶ್ರೀನಿಧಿಯೆ ಎನ್ನ
ಪೊಡವಿಯೊಳಗೆ ಪೊರೆವರಿನ್ಯಾರೊ
ಬಿಡು ಬಿಡು ಈ ಬಿಂಕವೆಲ್ಲ
ಕೊಡು ನಿನ್ನ ಪದ ಸರ್ವಕಾಲ
ದೃಢ ಭಕ್ತಿ ವೈರಾಗ್ಯ ಎನಗೆ
ಕೊಡು ಗೋಪಾಲಕೃಷ್ಣವಿಠ್ಠಲ ೩

## ೮೬

ಶ್ರೀನಿವಾಸನೆ ನಿನ್ನ । ವರ್ಣಿಸಲು ಅಳವೇ
ಮಾನನಿಧಿ ಗುಣಪೂರ್ಣ । ನಿನ್ನಂಘ್ರಿ ಭಜಿಪರ
ಸಾನುರಾಗದಿ ಮುನ್ನ । ಪರಿಹರಿಸು ಬನ್ನ ಪ.

ವೈನತೇಯನ ವರೂಥ ನಾನಾ
ಹಾರ ಪದಕದಿ ಮೆರೆವ ಸುಂದರ
ಕಾಮಪೂರ್ಣ ಮುಖಾರವಿಂದನ
ನೀ ಮನದಿ ತೋರುತ್ತ ಪೊರೆಯೊ ಅ.ಪ.

ಶೇಷಪರ್ವತವಾಸ । ಭಕ್ತರನು ಸಲಹೋ
ಈ ಕ್ಷಿತಿತ್ರಯಕೀಶ

ಪೋಷಿಸುವ್ರೋ ಭಕ್ತರವಾಸಿ ನಿನ್ನದೊ ಶ್ರೀಶ ಲಕ್ಷ್ಮೀನಿವಾಸ
ದೋಷದೂರನೆ ಎನ್ನ ಅವಗುಣ
ದೋಷಗಳನೆಣಿಸದಲೆ ಸಲಹೊ
ಶೇಷವರ ಪರ್ಯಂಕಶಯನ ವಿ–
ಭೀಷಣ ಪ್ರಿಯ ಭೀಷ್ಮವರದ ೧

ಮಾಘ ಸಪ್ತಮಿ ಕುಂಭ । ಸಂಕ್ರಮಣ ದಿವ್ಯ
ಯೋಗ ಶುಕ್ಲದಿ ಎಂಬ । ಸ್ಥಿರವಾರದಲ್ಲಿ
ಆಗ ರಥದಲ್ಲಿ ಬಿಂಬ । ಭಕುತರಿಗೆ ಕಾಂಬ
ಜಾಗು ಮಾಡದೆ ಸೂರ್ಯಮಂಡಲ
ಬೇಗ ಬಿಗಿದಿಹ ಸಪ್ತ ಹಯಗಳ
ಬಾಗಿ ಭಜಿಸಲು ಭಕ್ತವರ್ಗವು ನೀ
ಜಗದಿ ಮೆರೆಯುತ್ತ ಪೊರೆದೆ ೨

ಮೀನನಾಗಿ ಮತ್ತೆ ವೇದವನೆ । ತಂದು
ಆ ನಳಿನಭವಗಿತ್ತೆ ಅಲ್ಲಿಂದ ಸುರರಿಗೆ
ಪ್ರಾಣದಾನವನಿತ್ತೆ ಮೇದಿನಿಯ ಪೊತ್ತೆ
ನಾನೆ ಜಗಕೆಂಬ ದಾನವನ ಕೊಂದು
ದಾನ ಬೇಡಿ ಭೂಮಿ ಅಳೆದು
ಮಾನಿನಿ ಶಿರ ತರಿದು ಸೀತಾ
ಮಾನಿನಿಗೆ ಅಂಬುಧಿಯ ಬಿಗಿದೆ ೩

ಮಾನಿನಿಯರಿಗೆ ಕಾಣದೆ । ಬೆಣ್ಣೆಯನು ಕದ್ದು
ಮಾನವೆಲ್ಲವ ಕಳೆದೆ ಅಲ್ಲಿಂದ ಮುಂದೆ
ಮಾನಿನಿಯರ ವ್ರತವಳಿದೆ ಮಾನವ ಬಿಟ್ಟು ನಿಂದೆ
ಏನ ಹೇಳಲಿ ಹಯವನೇರಿ
ದಾನವರ ಸಂಹರಿಸಿ ಮೆರೆದೆ
ನಾನಾ ರೂಪ ನಾಟಕಧರ
ನೀನೀ ಪರ್ವತದಲಿ ನಿಂದಿಹೆ ೪

ದೇಹವ್ಯಾಪ್ತಕ ನೀನೆ । ದೇಹಗಳ ಕೊಟ್ಟು
ಮೋಹಗೊಳಿಸುವ ನೀನೆ
ದೇಹಸ್ಥನಾಗಿ ತೋರುವ ಬಿಂಬ ನೀನೆ । ಜೀವಾಕಾರನೆ
ಈ ಹದನ ಎನಗಿನ್ನು ತಿಳಿಯದೊ
ಮೋಹ ಹರಿಸಿ ಸುಜ್ಞಾನ ನೀಡೊ
ಸ್ನೇಹ ಗೋಪಾಲಕೃಷ್ಣವಿಠ್ಠಲ
ಶ್ರೀ ಹರಿಯೆ ಹೃದಯದಲಿ ನಿಲಿಸೊ ೫

## ೮೭

ಶ್ರೀ ರಮೇಶನೆ । ಶ್ರೀ ನಾರಸಿಂಹ ಶ್ರೀ ರಮೇಶನೆ ಪ.

ಶ್ರೀ ರಮೇಶ ಸುರ ಸಾರ್ವಭೌಮ ಭವ
ತಾರಕಗೊಳಿಸುವ ಕಾರಣಪುರುಷ ಅ.ಪ.

ಆದಿಮೂಲನೆ । ಅಪಾರ ಮಹಿಮ ಖೇದದೂರನೆ
ವಾದಿಪ ಪಿತನೊಳು ಸಾಧಿಪೆ ನಿನ ಮತ
ಮೋದಗೊಳಿಸಿ ಪ್ರಹ್ಲಾದನ ಪೊರೆದೆ ೧

ಮಾಧವ ಹರೆ । ಮುರವೈರಿ ಶೌರಿ ಭೂಧರಾ ದೊರೆ
ಕಾದಿದ ದುಷ್ಟ ದೈತ್ಯಾದಿಗಳ ಕೊಂದು
ಮೋದವಿತ್ತೆ ಭೂದೇವಿಗೆದೆ ಶ್ರೀಶಾ ೨

ಭೂಪರೈವರು । ಎದುರಲ್ಲಿ ಇರಲು ಪಾಪಿ ಖೂಳರು
ದ್ರೌಪದಿ ವಸನವ ಕೈಪಿಡಿದೆಳೆಯಲು
ಶ್ರೀ ಪತಿ ಸಲಹೆನೆ ತಾಪವ ಬಿಡಿಸದೆ ೩

ನೀರೊಳಾಡಿದೆ । ನೀ ಕಲ್ಲು ಪೊತ್ತು ನಾರಿಯ ತಂದೆ
ನಾರಸಿಂಹ ವಟು ವೀರರಾಮಚಂದ್ರ
ಜಾರಚೋರ ವಸ್ತ್ರದೂರನೆ ಕಲ್ಕಿ ೪

ಗೋಪಾಲಕೃಷ್ಣ । ವಿಠ್ಠಲದೇವ ಕಾಪಾಡೊ ಕೃಷ್ಣ
ರೂಪ ರೂಪಾಂತರ ವ್ಯಾಪಿಸಿ ಜಗದೊಳು
ಶ್ರೀಪತಿ ಹೃದಯದಿ ರೂಪವ ತೋರೊ ೫

## ೮೮

ಸತ್ಯ ಸಂಕಲ್ಪ ನೀನಹುದೆಲೊ ಜಗದೊಳು
ಭೃತ್ಯವತ್ಸಲ ಹರಿಯೆ ಪ.

ಭಕ್ತರೊಡೆಯ ಹರಿ ನಿತ್ಯ ತೃಪ್ತನೆ
ವ್ಯಾಪ್ತ ಜಗದಿ ಹರಿಯೆ ದೊರೆಯೆ ಅ.ಪ.

ಜನನ ಮರಣ ವಿದೂರನೆ ದೇವಕಿ
ತನಯ ರುಕ್ಮಿಣೀಶ
ಘನಭವ ವನಧಿಯ ದಾಟಿಸಿ ಸಲಹೋ
ವನಜ ನಯನ ದೇವ ಸತತದಿ ೧

ಕಮಲಾಕ್ಷ ಕಮಲೇಶ ಕಮಲಪಾಣಿ ಪದ
ಕಮಲವೆನಗೆ ತೋರೊ
ಕಮಲನಾಭ ಹೃತ್ಕಮಲದಿ ನಿಲ್ಲೊ
ಕಮಲಮುಖನೆ ದೇವ ಶ್ರೀಹರಿ ೨

ಭಕ್ತಕಮಲ ಬಂಧು ವ್ಯಾಪ್ತ ದಯಾಸಿಂಧು
ಉತ್ತಮನೆ ನೀನೆಂದು
ಎತ್ತ ನೋಡಲು ಸುರರೆತ್ತಿ ಕೈ ಪೊಗಳಲು
ಮತ್ತೆ ನಿನಗೆ ಸರಿಯೆ ಜಗದೊಳು ೩

ಶ್ರೀನಿವಾಸನೆ ಕಾಯೊ ಮಾನನಿಧಿಯೆ ಎನ್ನ
ಹೀನ ಕರ್ಮವ ಕಳೆಯೊ

ಶ್ರೀನಿಧಿ ದ್ರೌಪದಿ ಮಾನ ಕಾಯ್ದನೆ
ಗಾನಲೋಲ ಕೃಷ್ಣ ನರಹರಿ ೪

ಸಂಕರ್ಷಣನೆ ಮನ ಪಂಕಜದಲಿ ನಿಂತು
ಶಂಕಿಸದಲೆ ಕಾಯೊ
ಪಂಕಜಮುಖ ಹರಿ ಗೋಪಾ–
ಲಕೃಷ್ಣವಿಠ್ಠಲ ಶಂಖ ಚಕ್ರಧರನೆ ಪೊರೆಯೊ ನೀ ೫

## ೮೯

ಸಾಕು ಸಾಕೊ ನಿನ ಸಂಗ ಶ್ರೀಕಾಂತ ನೃಹರಿ
ಯಾಕಿಂತು ನಿರ್ದಯವೊ ಭಕ್ತರೊಳು ನಿನಗೆ ಪ.

ಕರಿಗಿರಿ ಶಿಖರದಲಿ ನೆಲಸಿರುವ ನೃಹರಿಯೆ
ಗುರುಗಳು ಸಹಿತದಲಿ ನಿನ್ನ ಗಿರಿ ಏರಿ
ಪರಮ ಸಂತೋಷದಲಿ ದರುಶನಕೆ ನಾ ಬರಲು
ಸಿರಿಸಹಿತ ಪವಡಿಸಿ ಕದವ ಹಾಕಿಸಿದೆ ೧

ಬಂದ ವರ ಭಕ್ತರಿಗೆ ಸಂದರುಶನವ ಕೊಡದೆ
ಮಂದಿರದ ಬಾಗಿಲ್ಹಾಕಿಸಿದೆಯಲ್ಲೊ ದೇವ
ಇಂದೆನ್ನ ಮನಕೆ ಪರಿತಾಪವನೆ ಕೊಟ್ಟೆ
ಚಂದವೇ ನಿನಗಿನ್ನು ಮಂದರೋದ್ಧರನೆ ೨

ನಿನ್ನ ದರುಶನ ಕೊಡದ ಘನ್ನ ಪಾಪವನೆ ನಾ
ಮುನ್ನೇನ ಮಾಡಿದೆನೊ ಪನ್ನಗಶಯನ
ಎನ್ನ ಕೊರಗಿಸುವುದು ಇನ್ನು ನಿನಗೆ ಹಿತವೆ
ಮನ್ನಿಸಿ ಸಲಹಬೇಕಿನ್ನು ಶ್ರೀ ಹರಿಯೆ ೩

ಕದವೇಕೆ ಹಾಕಿಸಿದ್ಯೊ ಪದುಮನಾಭನೆ ದೇವ
ಒದಗಿ ಬಹ ಭೃತ್ಯರನು ಒದೆದು ನೂಕಿ
ಯದುವೀರ ನಿನಗಿನ್ನು ಎಷ್ಟು ನಿದ್ರೆಯೊ ಕಾಣೆ
ಕದನವಾಡುವೆ ನಿನ್ನೊಳು ಪ್ರಹ್ಲಾದವರದ ೨

ವರಭಕ್ತರು ಕಾದಿರಲು ದರುಶನ ಕೊಡದೆ ನೀ
ಸಿರಿಸಹಿತ ಪವಡಿಸಿದೆ ಘನವೆ ನಿನಗಿನ್ನು
ಸುರವಂದ್ಯ ಗೋಪಾಲಕೃಷ್ಣವಿಠ್ಠಲ ಹೃದಯ
ಅರಮನೆಯೊಳು ನೆಲಸಿ ಸಲಹಯ್ಯ ಸತತ ೫

## ೬೦

## ಉಗಾಭೋಗ

ಹತ್ತಾವತಾರದಿಂದ ಹರಿಯೆ ಕೊಂಡಾಡು ಪಾಡು
ಚಿತ್ತಾಭಿಮಾನಿ ಮುನಿಗೆ ವಲಿದು ಬಂದವನೆನ್ನು
ನಿತ್ಯ ಉಡುಪಿಲಿ ನಿಂದು ನಿಜ ಜನರನ್ನು ಕಾಯ್ವ
ಸ್ತುತ್ಯ ಗೋಪಾಲಕೃಷ್ಣವಿಠ್ಠಲನಿವನೆನ್ನೊ

## ೬೧

ಹ್ಯಾಗೆ ದರುಶನ ಪಾಲಿಸುವೆ ವಿಠ್ಠಲನೆ
ಹ್ಯಾಗೆನ್ನ ಪೊರೆವೆ ವಿಠ್ಠಲನೆ ಪ.

ನಾಗಶಯನನೆ ನಿನ್ನ ನೋಡಬೇಕೆಂದು ಮನ
ಈಗ ತವಕಿಸುತಿಹುದು ಹ್ಯಾಗೆ ಮಾಡಲಿ ವಿಠಲ ಅ.ಪ.

ಅರಿಯದಾ ದೇಶದಲಿ ಆಲ್ಪರಿದು ಅನ್ಯರಿಗೆ
ಬರಿದಾಯ್ತು ಬಯಕೆ ವಿಠ್ಠಲನೆ

ಅರಿಯೆ ಮುಂದೊಂದು ಪರಿ ಹರಿಯೆ ನೀನಲ್ಲದಲೆ
ಪೊರೆಯುವರ ಕಾಣೆ ವಿಠ್ಠಲನೆ ೧

ಕೈಯಲ್ಲಿ ಕಾಸಿಲ್ಲ ಮೈಯಲ್ಲಿ ಬಲವಿಲ್ಲ
ಹ್ಯಾಗೆ ಬರಲಿನ್ನು ವಿಠ್ಠಲನೆ
ನ್ಯಾಯದಿಂದಲಿ ಹಿಂದಿನಾ ಭಕ್ತರಂದದಲಿ
ಕಾಯಬಾರದೆ ಎನ್ನ ಪೇಳೂ ವಿಠ್ಠಲನೆ ೨

ಭಕ್ತ ಸುರಧೇನೆಂಬೊ ಬಿರುದು ಕೇಳೀ ಬಂದೆ
ಚಿತ್ತಕ್ಕೆ ಬರದೆ ವಿಠ್ಠಲನೆ
ಭಕ್ತರಾ ಕೂಟದಲಿ ಸೇರಲಿಲ್ಲವೆ ನಾನು
ಭಕ್ತವತ್ಸಲನಲ್ಲವೇನೊ ವಿಠ್ಠಲನೆ ೩

ತಂದೆ ತಾಯಿಯು ನೀನೆ ಬಂಧು ಬಳಗವು ನೀನೆ
ಇಂದಿರೇಶನೆ ಕಾಯೊ ಸತತ ವಿಠ್ಠಲನೇ
ಹಿಂದಿನವರನು ಪೊರೆದ ಕೀರ್ತಿ ಉಳಿಯಲು ಈಗ
ಕುಂದನೆಣಿಸದೆ ಕಾಯಬೇಕೊ ವಿಠ್ಠಲನೇ ೪

ಕರುಣಿ ಎನ್ನಯ್ಯ ಕಂಗೆಡಿಸದಲೆ ಕಾಪಾಡೊ
ಚರಣವೇ ಗತಿ ಎಂದು ಬಂದೆ ವಿಠ್ಠಲನೆ
ಗುರು ಅಂತರ್ಯಾಮಿ ಎನ್ನಭಿಮಾನ ನಿನದೈಯ್ಯ
ಸಿರಿಯರಸ ಗೋಪಾಲಕೃಷ್ಣವಿಠ್ಠಲನೆ ೫

## ಮಹಾಲಕ್ಷ್ಮಿ

### ೬೨

ಇಂದಿರೆ ಮುಕುಂದ ಹೃನ್ಮಂದಿರೆ ಪ.

ಇಂದಿರೆ ಲೋಕವಿಖ್ಯಾತೆ । ಶ್ರೀ–
ನಂದನ ಕಂದನೊಳು ಪ್ರೀತೆ । ಆಹ
ಬಂದೆನೆ ಭವದೊಳು ನಿಂದೆನೆ ನಿನ ಪದ
ದ್ವಂದ ಸನ್ನಿಧಿಯಲಿ ಇಂದಿರೇಶನ ತೋರೆ ಅ.ಪ.

ತ್ರಿಗುಣಾಭಿಮಾನಿಯೆ ದೇವಿ । ನಿನ್ನ
ಜಗದೊಳು ನುತಿಪರ ಕಾಯ್ವಿ । ನಿತ್ಯ
ನಗಧರನನು ಸೇವಿಸುವಿ । ಲಯ
ಜಗ ಸೃಷ್ಟಿ ಸ್ಥಿತಿಯಲ್ಲಿ ದೇವಿ । ಆಹ
ಬಗೆ ಬಗೆ ರೂಪದಿ ಸುಗುಣವಂತೆಯಾಗಿ
ನಿಗಮಾದಿಗಳಿಂದ ನಗಧರನನು ಸ್ತುತಿಪೆ ೧

ಸಕಲಾಭರಣ ರೂಪದಿಂದ । ಹರಿಯ
ಅಕಳಂಕ ಭಕ್ತಿಗಳಿಂದ । ಪಂಚ
ಪ್ರಕೃತ್ಯಾದಿ ರೂಪಗಳಿಂದ । ನಾನಾ
ಸಕಲ ಸಾಮಗ್ರಿಗಳಿಂದ । ಆಹಾ
ಮುಕುತಿ ನಾಲ್ಕರಲ್ಲಿ ಭಕುತಿಯಿಂ ಸೇವಿಸುತ
ಮುಕುತರಿಂದೋಲಗ ಅಕಳಂಕದಿಂ ಕೊಂಬೆ ೨

ಪಾದದಿ ಪಿಲ್ಯೆ ಪಾಡಗವೊ । ಮೋದ
ವಾದ ನೆರಿಗೆ ವೈಭವವೂ । ಗಾಂಭೀ–
ರ್ಯದ ವಡ್ಯಾಣ ನಡುವು । ಮೇಲೆ ಭಾ–
ರದ ಕುಚದ್ವಯ ಬಾಹು । ಆಹ
ಶ್ರೀದನ ಪೆಗಲೊಳು ಮೋದದಿಂದೆಸೆವ ಕೈ
ಆದರದಲಿ ನಿನ್ನ ಪಾದಸೇವೆಯ ನೀಡೆ ೩

ಕರದಲ್ಲಿ ಕಡಗ ಕಂಕಣ । ಬೆರಳ
ವರ ವಜ್ರದುಂಗುರಾ ಭರಣ । ನಾಗ–
ಮುರಿಗೆ ಸರಿಗೆ ಕಂಠಾಭರಣ । ಬಲ
ಕರದಲ್ಲಿ ಪದ್ಮ ಭಕ್ತರನ । ಆಹ
ವರದೃಷ್ಟಿಯಿಂದಲಿ ನಿರುತ ಈಕ್ಷಿಸುತ
ಪರಿಪರಿ ಬಗೆಯಿಂದ ಪೊರೆವೊ ಸುಂದರಕಾಯೆ ೪

ಗೋಪಾಲಕೃಷ್ಣವಿಠ್ಠಲನ । ನಿಜ
ವ್ಯಾಪಾರ ಕೊಡೆ ಎನಗೆ ಮನನ । ಪೂರ್ಣ
ರೂಪಳೆ ಮುಖದ ಚಲುವಿನ । ನಿನ್ನ
ರೂಪವ ತೋರಿಸೆ ಮುನ್ನ । ಆಹ
ಈ ಪಾಮರ ಮನದ ತಾಪ ಹರಿಸಿ ಲಕುಮಿ
ಶ್ರೀಪತಿ ಪದದಲ್ಲಿ ಕಾಪಾಡು ನಿತ್ಯದಿ ೫

## ೬೩

ಏಳಮ್ಮ ಕೊಲ್ಲಾಪುರಧೀಶೆ । ಇನ್ನೂ
ಭಾಳ ಹೊತ್ತಾಯಿತು ವೈಕುಂಠವಾಸೆ ಪ.

ಸೃಷ್ಟಿಸೆಂದೆನುತ ಆಂಭ್ರಣಿರೂಪದಿಂದ್ಹರಿ
ಗಿಷ್ಟ ಸ್ತೋತ್ರವ ಮಾಡಿ ಎಬ್ಬಿಸಬೇಕು
ಅಷ್ಟ ಭುಜದ ಲಕುಮಿ ಪ್ರಕೃತಿರೂಪಿಣಿಯಾಗಿ
ಸೃಷ್ಟಿಕಾರ್ಯಕೆ ಅನುವಾಗಬೇಕು ೧

ಸಕಲ ದೇವತೆಗಳ ಸೃಷ್ಟಿ ಮಾಡಲಿಬೇಕು
ಮುಕುತಿಯೋಗ್ಯರ ಸೇವೆ ಕೊಳ್ಳಬೇಕು
ಸಕಲರೂಪದಲಿ ಶ್ರೀಹರಿಯ ಸೇವಿಸಬೇಕು
ಅಕಳಂಕೆ ಆದಿದೇವತೆ ಎನಿಸಬೇಕು ೨

ಶ್ರೀ ಪದ್ಮಭವೆ ವೆಂಕಟೇಶನ ಕೂಡುತ
ನೀ ಪರಿಪರಿ ಲೀಲೆಗೈಯ್ಯಬೇಕು

ಗೋಪಾಲಕೃಷ್ಣವಿಠ್ಠಲನ ವಕ್ಷಸ್ಥಳ
ವ್ಯಾಪಿಸಿ ಭಕ್ತರ ಕಾಪಾಡಬೇಕು ೩

## ೯೪

ಕಮಲೆ ನಿನ್ನನು ಭಜಿಪೆ ಕಮನೀಯಗಾತ್ರೆ
ಸುಮನಸರ ಜನನಿ ನಿನ್ನಮಲಪದ ತೋರೆ ಪ.

ಲೋಕಸುಂದರಿ ಎನ್ನ ಶೋಕಗಳ ತರಿದು ಅವ
ಲೋಕಿಸೆ ಕರುಣಮಯ ದೃಷ್ಟಿಯಿಂದ
ಏಕಮನಸು ನೀಡೆ ಶ್ರೀ ಕಳತ್ರನ ಪದದಿ
ನೀ ಕರುಣಿಸಿದನೆ ನನಗನೇಕ ಜನ್ಮದಲಿ ೧

ಇಂದಿರೆ ನಿನ್ನ ಪತಿ ಸಂದರುಶನವನೆನಗೆ
ಎಂದೆಂದಿಗೆ ತೊಲಗದಂದದಲಿ ನೀಡೆ
ಒಂದನರಿಯೆನೆ ಈಗ ಬಂದೆನೇ ನಿನ್ನ ಬಳಿಗೆ
ನಂದಕಂದನ ತೋರಿ ಕುಂದು ಪರಿಹರಿಸೆ ೨

ಗೋಪಾಲಕೃಷ್ಣವಿಠ್ಠಲನ ಹೃದಯದಿ ತೋರಿ
ಕಾಪಾಡೆ ಸತತದಲಿ ಕಾರುಣ್ಯಶಾಲಿ
ನೀ ಪಯೋಬ್ಧಿಯೊಳ್ ಕೈಪಿಡಿದೆ ಶ್ರೀ ಹರಿಯ
ರೂಪ ರೂಪಾಂತರದ ವ್ಯಾಪಾರ ತಿಳಿಸೆ ೩

## ೯೫

ಕಟ್ಟಿದಳು ಕಂಕಣವ ನಾರಿ ಲಕುಮಿ
ವಿಷ್ಣು ಮೂರುತಿ ಕರಕೆ ವೈಕುಂಠರಾಣಿ ಪ.

ಅವಿಯೋಗಿಯಾದ ಶ್ರೀ ಸತಿಯ ಸೇವೆಗೆ ಒಲಿದು
ಪವಮಾನನೊಡೆಯ ವರ ಬೇಡೆನ್ನಲು
ಭುವನೇಶ ನಿನ್ನ ಕೃಪೆ ಪೂರ್ಣಳಾನೆಂದೆನುತ
ಹವಣೆಯಿಂ ಕೇಳ್ದಳೆರಡೊರವ ಲೋಕೋದ್ಧಾರಿ ೧

ಶರಣಾಗತ ರಕ್ಷಕನು ಎಂಬ ಬಿರುದೊಂದು
ಶರಣಾಗತ ವತ್ಸಲನು ಎಂಬುದೊಂದು
ಧರಿಸು ಈ ಬಿರುದು ಹರಿ ವರವು ಅದೆ ಎನಗೆನಲು
ಕಿರುನಗೆಯ ನಗುತ ಒಲಿದನು ಸತಿಯ ನುಡಿಗೆ ೨

ನಾರಿರನ್ನಳೆ ನಿನ್ನ ಕೋರಿಕೆಯ ತೆರನಂತೆ
ಆರಾಧನೆಯ ಮಾಳ್ಪ ಶರಣರಿಗೆ ಒಲಿವೆ
ತೋರಲೀ ಬಿರುದುಗಳು ನಿನ್ನ ಕರಗಳಲೆಂದು
ಶ್ರೀ ರಮೆಯ ಕರಕೆ ಕಂಕಣಗಳನೆ ತೊಡಿಸಿದನು ೩

ನಾರಿ ಈ ಕಂಕಣವ ನಿನಗ್ಯಾಕೆ ಅರ್ಪಿಸಲು
ತೋರದೆನ್ನುತ ನಟನೆಗೈವನಿತರೊಳ್
ಕ್ಷೀರಸಾಗರ ಮಥನ ಕಾಲದಲಿ ಜನಿಸುತಲಿ
ಶ್ರೀ ರಮೇಶಗೆ ಒಲಿದು ಮಾಲೆ ಹಾಕಿದಳು ೪

ಭಕ್ತಿ ಪ್ರೇಮಕೆ ಒಲಿದು ಭಕ್ತವತ್ಸಲ ಅಭಯ
ಹಸ್ತವನು ಶಿರದಲ್ಲಿ ಇಡಲು ನಾರಿ
ಚಿತ್ತದಲಿ ಆನಂದಪುಳಕಾಂಕುರಿತಳಾಗಿ
ಚಿತ್ತದೊಲ್ಲಭನ ಮುಖಕಮಲ ವೀಕ್ಷಿಸುತ ೫

ಈಕ್ಷಿಸಲು ಶ್ರೀ ಹರಿಯ ಕರಕಮಲ ಲಕ್ಷಣವ
ಲಕ್ಷ್ಮಿ ಬೆರಗಾಗಿ ಮುನ್ನಿನಕಿಂತ ಅಧಿಕ
ಅಕ್ಷಯದ ಸಾಮುದ್ರಿ ಲಕ್ಷಣವ ಕಾಣುತಲಿ
ಪಕ್ಷಿವಾಹನನ ಮೊಗ ಈಕ್ಷಿಸುತ ನಗುತ ೬

ನೀನಿತ್ತ ವರದಾನ ಕಂಕಣದ ಬಂಧನವ
ನಿನಗರ್ಪಿಸುತ ಧನ್ಯಳಾಗ್ವೆನೆಂದು
ಆ ನಾರಿ ಷೋಡಶಾ ಉಪಚಾರ ಪೂಜೆಯನು
ಆನಂದದಲಿ ಮಾಡಿ ಕಂಕಣವ ಕಟ್ಟಿದಳು ೭

ಜಗವನಾಡಿಸುವಂಥ ಸೂತ್ರವನೆ ಹದಿನಾರು
ಬಗೆ ಕಲೆಗಳೆಂಬ ಎಳೆ ಮಾಡಿ ಹಳದಿ
ಮಿಗೆ ಕಾಂತಿ ಬಣ್ಣದಲಿ ಮಂಗಳಾಕಾರದ
ಜಗಕೆ ಮೀರಿಸಿದಂಥ ಕಂಕಣವ ಕಟ್ಟಿದಳು ೮

ಕರಿ ಕೆಂಪು ಬಿಳುಪು ವರ್ಣವು ಪ್ರಳಯ ಕಾಲದಲಿ
ಇರಲಾರದೆಂದು ತ್ಯಜಿಸುತ ಹಳದಿಯ
ವರಕಾಂತಿ ಬಣ್ಣವನು ಪೂಸಿ ಮಂಗಳವದನೆ
ಸರದಿಂ ಮೂರು ಗ್ರಂಥಿಯ ಬಿಗಿದಳಾಗ ೯

ಸಿರಿಯೆ ಈ ಚಾತುರ್ಯ ಪರಿ ಏನು ಪೇಳೆಂದು
ಸರಸದಲಿ ಹರಿ ಕೇಳೆ ಹರಿಣಾಕ್ಷಿಯು
ಪರಮ ಪುರುಷನೆ ನೀನು ಅರಿಯದಿನ್ನುಂಟೆ ಕೇಳ್
ಸರಸವಾಣಿಯಲಿ ಪೇಳ್ವೆನು ದೇವ ದೇವ ೧೦

ಒಂದು ಮುಕ್ತಿಯ ಗ್ರಂಥಿ ಒಂದು ಕರ್ಮದ ಗ್ರಂಥಿ
ಒಂದು ಅಜ್ಞಾನ ನಿನ್ನ ಬಂಧಕರ ಗ್ರಂಥಿ
ಇಂದಿರೇಶನೆ ಇದರ ಗುಟ್ಟು ಅರುಹುವೆ ಕೇಳು
ಒಂದೊಂದು ವಿವರಗಳ ವಂದ್ಯ ಬ್ರಹ್ಮಾದಿ ೧೧

ಕರ್ಮಗ್ರಂಥಿಯು ಬ್ರಾಹ್ಮಣರ ಯಜ್ಞದುಪವೀತ
ಕರ್ಮ ಬಿಡುಗಡೆ ಇದು ಯತಿರತ್ನಗಳಿಗೆ
ನಿಮ್ಮ ಬಂಧಕರ ಗ್ರಂಥಿ ಅಜ್ಞಾನಿ ಹೃದಯಕ್ಕೆ
ನಿಮ್ಮ ಕೃಪೆಯಿಂದ ಬಿಡುಗಡೆ ಕೇಳು ಜೀವರಿಗೆ ೧೨

ಮುಕ್ತರಿಗೆ ಸಂಸಾರ ಮತ್ತೆ ಬರದಂದದಲಿ
ಕತ್ತರಿಸಿ ಲಿಂಗವನು ಕಾಯ್ದು ನಾನು
ಚಿತ್ತಜಾಪಿತನೆ ನಿನ್ನಸ್ತಕೊಪ್ಪಿಸಿ ಬಿಗಿದು
ಸುತ್ತಿ ಕಗ್ಗಂಟು ಹಾಕಿರುವೆ ನೀ ಗ್ರಂಥಿ ೧೩

ಬಿಚ್ಚಲಾರೆಯೊ ನೀನು ಬಿಚ್ಚಲಾರೆನೊ ನಾನು
ಬಿಚ್ಚಿಕೊಳಲಾರರೊ ಮುಕ್ತ ಜನರು
ಅಚ್ಯುತನೆ ಇದೆ ನಿನಗೆ ಹೆಚ್ಚಿನಾ ಬಿರುದು ನಾ
ಮೆಚ್ಚಿ ಕಟ್ಟಿರುವೆ ನೀ ಗ್ರಂಥಿ ಕಂಕಣವ ೧೪

ಎರಡು ಗ್ರಂಥಿಯ ತೊಡಕು ಹರಿದು ಭಕ್ತರ ಕಾಯ್ದು
ಪರಮ ಆನಂದ ಮುಕ್ತರಿಗೆ ಶರೆ ಮಾಡಿ
ಮೆರೆಯೊ ಶರಣಾಗತರ ರಕ್ಷಕನೆ ಎಂದೆನುತ
ಹರಸಿ ಸಿರಿ ಮುತ್ತಿನಾರತಿಯನೆತ್ತಿದಳು ೧೫

ಸಿರಿಹರಿಯ ಏಕಾಂತ ಸರಸ ವಚನಗಳಿದನು
ಅರಿತವರು ಯಾರೆಂಬ ಅನುಮಾನ ಬೇಡಿ
ಹರಿಶಯನನಾದವನು ಅರಿತು ಧೈರ್ಯದಿ ಜಗದಿ
ಹರಹಿದುದ ಸಜ್ಜನರು ಅರಿತು ಆನಂದಿಸಲಿ ೧೬

ಸಿರಿ ಒಲಿಯೆ ಶ್ರೀಹರಿಯು ತ್ವರಿತದಲಿ ಒಲಿಯುವನು
ಮರುತ ಒಲಿಯಲು ಸಿರಿಯು ತಾ ಒಲಿವಳು
ಗುರುವು ಒಲಿಯಲು ಮರುತ ಮರುಕ್ಷಣದಿ ಒಲಿಯುವನು
ಅರಿವುದಿದರಿಂ ಗುರುವ ಒಲಿಮೆ ಅಧಿಕೆಂದು ೧೭

ಪರಮ ಸುಜ್ಞಾನದಿಂದರಿತು ತತ್ವಾರ್ಥಗಳ
ಶರಣ ನಾ ನಿನಗೆನಲು ವಾತ್ಸಲ್ಯದಿ
ಸಿರಿಯರಸ ತನ್ನಭಯ ಹಸ್ತ ಶಿರದಲಿಟ್ಟು
ಶರಣರನು ಪಾಲಿಸುವ ಮುಕ್ತಿ ಪದವಿಯನಿತ್ತು ೧೮

ಹರಿಸಿರಿಯ ಲೀಲೆಗಳ ಗುರುಕರುಣ ಬಲದಿಂದ
ಅರುಹಿದ ಮಹಿಮೆ ಧರೆಯಲ್ಲಿ ಮೆರೆದು
ಪರಮ ಮಂಗಳ ಕೊಡಲಿ ನಿರುತ ಸದ್ಭಕ್ತರಿಗೆ
ಕರುಣಾಳು ಗೋಪಾಲಕೃಷ್ಣವಿಠ್ಠಲನ ದಯದಿ ೧೯

## ೯೬

ಕಾಯಬೇಕೆನ್ನ ಲಕುಮಿ । ಕಮಲಾಯತಾಕ್ಷಿ
ಕಾಯಬೇಕೆನ್ನ ಲಕುಮಿ ಪ.

ಕಾಯಬೇಕೆನ್ನ ನೋಯುವೆ ಭವದಲಿ
ಕಾಯಜಪಿತನನು ಕಾಯದಿ ತೋರಿ ಅ.ಪ.

ಕ್ಷೀರವಾರಿಧಿ ತನಯೆ । ಶ್ರೀ ಹರಿಯ ಜಾಯೆ
ಪಾರುಗಾಣಿಸೆ ಜನನಿಯೆ
ತೋರೆ ನಿನ್ನ ಪತಿಯ ಪಾದವ ಮನದೊಳು
ಸೇರಿಸೆ ಸುಜನರ ಸಂಗದೊಳೀಗ ೧

ಮುಕ್ತಿದಾಯಕಿ ಸಿರಿಯೆ । ನೀ ಎನ್ನ ಕಾಯೆ
ಮುಕ್ತಿಮಾರ್ಗವ ನೀನೀಯೆ
ಶಕ್ತಿರೂಪೆ ನಿನ್ನ ಭಕ್ತಿಲಿ ಭಜಿಸುವೆ
ಮುಕ್ತರೊಡೆಯನೊಳು ಭಕ್ತಿಯ ನೀಡೆ ೨

ಅಷ್ಟಭುಜದ ಶಕ್ತಿಯೆ । ಶ್ರೀ ಭೂಮಿ ದುರ್ಗೆ
ಅಷ್ಟ ಐಶ್ವರ್ಯದಾಯಿನಿಯೆ
ಶ್ರೇಷ್ಠ ಶ್ರೀಗೋಪಾಲಕೃಷ್ಣವಿಠ್ಠಲನೊಳು
ಪಟ್ಟವಾಳ್ವೆ ಜಗಸೃಷ್ಟಿ ಪ್ರಳಯದಿ ೩

## ೯೭

ಜಯ ಮಂಗಳಂ ನಿತ್ಯ ಶುಭ ಮಂಗಳಂ ಪ.

ದಯದಿ ಭಕ್ತರ ಪೊರೆವ ಮಹಲಕ್ಷ್ಮಿಗೆ ಅ.ಪ.

ಪ್ರಳಯ ಕಾಲದಲಿ ಆಲದೆಲೆಯಾಗಿ ಹರಿಗೆ ತಾ
ಪ್ರಳಯೋದಕದಲಿ ಸೇವೆ ಮಾಳ್ಪಳಿಗೆ

ಲಲನೆ ಶ್ರೀ ಭೂದುರ್ಗ ಚಲುವೆ ರೂಪತ್ರಯದಿ
ಒಲುಮೆಯಿಂದಲಿ ಹರಿಯ ಒಲಿಸುವಳಿಗೆ ೧

ದೇವತೆಗಳಿಂದಲಿ ಸೇವೆ ಕೊಳುತಿರುವಳಿಗೆ
ಪಾವಿತ್ರರೂಪಳಿಗೆ ಪರಮಾತ್ಮ ಸತಿಗೆ
ಜೀವೇಶ ಬೇಧವೆಂತೆಂಬೊ ಭಕ್ತರ ಪೊರೆವ
ಶ್ರೀವರನ ಉರದಲ್ಲಿ ಮೆರೆಯುವಳಿಗೆ ೨

ಪಾಪಗಳ ಸುಟ್ಟು ಭವ ಕೂಪದಿಂ ಪೊರೆವಳಿಗೆ
ತಾ ಪಿತನ ಮಂದಿರದಿ ಪತಿಯೊಡನೆ ನೆಲಸಿ
ಗೋಪಾಲಕೃಷ್ಣವಿಠ್ಠಲನ ಸೇವಿಸುತಲಿ
ಅಪಾರ ಜೀವರಿಗೆ ಮುಕ್ತಿ ಕೊಡುವಳಿಗೆ

## ೯೮

ದುರ್ಗೆ ಪಾಲಿಸೆ ಕರುಣದಿ । ಮಹಾ ಲಕುಮಿ
ದುರ್ಗೆ ಪಾಲಿಸೆ ಕರುಣದಿ ಪ.

ದುರ್ಗೆ ಪಾಲಿಸೆ ಅಪವರ್ಗ ಪದವಿ ಇತ್ತು
ದುರ್ಗಮವಾಗಿಹ ದುಃಖವ ಬಿಡಿಸಿ
ಭಾರ್ಗವಿರಮಣನ ಮಾರ್ಗವ ತೋರೆ
ಘೋರ್ಗರೆಯುತ ಖಳರ ನಿಗ್ರಹಿಸುವಳೆ ಅ.ಪ.

ಕ್ಷೀರವಾರಿಧಿ ತನಯೆ । ಶ್ರೀ ರಮಣನ ಜಾಯೆ
ನಾರಸಿಂಹನ ಅರಸಿಯೆ
ಸಾರಿದೆ ನಿನ ಪದ ತೋರಿಸೆ ಹರಿಪದ
ಕಾರುಣ್ಯಾತ್ಮಳೆ ಕರುಣವ ಬೀರೆ
ವಾರವಾರಕೆ ನಿನ್ನ ಆರಾಧಿಸುವಂಥ
ಚಾರುಮತಿಯ ನೀಡೆ ನಾರಿರನ್ನಳೆ ೧

ಪದ್ಮಾವತಿಯೆ ಪದ್ಮಿನಿ । ಪದ್ಮಾಕ್ಷಿದೇವಿ
ಪದ್ಮಸಂಭವೆ ಕಾಮಿನಿ
ಪದ್ಮನಾಭ ಶ್ರೀ ಶ್ರೀನಿವಾಸನ
ಪದ್ಮಪಾದವ ಹೃತ್ಪದ್ಮದಿ ತೋರೆ
ಪದ್ಮಸರೋವರ ತೀರವಾಸಿ ಕರ
ಪದ್ಮಯುತಳೆ ಮುಖಪದ್ಮವ ತೋರೆ ೨

ರೂಪತ್ರಯಳೆ ಕಾಮಿನಿ । ಕಾಮಪೂರಿಣೀ
ತಾಪಹರಿಸೆ ಭಾಮಿನಿ
ಪಾಪಗಳೆಲ್ಲವ ನೀ ಪರಿಹರಿಸುತ
ಗೋಪಾಲಕೃಷ್ಣವಿಠ್ಠಲನನು ತೋರುತ ನೀ
ಕೃಪೆಗೈಯ್ಯೆಂದೀ ಪರಿ ನುಡಿವೆನೆ
ನೀ ಪಾಲಿಸುವುದು ಅಪವರ್ಗದಲಿ ೩

## ೯೯

ನೋಡಿದೆನೆ ನಿನ್ನ ಪಾದ ಮಾಡಿದೆನೆ ಸಾಷ್ಟಾಂಗ
ಬೇಡಿದೆನೆ ಮನದಭೀಷ್ಟ ಪ.

ನೀಡು ಕೊಲ್ಲಾಪುರದ ನಾಡಿಗೊಡೆಯಳೆ ಲಕುಮಿ
ಮಾಡಮ್ಮ ಕೃಪೆಯ ಬೇಗಾ ಈಗಾ ಅ.ಪ.

ಬಂದೆನೇ ಬಹುದೂರ ನಿಂದೆನೇ ತವಪದ
ದ್ವಂದ್ವ ಸನ್ನಿಧಿಯಲೀಗ
ವಂದನರಿಯೆನೆ ನಿನ್ನ ಚಂದದಿ ಸ್ತುತಿಪೊದಕೆ
ಮಂದಮತಿಯಾಗಿಪ್ಪೆನೇ
ತಂದೆ ಮುದ್ದುಮೋಹನ್ನ ಗುರು ಕರುಣ ಬಲದಿಂದ
ಇಂದು ನಿನ್ನನು ಕಂಡೆನೇ
ಮುಂದೆನ್ನ ಮಾನಾಭಿಮಾನ ನಿನಗೊಪ್ಪಿಸಿದೆ
ಸಿಂಧುಸುತೆ ಪಾಲಿಸಮ್ಮಾ ದಯದೀ ೧

ಉತ್ತರಾಯಣ ಪುಣ್ಯ ದಿನದಿ ನಿನ್ನನು ಕಂಡೆ
ಮುಕ್ತರಾಧೀಶೆ ಕಾಯೆ
ಉತ್ತಮಾಭರಣ ನವರತ್ನ ಪದಕವು ದಿವ್ಯ
ನತ್ತು ಧರಿಸಿದ ಚಲ್ವಳೇ
ಮುತ್ತೈದೆಯರು ಮತ್ತೆ ಭಕ್ತ ಸಂದಣಿ ಇಲ್ಲಿ
ಎತ್ತನೋಡಲು ಕಂಡೆನೇ
ಸತ್ಯ ಸಂಕಲ್ಪ ಶ್ರೀ ಹರಿಯ ಪಟ್ಟದ ರಾಣಿ
ಚಿತ್ತಕ್ಕೆ ತಂದು ಕಾಯೆ ಮಾಯೆ ೨

ರೂಪತ್ರಯಳೆ ನಿನ್ನ ವ್ಯಾಪಾರ ತಿಳಿಯಲು
ಆ ಪದ್ಮಭವಗಸದಳಾ
ಶ್ರೀಪತಿಯ ಕೃಪೆ ಯಿಂದ ಸೃಷ್ಟಿಸ್ಥಿತಿಲಯಗಳನು
ವ್ಯಾಪಾರ ಮಾಳ್ಪ ಧೀರೆ
ಕೃಪೆಯ ನೀ ಮಾಡದಲೆ ಉಭಯ ಸುಖವೆತ್ತಣದು
ಭೋಪರೀ ನಂಬಿದರಿಗೆ
ಗೋಪಾಲಕೃಷ್ಣವಿಠ್ಠಲನ ಹೃದಯದಿ ತೋರಿ
ನೀ ಪಾರುಗೊಳಿಸೆ ಭವದೀ ದಯದೀ ೩

## ೧೦೦

## ಉಗಾಭೋಗ

ಪದ್ಮಾಲಯೆ ಪದ್ಮೆ ಪದ್ಮ ಸಂಭವೆ ಲಕುಮಿ
ಪದ್ಮಾಕ್ಷಿ ಪದ್ಮ ಹಸ್ತೆ ಪದ್ಮಾಸನನ ಜನನಿ
ಪದ್ಮಮುಖಿಯೆ ನಿನ್ನ ಪದಪದ್ಮ ಧ್ಯಾನ ನೀಡೆ
ಪದ್ಮನಾಭನ ಹೃದಯ ಪದ್ಮಸದನ ನಿಲಯೆ
ಪದ್ಮಿನಿ ಎನ್ನ ಹೃದಯ ಪದ್ಮ ಮಧ್ಯದಿ ಸತತ
ಪದ್ಮಾಕ್ಷ ಗೋಪಾಲಕೃಷ್ಣವಿಠಲನ ಪದ
ಪದ್ಮದ್ವಯವ ತೋರಿ ಉದ್ಧಾರವನು ಮಾಡೆ

## ೧೦೧

ಬೇಗನೆ ಪಾಲಿಸೆ ಸಾಗರಸುತೆ ನಿನ್ನ
ಈಗ ಪೂಜಿಸುವೆನೆ ನಾಗಶಯನನ ರಾಣಿ ಪ.

ಅಂದುಗೆ ಕಿರುಗೆಜ್ಜೆ ಅಂದದ ಪಿಲ್ಲೆನಿಟ್ಟು
ಚಂದದ ಪಾದಪದ್ಮ ಇಂದು ತೋರಿ ಕಾಯೆ ೧

ಜರಿಯು ಪೀತಾಂಬರ ನೆರಿಗೆ ವೈಭವಗಳು
ಕಿರುಗೆಜ್ಜೆ ವಡ್ಯಾಣ ಹರಿಯಂತೆ ನಡುವು ೨

ಒಪ್ಪದಿಂದಲಿ ಜರಿ ಕುಪ್ಪಸವನೆ ತೊಟ್ಟು
ಸರ್ಪಶಯನನಿಗೆ ಒಪ್ಪಿಹ ಸತಿಯೆ ೩

ಹಾರಪದಕಗಳು ಭಾರ ಕುಚದಲಿ ಮೆರೆಯೆ
ನಾರಸಿಂಹನ ರಾಣೀ ತೋರೆ ಕರುಣವ ೪

ಮೆರೆವ ಮಂಗಳಸೂತ್ರ ಕರದಿ ಕಂಕಣಗಳು
ವರ ವಜ್ರದುಂಗುರ ಧರಿಸಿ ಮೆರೆಯುವಳೆ ೫

ನಾಗಮುರಿಗೆಯನಿಟ್ಟು ಭೋಗಿಶಯನನ ರಾಣಿ
ಮೂಗುತಿ ಮುರವು ಮುಗುಳು ನಗೆಯವಳೆ ೬

ಹೊಳೆವ ದಾಳಿಂಬ್ರದಂತೆ ಒಲಿವ ಬುಲಾಕು
ಥಳಥಳಿಪೊ ಗಲ್ಲ ಕರ್ಣಭೂಷಣ ೭

ಸುರರ ಪಾಲಿಪ ದೃಷ್ಟಿ ವರ ನಯನಗಳು
ಅರೆಚಂದ್ರ ಪೋಲುವ ಫಣೆ ತಿಲುಕವು ೮

ಹೆರಳು ಬಂಗಾರದ ಧರಿಸಿ ಶಿರೋರತ್ನ
ವರ ಕುಸುಮಂಗಳ ಧರಿಸಿಹ ಚಲುವೆ ೯

ಶಿರದಿ ಕಿರೀಟವು ಸರ್ವಾಂಗ ಸುಂದರಿ
ಪರಮಾತ್ಮ ಸಹಿತದಿ ಉರದಲಿ ತೋರೆ ೧೦

ಸೃಷ್ಟೀಶ ಗೋಪಾಲಕೃಷ್ಣವಿಠ್ಠಲನೊಳು
ಶ್ರೇಷ್ಠ ಭಕ್ತಿಯ ನೀಡೆ ಕೃಷ್ಣನ ಸತಿಯೆ ೧೧

## ೧೦೨

ಮುದ್ದು ಮುಖದ ಲಕುಮಿ ಎನಗೆ
ಶುದ್ಧ ಜ್ಞಾನವ ನೀಡೆ ಪ.

ಬಿದ್ದಿಹೆ ನಿನ್ನ ಪದದಲಿ ನಿರುತ
ಮದ್ಬಿಂಬನ ತೋರೆ ಅ.ಪ.

ಹರಿಸರ್ವೋತ್ತಮ ಸುರರಕ್ಷಕನೆಂಬ
ಖರೆಯ ಜ್ಞಾನವ ನೀಡೆ
ಕರಕರೆಗೊಳಿಸದೆ ದುರ್ವಿಷಯದಲೆನ್ನ
ಹರಿಯ ಧ್ಯಾನವನೀಡೆ ೧

ನಗೆಮೊಗ ಚಲುವೆ ಖಗವಾಹನ ಪ್ರಿಯೆ
ಜಗದೊಡೆಯನ ತೋರೆ
ನಗಧರನ ನಿತ್ಯ ಬಗೆ ಬಗೆ ಲೀಲೆಯ
ಸುಗುಣವಂತೆ ತಿಳಿಸೆ ೨

ಸೃಷ್ಟಿಕರ್ತಗೆ ಪಟ್ಟದ ನಾರಿಯೆ
ದೃಷ್ಟ ಇಂದ್ರಿಯವಳಿಯೆ
ಮುಟ್ಟಿ ಭಜಿಪೆ ನಿನ್ನ
ಶ್ರೇಷ್ಠ ಶ್ರೀ ಗೋಪಾಲಕೃಷ್ಣವಿಠ್ಠಲ ಸತಿಯೆ ೩

# ೧೦೩

ಮಂಗಳಂ ಶ್ರೀ ಮಾಯಾ ಜಯಕೃತಿಗೆ
ಮಂಗಳಂ ಶಾಂತಿ ಸ್ವರೂಪಳಿಗೆ
ಮಂಗಳಂ ಭಕ್ತರ ಕಂಗಳಿಂದಲಿ ನೋಡಿ
ರಂಗನ ಪಾದವ ತೋರ್ವಳಿಗೆ ಪ.

ಮಂಗಳಂ ಜಯ ಮಂಗಳಂ ಅ.ಪ.

ಅಲ್ಲಿ ವೈಕುಂಠದೊಳಗೆ ಇರಲು
ಬಲ್ಲಿದ ಭೃಗು ಋಷಿ ತಾ ಬರಲು
ವಲ್ಲಭನ ವಕ್ಷಸ್ಥಳ ಒದೆಯಲು ಹರಿ
ಸೊಲ್ಲು ಕೇಳದೆ ಓಡಿ ಬಂದಳಿಗೆ ೧

ಕೊಲ್ಲಾಪುರದಲಿ ನಿಂದಳಿಗೆ
ಎಲ್ಲರಭೀಷ್ಟವ ಸಲಿಪಳಿಗೆ
ಖುಲ್ಲರ ಮರ್ಧಿಪ ಹರಿಯ ವಕ್ಷಸ್ಥಳ
ದಲ್ಲಿ ಸದಾ ನೆಲಸಿರ್ಪಳಿಗೆ ೨

ಶ್ರೀ ಜಯದೇವಿಗೆ ಶ್ರೀ ಲಕ್ಷ್ಮಿಗೆ
ಶ್ರೀ ರುಕ್ಮಿಣೀ ಸತ್ಯಭಾಮಳಿಗೆ
ಶ್ರೀ ಪದ್ಮಾವತಿ ನಾಮಕ
ನಾನಾರೂಪ ಗುಣಾನ್ವಿತೆಗೆ ೩

ಮುಕ್ತಾಮುಕ್ತರಿಗೊಡೆಯಳಿಗೆ
ಮುಕ್ತಿಯ ಭಕ್ತರಿಗೀವಳಿಗೆ
ಮುಕ್ತಳೆನಿಸಿ ಮುಕ್ತಾಶ್ರಯನಿಗೆ ಆ-
ಸಕ್ತಿಯಿಂದ ಸೇವೆ ಮಾಳ್ಪಳಿಗೆ ೪

ಗೋಪಾಲಕೃಷ್ಣವಿಠ್ಠಲನ
ಆಪಾದ ಮೌಳಿಯ ಗುಣಗಳನು
ತಾ ಪರಿಪರಿಯಿಂದ ವರ್ಣಿಸುತ್ತಿದ್ದರು
ಅಪಾರವಾಗಿಯೆ ಕಾಂಬಳಿಗೆ ೫

## ವಾಯುದೇವರು

## ೧೦೪

ಇದು ಏನು ಕೌತುಕವೊ ಹನುಮರಾಯ
ಪದುಮನಾಭನ ದಯಾಪಾತ್ರ ಶುಭಕಾಯ ಪ.

ಅಂಜನೆಯ ಸುತನಾಗಿ ಅಂದು ಶ್ರೀ ರಾಮರಡಿ
ಕಂಜಗಳ ಸೇವಿಸುತ ಮುದ್ರಿಕೆಯನು
ಕಂಜಾಕ್ಷಿಗಿತ್ತು ಕ್ಷೇಮವನರುಹಿ ಬಂದಾಗ
ಸಂಜೀವ ನಿನಗಿಷ್ಟು ತೊಡಿಗೆ ಕೊಟ್ಟಳೆ ದೇವಿ ೧

ಮರುವಾರ್ತೆ ತಂದು ರಾಮಗರುಹಿ ಸೇತುವೆಯ
ಗಿರಿಯಿಂದ ಕಟ್ಟಿ ಕಾರ್ಯವ ಸಾಧಿಸೆ
ಸಿರಿಸಹಿತ ಶ್ರೀ ರಾಮ ರಾಜ್ಯಕೆ ಬಂದಾಗ
ಮರುತ ನಿನಗಿಷ್ಟು ಆಭರಣ ಕೊಟ್ಟನೆ ಪೇಳು ೨

ಎಲ್ಲೆಲ್ಲಿ ನಿನ್ನ ಕೀರ್ತಿಯ ಕೇಳೆ ಕೌಪೀನ
ವಲ್ಲದಲೆ ಮತ್ತೊಂದರ್ಥಂಬಲಿಲ್ಲ
ಮಲ್ಲ ವೈರಾಗ್ಯದಲಿ ಎಂಬುದನು ಕೇಳಿದೆನು
ಇಲ್ಲಿ ನೋಡಲು ಇಷ್ಟು ವೈಭವವ ಪಡುತಿರುವೆ ೩

ರಾತ್ರೆಯಲಿ ಕೀಚಕನ ಕೊಲ್ಲಲೋಸುಗ ಅಂದು
ಮಿತ್ರೆ ರೂಪವ ಧರಿಸಿ ಶೃಂಗರಿಸಿಕೊಂಡು
ಕತ್ತಲೊಳು ನೋಡಿಕೊಳ್ಳಲು ಆಗಲಿಲ್ಲೆಂದು
ಹಸ್ತ ಕಡಗ ಹರಡಿ ಇಟ್ಟು ಮೆರೆಯುವೆಯೊ ೪

ಹುಟ್ಟುತಲೆ ಸಂನ್ಯಾಸ ತೊಟ್ಟು ಬ್ಯಾಸತ್ತೊ ನಡು
ಪಟ್ಟಿ ಉಡುದಾರ ಉಡುಗೆಜ್ಜೆ ಕಾಲ್ಗಡಗ
ಇಟ್ಟು ನಾನಾ ಬಗೆ ಕದರುಂಡಲಿಯಲಿ ನೆಲಸಿ
ಶ್ರೇಷ್ಠ ಗೋಪಾಲಕೃಷ್ಣವಿಠ್ಠಲನ ಪ್ರಿಯನಾದಿ ೫

## ೧೦೫

ಕರುಣದಿ ಕಾಯಬೇಕಿನ್ನು ಪ್ರಾಣೇಶ
ಅರಿಯೆನೊ ಅನ್ಯರ ಜಗದ್ವಾಸ ಪ.

ಪರಿಪರಿ ಬವಣೆಯ ಪರಿಹಾರಗೈಸುತ
ತ್ವರಿತದಿ ಸಲಹೊ ಭಾರತಿಗೀಶ ಅ.ಪ.

ಅನ್ನವಸನಗಳಿಗೆ ಅಲ್ಪರ ತೆರದೊಳು
ಬನ್ನಬಡುತಲಿರಲು
ನಿನ್ನ ಪಾದವ ನಂಬಿ ನೀ ಗತಿ ಎನುತಿರೆ
ಮನ್ನಿಸಿದ ಮಹಿಮ ನಿಸ್ಸೀಮ ೧

ಮನದಿ ಬಹುನೊಂದು ನಿನ್ನ ಘನತೇನೆಂದು
ಅನುದಿನ ಕಾಯೊ ಎಂದು
ಎನುತಿರೆ ಸ್ವಪ್ನದಿ ಹನುಮ ನಿನ್ನಭಯ ಹಸ್ತ
ವನೆ ಶಿರದಿ ಇಟ್ಟೆ ಶ್ರೇಷ್ಠನೆ ೨

ಉಭಯ ಹಸ್ತವು ಎನ್ನ ಶಿರದ ಮ್ಯಾಲಿಡುತಲಿ
ಅಭಯ ಕೊಡುತಲಿರಲು
ನಿರ್ಭಯದಿಂದ ನಾ ನಿನ್ನ ಭಜಿಪೆನಯ್ಯ
ಶುಭಗುಣನಿಲಯ ಜೀಯಾ ೩

ಹನುಮ ಭೀಮಾನಂದ ಮುನಿಯಾಗಿ ಜಗದಲಿ
ಹನನಗೈಯುತ ದನುಜರ

ವನಜಾಕ್ಷ ಹರಿಯನು ಘನವಾಗಿ ಸೇವಿಸಿ
ಅನುದಿನದಲಿ ಕಾಯ್ವೆ ಸುಜನರ ೪

ಶ್ವಾಸಜಪವ ಮಾಡಿ ರಾಶಿ ಜೀವರ ಕಾಯ್ವೆ
ಶ್ವಾಸ ನಿಯಾಮಕನೆ
ಶ್ರೀಶ ಶ್ರೀ ಗೋಪಾಲಕೃಷ್ಣವಿಠ್ಠಲನಿಗೆ
ಕೂಸು ಎಂದೆನಿಸಿರುವೆ ನೀ ಕಾವೆ ೫

## ೧೦೬

ಕುಲವ್ಯಾವುದಯ್ಯ ಕಪಿಕುಲನೆ ನಿನಗೆ
ಒಲಿದಿಹನು ಹರಿ ನಿನಗೆ ಎಂದು ಜನ ನುತಿಸುವರು ಪ.

ಮರ ಹಾರುವಂಥ ಮರ್ಕಟಕುಲದಲವತರಿಸಿ
ಶರಧಿ ಲಂಘಿಸುತ ದ್ವೀಪಾಂತರವಾಸಿ
ದುರುಳರನು ಸಂಹರಿಸಿ ದೊರೆ ಸುತರ ಸೇವಿಸಿ
ಕರದಿ ಎಂಜಲು ಕೊಂಡು ಮರವನೇರಿದನೆ ೧

ಪ್ರಥಮ ಕುಲವನೆ ಬಿಟ್ಟು ದ್ವಿತೀಯ ಕುಲದೊಳಗುದಿಸಿ
ಹಿತವೆ ರಕ್ಕಸಿ ಸಂಗ ಪಥದಿ ನಿನಗೆ
ದಿತಿಜನಾಹುತಿ ಅನ್ನ ಗತಿಯಿಲ್ಲದಲೆ ತಿಂದು
ಚತುರ ಕುಲಜನ ನೀ ನುತಿಸಿ ಹಿಗ್ಗಿದನೆ ೨

ತುಳುವಂಶಜನೆ ನೀ ಲಲನೆ ಸಂಗವ ತೊರೆದು
ಅಲೆದೆ ಯತಿಯಾಗಿ ಈ ಇಳೆ ಎಲ್ಲವ
ಕುಲನ್ಯೂನ ಗೋಪಾಲಕೃಷ್ಣವಿಠ್ಠಲನ ಪದವ
ಒಲಿಸಲೋಡಿದೆ ಆರು ಬರದಂಥ ಗಿರಿಗೆ ೩

## ೧೦೭

ಜಯ ಮಂಗಳಂ ನಿತ್ಯ ಶುಭ ಮಂಗಳಂ ಪ.

ಲಯ ರಹಿತ ಹರಿಯ ಪ್ರಿಯ ನಾದ ಮೂರುತಿಗೆ ಅ.ಪ.

ಜೀವರಾಧಾರನಿಗೆ ಜೀವರೊಳಗುತ್ತಮಗೆ
ಜೀವರೊಳು ವ್ಯಾಪ್ತಗೆ ಜೀವೇಶಗೆ
ಜೀವರೊಳು ಹಂಸ ಜಪ ಸಾವಧಾನದಿ ಜಪಿಸಿ
ಜೀವರಿಗೆ ತ್ರಿವಿಧ ಗತಿ ಈವ ಮಾರುತಿಗೆ ೧

ಶ್ರೀನಿವಾಸನಿಗೆ ಬಹು ಪ್ರೇಮನೆಂದೆನಿಸಿದಗೆ
ಜ್ಞಾನಪೂರ್ಣನಿಗೆ ಅಜಪದವಿಗರ್ಹನಿಗೆ
ಶ್ರೀನಿಕೇತನನ ಸರ್ವತ್ರದಲಿ ಕಾಣುತಿಹ
ಭಾನುಪ್ರಕಾಶ ಸುಜ್ಞಾನಪೂರ್ಣನಿಗೆ ೨

ತ್ರೇತೆಯೊಳಗವತರಿಸಿ ಸೀತೆಗುಂಗುರವಿತ್ತು
ವಾತಸಖನಿಗೆ ವನವ ಉಣಲಿತ್ತಗೆ
ಪಾತಕಿಗಳಾದ ಕುರುವಂಶವನೆ ಛೇದಿಸುತ
ಪ್ರೀತಿಯಿಂದಲಿ ಕೃಷ್ಣನಂಘ್ರಿ ಭಜಿಸಿದಗೆ ೩

ಮಾಯವಾದಿಗಳನು ಮರ್ಧಿಸಲಿಬೇಕೆಂದು
ವಾಯುವೇ ಮಧ್ವಮುನಿಯಾಗಿ ಜನಿಸಿದಗೆ
ರಾಯರು ಶ್ರೀಪಾದ ಜಯತೀರ್ಥ ವ್ಯಾಸರಿಗೆಲ್ಲ
ಪ್ರಿಯನೆಂದೆನಿಸಿ ಹರಿ ಸರ್ವೋತ್ತಮನೆನಿಸದಗೆ ೪

ಶುದ್ಧ ಸಾತ್ವಿಕರಿಗೆ ಶುದ್ಧ ಜ್ಞಾನವನಿತ್ತು
ಮಧ್ವಮುನಿ ಎನಿಸಿದಗೆ ಮಧುವೈರಿ ಪ್ರಿಯಗೆ
ಅದ್ವೈತ ಅನಲನಿಗೆ ಗೋಪಾಲಕೃಷ್ಣವಿಠ್ಠಲ
ಶುದ್ಧ ಮೂರುತಿ ಎಂದು ಸಾರುವನಿಗೆ ೫

## ೧೦೮

ತೆಪ್ಪದುತ್ಸವ ನಿನಗೆ ಏನು ಹಿತವೋ
ಅಪ್ಪ ಹನುಮಯ್ಯ ನಿನ್ನಾಟಕೇನೆಂತೆಂಬೆ ಪ.

ರಾಮ ಉಂಗುರ ಸತಿಗೆ ಕಂಡಿತ್ತು ಬಾರೆನಲು
ನೇಮದಿಂದಲಿ ನೂರು ಯೋಜನುದಧಿ
ಪ್ರೇಮದಿಂದಲಿ ಹಾರಿ ಕುರುಹು ತಂದಾ ಮಹಿಮ
ಈ ಮಡುವಿನ ಜಲದಿ ಈ ಆಟವಾಡುವುದು ೧

ಕುರುಕುಲಾರ್ಣವವೆಂಬ ಘನ ಶತ್ರು ಸೈನ್ಯವನು
ಒರಸಿ ಕ್ಷಣದಲಿ ಭುಜಬಲದ ಶೌರ್ಯದಲಿ
ಧುರವೆಂಬ ಶರಧಿಯನು ಲೀಲೆಯಲಿ ದಾಟಿದಗೆ
ವರ ಸರೋವರದ ಈ ಜಲದಾಟವಾಡುವುದು ೨

ಅನ್ಯ ದುರ್ಮತ ಮಹಾರ್ಣವನು ಶೋಷಿಸುತ ಬಹು
ಉನ್ನತದ ವೇದ ಶಾಸ್ತ್ರಾರ್ಣವದಲಿ
ಚೆನ್ನಾಗಿ ಈಜಿ ಶ್ರೀ ಹರಿಚರಣ ದಡ ಸೇರ್ದ
ಘನ್ನ ಮಹಿಮನಿಗೆ ಈ ಚಿನ್ನ ಮಡುವೀಜುವುದು ೩

ಮುಕ್ತಿಯೊಗ್ಯರ ಕರ್ಮಶರಧಿಯನು ದಾಟಿಸುತ
ಮುಕ್ತರಾಶ್ರನ ಪುರ ಸೇರಿಸುವನೆ
ಅತ್ಯಂತ ಅಲ್ಪ ಈ ಜಲದಾಟವಾಡಿದರೆ
ಭಕ್ತರಾದಂತ ದಾಸರು ನಗರೆ ಹನುಮ ೪

ವರ ಕದರುಂಡಲಿಯಲ್ಲಿ ನೆಲಸಿರುವ ಭಕ್ತರಿಗೆ
ಮರುಳುಗೊಳಿಸುತ ಮಹಾ ಮಹಿಮನೆನಿಸಿ
ಪರಿಪರಿಯ ಉತ್ಸವಪಡುವೆ ಶ್ರೀ ಕಾಂತೇಶ
ಸಿರಿರಮಣ ಗೋಪಾಲಕೃಷ್ಣವಿಠ್ಠಲನ ದಾಸ ೫

## ೧೦೯

ನಂಬಿದೆನೊ ನಿನ್ನ ಪಾದ । ಜಯ ಮುಖ್ಯ ಪ್ರಾಣ
ಬೆಂಬಿಡದೆ ಬಹು ಮೋದ । ತೀರ್ಥಾರ್ಯ ಎನ್ನ
ಹಂಬಲಿಗೆ ಕೊಡೊ ಭೇದ । ಅರ್ಥಗಳ ವಾದ ಪ.

ನಂಬಿದೆನೊ ನಿನ್ನ ಪಾದ ಹೃದಯ
ಅಂಬರದೊಳು ನಿತ್ಯ ಹರಿಯ
ಬಿಂಬ ತೋರಿಸಿ ಎನ್ನ ಭವದ
ಅಂಬುಧಿ ಕಡೆ ಮಾಡು ವೇಗದಿ ಅ.ಪ.

ನೂರ ತೊಂಭತ್ತಷ್ಟ । ಕಲ್ಪದಲಿ ಹರಿಯ
ಆರಾಧಿಸಿದೆಯೊ ಶ್ರೇಷ್ಠ । ಅಲ್ಲಿಂದ ಮುಂದೆ ಸ-
ಮೀರ ಪದಕೆ ದಿಟ್ಟ । ಬಂದೆಯೊ ಉತ್ಕೃಷ್ಟ
ನಾರಸಿಂಹನ ಪಾದ ಭಜಿಸಿ
ಮೂರು ಅವತಾರವನೆ ಧರಿಸಿ
ವೀರ ಕಪಿರೂಪದಲಿ ರಾಮರ
ವಾರಿಜಾಂಘ್ರಿಯ ಭಜಿಸಿ ೧

ಭುಜ ಪರಾಕ್ರಮ ಭೀಮ । ನೆಂದೆನಿಸಿ ಕೌರವ
ಧ್ವಜವ ಕೆಡಹಿದ್ಯೊ ಸೋಮ । ವಂಶಕೆ ತಿಲುಕ ನೀ
ಧ್ವಜ ಕಪಿಗೆ ಬಹುಪ್ರೇಮ । ನಿನ್ನಲಿ ಹರಿಯ ಧಾಮ
ದ್ವಿಜನ ಉದರದಿ ಜನಿಸಿ ಅಲ್ಲಿಂ
ಕುಜನ ಮತವನು ತರಿದು ಹರಿಯ
ಧ್ವಜ ವಜ್ರಾಂಕುಶ ಪಾದ ಭಜನೆ
ನಿಜಗತಿಗೆ ಬಹು ಶ್ರೇಷ್ಠವೆನಿಸಿದೆ ೨

ವ್ಯಾಪಕನೊ ನೀ ಎಲ್ಲಾ । ಕಡೆಯಲಿ ನಿನ್ನ
ರೂಪ ತುಂಬಿಹದಲ್ಲಾ । ಎನಗದನು ತೋರೊ
ಶ್ರೀ ಪತಿ ಗೋಪಾಲಕೃಷ್ಣವಿಠ್ಠಲ । ಲೀಲ
ನೀ ಪರಿಪರಿಯಿಂದ ತಿಳಿಸಿ

ತಾಪ ಹರಿಸೊ ಮೂರು ವಿಧದ
ಪಾಪಿ ಎಂದು ಎನ್ನ ನೂಕದೆ
ಕಾಪಾಡೊ ಪಂಚರೂಪ ಮೂರುತಿ ೩

## ೧೧೦

ನಿಷ್ಠೆಯಿಂದ ನಿಂತ ಈ ಪುಟ್ಟ ಕಪಿಯ ನೋಡೆ ಪ.

ಎಷ್ಟು ಮೌನ ಧರಿಸಿದಂಥ ಪುಟ್ಟ ಕಪಿಯ ನೋಡೆ ಅ.ಪ.

ವಾರಿಧಿಯ ದಾಟಿದಂಥ ಪುಟ್ಟ ಕಪಿಯ ನೋಡೆ
ಹೀರಿದ ಕುರುಪರ ರಕ್ತ ಪುಟ್ಟ ಕಪಿಯ ನೋಡೆ ೧

ತೂರಿದ ಅನ್ಯರ ಮತ ಪುಟ್ಟ ಕಪಿಯ ನೋಡೆ
ಸಾರಿ ಹರಿ ಸರ್ವೋತ್ತಮನೆಂದ ಪುಟ್ಟ ಕಪಿಯ ನೋಡೆ ೨

ಶೌರ್ಯವೆಲ್ಲ ಉಡುಗಿದಂಥ ಪುಟ್ಟ ಕಪಿಯ ನೋಡೆ
ಹಾರಿ ಯಂತ್ರದಲ್ಲಿ ಶಿಲ್ಕಿದ ಪುಟ್ಟ ಕಪಿಯ ನೋಡೆ ೩

ಮಾನ ಉಳಿಸಿಕೊಳ್ಳಲು ಮೌನದ ಪುಟ್ಟ ಕಪಿಯ ನೋಡೆ
ಧ್ಯಾನ ಮುದ್ರಾಂಕಿತದಿ ಶೋಭಿಪ ಪುಟ್ಟ ಕಪಿಯ ನೋಡೆ ೪

ಯೋಗಾಸನದಿ ಪದ್ಮಾಸನವು ಪುಟ್ಟ ಕಪಿಯ ನೋಡೆ
ವಾಗೀಶನ ಪದಕ್ಹೋಗುವ ತಪದ ಪುಟ್ಟ ಕಪಿಯ ನೋಡೆ ೫

ವ್ಯಾಸರಿಗೊಲಿದ ವೇಷಧಾರಕ ಪುಟ್ಟ ಕಪಿಯ ನೋಡೆ
ಮೋಸವೊ ಧ್ಯಾನವೊ ಅರಿಯೆ ಪುಟ್ಟ ಕಪಿಯ ನೋಡೆ ೬

ಕಷ್ಟದ ಭವಕಟ್ಟು ಬಿಡಿಸುವ ಪುಟ್ಟ ಕಪಿಯ ನೋಡೆ
ಕಟ್ಟಿನೊಳ ಸಿಲ್ಕಿ ಗುಟ್ಟು ತಿಳಿಸದ ಪುಟ್ಟ ಕಪಿಯ ನೋಡೆ ೭

ಸಿದ್ಧ ಸಾಧನ ಬುದ್ಧಿ ಬಲಿದ ಪುಟ್ಟ ಕಪಿಯ ನೋಡೆ
ಉದ್ಧಾರಕ ಪ್ರಸಿದ್ಧ ಪುರುಷ ಪುಟ್ಟ ಕಪಿಯ ನೋಡೆ ೮

ಸ್ವಾಪರೋಕ್ಷಿ ಜಗದ್ವ್ಯಾಪಕನಾದ ಪುಟ್ಟ ಕಪಿಯ ನೋಡೆ
ಗೋಪಾಲಕೃಷ್ಣವಿಠ್ಠಲನ ದಾಸನೀ ಪುಟ್ಟ ಕಪಿಯ ನೋಡೆ ೯

## ೧೧೧

ನೊಂದು ಬಂದೆನೊ ಕಾಂತೇಶ । ಕೈಯನೆ ಪಿಡಿಯೊ
ಮಂದಭಾಗ್ಯಳ ಜೀವೇಶ ಪ.

ಅಂದು ಶ್ರೀ ರಾಮರ ಸಂದೇಶವನ್ನೆ ಭೂ-
ನಿಂದನೆಗೆ ಅರುಹುತಲಿ ಬಹು ಆನಂದಪಡಿಸಿದ ವಾನರೇಶ ಅ.ಪ.

ಪರಮ ಕರುಣಾಳು ಶೌರಿ । ಭಕ್ತರ ಕಾಯ್ವ
ದುರಿತದೂರನೆ ಉದಾರಿ
ಚರಣಕ್ಕೆ ನಮಿಸುವೆ ಹರಿಗೆ ಪರಮಾಪ್ತನೆ
ಎರವು ಮಾಡದೆ ದುರಿತ ತರಿಯುತ
ಪೊರೆಯೊ ಗುರುವರ ರಾಮಕಿಂಕರ ೧

ಗುರುಕರುಣದ ಬಲದಿ । ಅರಿತೆನೊ ನಿನ್ನ
ಚರಣ ನಂಬಿದೆ ಮನದಿ
ಪರಿ ಪರಿ ಭವಕ್ಲೇಶ ಪರಿಯ ಬಣ್ಣಿಸಲಾರೆ
ಹರಿವರನೆ ದಯಮಾಡು ಶ್ರೀ ಹರಿ
ದರುಶನವನನವರವಿತ್ತು ೨

ಕಾಂತನ ಅಗಲಿರಲು । ಚಿಂತೆಯಲಿ ಭೂ
ಕಾಂತೆ ವನದೊಳಗಿರಲು
ಸಂತೋಷದಿಂ ರಾಮನಂತರಂಗವನರುಹಿ
ಸಂತಸವಪಡಿಸುತಲವನಿಸುತೆಯ
ನಿಂತೆ ರಾಮರಿಗ್ವರುಷ ತೋರಿ ೩

ದ್ರುಪದ ಸುತೆಯಳ ಕೀಚಕ । ದುರ್ಮನದಲಿ
ಅಪಮಾನಪಡಿಸೆ ದುಃಖ
ತಪಿಸಿ ನಿನ್ನನು ಬೇಡೆ ಆ ಪತಿವ್ರತೆ ಸತಿ
ಕುಪಿತದಿಂದಲಿ ಖಳನ ಕೊಂದೆ
ಅಪರಿಮಿತ ಬಲಭೀಮ ಪ್ರೇಮ ೪

ಮಿಥ್ಯಾವಾದದ ಭಾಷ್ಯಕೆ । ಸುಜ್ಞಾನಿಗಳ್
ಅತ್ಯಂತ ತಪಿಸುತಿರೆ
ವಾತಜನಕನಾಜ್ಞೆ ಪ್ರೀತಿಯಿಂದಲಿ ತಾಳಿ
ಘಾತುಕರ ಮತ ಮುರಿದ ಮಧ್ವನೆ
ಖ್ಯಾತಿ ಪಡೆದೆ ಸಿದ್ಧಾಂತ ಸ್ಥಾಪಿಸಿ ೫

ಪ್ರಾಣಪಾನವ್ಯಾನ । ಉದಾನ ಸ
ಮಾನ ಭಾರತಿ ಕಾಂತನೆ
ಜ್ಞಾನಿಗಳಿಗೆ ಪ್ರೀತ ಜ್ಞಾನ ಭಕ್ತಿಪ್ರದಾತ
ದೀನಜನ ಮಂದಾರ ಕಾಯೊ
ದೀನಳಾಗಿಹೆ ಕೈಯ ಮುಗಿವೆ ೬

ನೋಯಲಾರೆನೊ ಭವದಿ । ಬೇಗನೆ ತೋರೊ
ಧ್ಯೇಯ ವಸ್ತುವ ದಯದಿ
ವಾಯುನಂದನ ನಿನ್ನ ಪ್ರಿಯದಿಂ ನಂಬಿದೆ
ಜೀಯನೆ ಕೈ ಪಿಡಿಯೊ ಕಮಲ ದ–
ಳಾಯತಾಕ್ಷನ ಮನದಿ ತೋರಿ ೭

ಹರಣ ನಿನಗೊಪ್ಪಿಸಿದೆ । ಸುರವಂದಿತ
ಕರೆದು ಮನ್ನಿಸಿ ಕಾಪಾಡೊ
ಸಿರಿವರನನು ಹೃತ್ಸರಸಿಜದಲಿ ತೋರೊ
ಧರೆಯ ವಸ್ತುಗಳ್ ಮಮತೆ ತೊರೆಸು
ಹರಿಯ ನಾಮಾಮೃತವನುಣಿಸು ೮

ಈ ಪರಿಬಂದೆ ಅನಿಲ । ನಿನ್ನೊಳು ವಾಸ
ಗೋಪಾಲಕೃಷ್ಣವಿಠ್ಠಲ
ಶ್ರೀಪತಿ ಕೃಪೆಯಿಂದ ನೀ ಪ್ರೀತನಾಗುತ
ಕೈಪಿಡಿದು ಸಂತೈಸು ಕರುಣದಿ
ಭಾಪುರೇ ಕದರುಂಡಲೀಶ ೯

## ೧೧೨

ಪರಮಪುರುಷ ಶ್ರೀ ರಾಮನ ಪದಯುಗ
ಹರುಷದಿ ಸ್ಮರಿಸುವ ಹನುಮಂತ
ಸಿರಿರಮಣ ನಿಜದಾಸನೆಂದೆನಿಸಿದ
ವರ ಕದರುಂಡಲಿ ಹನುಮಂತ ಪ.

ಒಂದೇ ಮನದಲಿ ತಂದೆ ನಿನ್ನಡಿಗಳ
ಪೊಂದಿದೆ ಸಲಹೈ ಹನುಮಂತ
ಕುಂದುಗಳೆಣಿಸದೆ ಕಂದನ ತೆರದಲಿ
ಎಂದೆಂದಿಗು ಪೊರೆ ಹನುಮಂತ ೧

ವಾರಿಧಿ ದಾಟುತ ಸೇರುತ ಅರಿಪುರ
ಧಾರುಣಿಜೆಯ ಕಂಡೆ ಹನುಮಂತ
ನಾರಿಚೋರನಪುರ ಸೇರಿಸಿ ಅನಲಗೆ
ಸೇರಿದೆ ರಾಮನ ಹನುಮಂತ ೨

ಕೃಷ್ಣನ ಸೇವಿಸಿ ದುಷ್ಟರ ಕೊಲ್ಲುತ
ಮೆಟ್ಟಿದೆ ಖಳರನು ಹನುಮಂತ
ದಿಟ್ಟತನದಿ ಸಾಮ್ರಾಜ್ಯವಾಳಿ ಜಗ-
ಜಟ್ಟಿ ಎಂದೆನಿಸಿದೆ ಹನುಮಂತ ೩

ಮಿತಿಯಿಲ್ಲದ ಅತಿಖತಿ ಮತಗಳನು
ಹತಗೈಸುತ ನೀ ಹನುಮಂತ

ಪ್ರತಿ ಗ್ರಂಥಗಳನ್ನು ಸ್ಥಾಪಿಸಿ ಸುರರಿಗೆ
ಅತಿ ಹಿತ ತೋರಿದೆ ಹನುಮಂತ ೪

ಇಷ್ಟ ಫಲಪ್ರದ ತುಷ್ಟಿಬಡಿಸೊ ನೀ
ಕೊಟ್ಟೀಗಭಯವ ಹನುಮಂತ
ದಿಟ್ಟ ನಿನ್ನಡಿಗಳ ಭಜಿಸುವೆ ಗೋಪಾಲ
ಕೃಷ್ಣವಿಠ್ಠಲ ಪ್ರಿಯ ಹನುಮಂತ ೫

## ೧೧೩

ಪ್ರಾಣದೇವ ನೀ ಕಾಯೊ ಕರುಣಿ ಸತತ
ಪಾಲಿಸು ಸುಖದಾತ ಪ.

ಪ್ರಣಾಪಾನವ್ಯಾನೊದಾನತೋಷ
ಸಮಾನ ಭಾರತೀಶ ಅ.ಪ.

ತ್ರಿವಿಧ ಜೀವರ ಶ್ವಾಸ ನಿಯಾಮಕನೆ ಶ್ರೀ ಹರಿ ಸೇವಕ ನೀನೆ
ಭವ ಇಂದ್ರಾದಿಗಳಿಂದಲಿ ವಂದಿತನೆ ಭಾರತಿಗತಿ ಪ್ರಿಯನೆ
ತ್ರಿವಿಧ ಶ್ವಾಸ ಜಪ ನಿರ್ಲಿಪ್ತದಿ ಜಪಿಸಿ ಜೀವರ ಗತಿಗೈಸಿ
ನವವಿಧ ಭಕ್ತಿಯ ಹರಿಚರಣದಿ ನಿರುತ ಚರಿಸುವ ಮತಿದಾತ ೧

ತತ್ವಾಧೀಶರ ಪ್ರೇರಕ ಮಹಪ್ರಾಣ ಜೀವರ ಸುತ್ರಾಣ
ವ್ಯಾಪ್ತಜಗದಿ ಶ್ರೀ ಹರಿ ಲಕುಮಿಯ ಸಹಿತ ಬಳಿತ್ಥಾ ಸೂಕ್ತ ಸ್ತುತ
ತತ್ವಾದಿಗಳಿಗಧೀಶ ಪೋಷತೋಷ ಶ್ರೀ ಹರಿ ನಿನ್ನೊಳು ವಾಸ
ಸತ್ವ ಗುಣದ ಜೀವರ ಸದ್ಗತಿದಾತ ಸುಜ್ಞಾನ ಪ್ರದಾತ ೨

ತ್ರೇತೆಯಲ್ಲಿ ಶ್ರೀ ರಾಮದಾಸ್ಯ ಚರಿಸಿ ದಶಶಿರನನು ಮುರಿಸಿ
ಮಾತೆ ಕೊಟ್ಟ ಭಿಕ್ಷಾನ್ನ ಉಂಡು ಸುಖಿಸಿ ಬಕ ಹಿಡಿಂಬಕರೊರಸಿ
ಪಾತಕಿ ಮಾಯವಾದಿ ಜೈಸಿ ಸದ್ಗ್ರಂಥವ ರಚಿಸಿ
ಖ್ಯಾತ ಗೋಪಾಲಕೃಷ್ಣವಿಠ್ಠಲ ಪ್ರಿಯ ನಮೋ ಚಳ್ಳಕೆರೆನಿಲಯ ೩

## ೧೧೪

ಪ್ರಾಣದೇವನ ನಮಿಪೆ ನಮೋ
ಪ್ರಾಣಕಧೀಶನೆ ಶರಣು ನಮೋ
ಕಾಣಿಸು ಹರಿಯಂಘ್ರಿಯನು ನಮೋ
ಪ್ರಾಣ ಪಂಚರೂಪಾತ್ಮ ನಮೋ ಪ.

ಅಂಜನೆ ಆತ್ಮಜ ಕುವರ ನಮೋ
ಸಂಜೀವನ ಗಿರಿ ತಂದೆ ನಮೋ
ನಂಜುಂಡನ ಪ್ರಿಯ ಜನಕ ನಮೋ
ಕಂಜಾಕ್ಷನ ದಾಸಾರ್ಯ ನಮೊ ೧

ಗುಪ್ತದಿ ಕೃಷ್ಣನ ದಾಸ ನಮೊ
ಆಪ್ತವರ್ಗ ನಿರ್ಧೂತ ನಮೋ
ಶಕ್ತ ಜರಾದಿ ಹಂತ ನಮೋ
ತಪ್ತಕಾಂಚನ ಸುದೀಪ್ತ ನಮೊ ೨

ಏಕವಿಂಶತಿ ಮತಧ್ವಂಸ ನಮೋ
ಶ್ರೀಕಳತ್ರಪ್ರಿಯ ಪಾತ್ರ ನಮೋ
ಏಕ ಚತುರ ನವಗ್ರಂಥ ನಮೋ
ಜೋಕೆಯಿಂದ ನಿರ್ಮಿಸಿದೆ ನಮೋ ೩

ಮುಕ್ತ ಜೀವರ ಸ್ತುತ್ಯ ನಮೋ
ಯುಕ್ತಿವಂತ ಜಗದ್ವ್ಯಾಪ್ತ ನಮೋ
ಶಕ್ತಿವಂತ ಶುದ್ಧಾತ್ಮ ನಮೋ
ಭಕ್ತಭರಿತ ಹರಿಪ್ರೀತ ನಮೋ ೪

ನಮೋ ನಮೋ ಶ್ರೀಗೋಪಾಲ
ಕೃಷ್ಣವಿಠ್ಠಲನಿಗೆ ಪ್ರಿಯಬಾಲ
ನಮೋ ನಮೋ ಶ್ರೀ ಭಾರತಿಲೋಲ
ನಮಿಸುವೆ ಚಳ್ಳಕೆರೆಯ ಪಾಲ ೫

ಪ್ರೇಮಭಕ್ತರ ಪೊರೆವ ಬಂದನು
ಸ್ವಾಮಿಗೋಪಾಲಕೃಷ್ಣ ವಿಠಲನ
ಪ್ರೇಮಭಕ್ತನು ದಾಸ ಭವನಕೆ ೩

## ೧೧೬

ಬಂಧನದ ಪರಿ ಏನೋ ಬಾಲ ಹನುಮ ಪ.

ಬಂಧಿಸಿದರಾರಿಲ್ಲಿ ನಿನ್ನ ಹನುಮ ಅ.ಪ.

ಒಂದು ಸಲ ನೋಡುವೆನೆ ಬ್ರಹ್ಮಾಸ್ತ್ರವಲ್ಲವಿದು
ಒಂದು ಸಲ ನೋಡುವೆನೆ ಅಜಗರವಿದಲ್ಲ
ಒಂದು ಸಲ ನೋಡುವೆನೆ ಕಳ್ಳ ಗುಂಪಲ್ಲವಿದು
ಒಂದೆರಡು ಕೋಣವೆರಡರ ಮಧ್ಯೆ ಇರುವ ೧

ಕ್ಷಣಕೆ ಪರಿಪರವಾಯ್ತು ಹಿಂದೆ ಆ ಬಂಧಗಳು
ಕ್ಷಣಕ್ಷಣಕು ಇದ್ದಂತೆ ಇರುವುದೀ ತೊಡಕು
ಗುಣದಂತೆ ಆವರಣ ವರ್ತುಳಾಕಾರದಲಿ
ತೆನೆಗಳಲಿ ಕೋತಿಗಳ ಕಾವಲಿನ ಕಟ್ಟು ೨

ಬೀಸಿದೀ ಬಲೆ ತೆಗೆಯೆ ಶ್ರೀ ಶನಿಗು ಅಳವಲ್ಲ
ವಾಸುದೇವನೆ ಬಲ್ಲ ಈ ಮರ್ಮವ
ದಾಸಜನ ಪ್ರಿಯ ಶ್ರೀಗೋಪಾಲಕೃಷ್ಣವಿಠ್ಠಲ
ವ್ಯಾಸರಿಂದಲಿ ನಿನಗೆ ಮೋಸಗೈಸಿದನೋ ೩

## ೧೧೭

ಭಾರತೀಶ ಹರಿದಾಸನಾದನಿಲ್ಲೀ
ವೀಣೆಯ ಧರಿಸುತಲೀ ಪ.

ಭಾರಿಭಾರಿಗವತಾರ ಮಾಡಿ ಬಳಲೀ
ಆನಂದದಲ್ಲೀ ಅ.ಪ.

ತ್ರೇತೆಯಲ್ಲಿ ಶ್ರೀ ರಾಮದೂತನಾಗಿ
ತನುಸುಖವ ನೀಗಿ
ಪ್ರೀತಿ ಭಕ್ತಿಯಲಿ ರಾಮ ಕಾರ್ಯಕಾಗಿ
ತನುವಪ್ಪಿಸಿ ಬಾಗಿ
ಖ್ಯಾತಿ ಪಡೆದು ಶರಧಿಯ ಲಂಘಿಸಿ ಪೋಗಿ
ಸೀತೆಯ ಕಂಡೆರಗಿ
ವೀಹೋತ್ರಗೆ ಪುರವಪ್ಪಿಸಿ ತಿರುಗೀ
ರಾಮರ ಕಂಡೆರಗಿ ೧

ಕುಂತಿಯ ಜಠರದಿ ಜನಿಸಿ ಭೀಮನೆನಿಸೀ
ಬಕಮುಖರನೆ ಜೈಸಿ
ಸಂತೋಷದಿ ಸೌಗಂಧ ಸತಿಗೆ ಸಲಿಸೀ
ಕೌರವರ ಸಂಹರಿಸೀ
ಅಂತರಂಗದಲಿ ಕೃಷ್ಣನಂಘ್ರಿ ಭಜಿಸಿ
ಪಾಂಡವರನೆ ಮೆರಸೀ
ಕಂತುಪಿತನ ಕಡುಕೃಪೆಯ ಪಡೆದು ಸುಖಿಸೀ
ಮೇಲ್ತೋರದೆ ಸ್ಮರಿಸೀ ೨

ಮೂರನೆ ರೂಪದಿ ಮುನಿಯಾಗವತರಿಸೀ
ದುರ್ಮತಗಳ ಜೈಸೀ
ಸಾರತತ್ವಮತ ಸಜ್ಜನರಿಗೆ ತಿಳಿಸೀ
ಸರ್ವೋತ್ತಮ ಹರಿ ಎನಿಸೀ
ಆರು ಅರಿಯದಂತೆ ದಾಸತ್ವವಚರಿಸೀ
ದುರ್ಮತಗಳ ಜೈಸೀ
ತೋರಿ ತೋರದಂತೆ ಸದ್ಗ್ರಂಥದಿ ತಿಳಿಸೀ
ಯತಿ ಕುಲಜರೋಳ್ ನಿಲಿಸೀ ३

ಮೀಸಲ ದಾಸ್ಯವ ಮೂರವತಾರದಲ್ಲಿ
ಚರಿಸಲು ಕಲಿಯಲ್ಲೀ

ವ್ಯಾಸ ಮುನಿಯು ಬಹಿರಂಗಪಡಿಸೆ ಚಲ್ಲೀ
ನಾರದ ಮುನಿಯಲ್ಲೀ
ದಾಸರೆಂದರೆ ಪುರಂದರ ಗುರುವೆನಿಸುತಲೀ
ಮೆರೆಯಲು ಜಗದಲ್ಲೀ
ಮೀಸಲು ಉಳಿಯದೆ ಪೋಯಿತೆಂದು ಇಲ್ಲೀ
ದಾಸ ತಾನಾಗುತಲೀ ೪

ದಾಸತನದ ಆನಂದವನನುಭವಿಸೇ
ದೇವತೆಗಳು ಬಯಸೇ
ಭೂಸುರ ಜನ್ಮದಿ ಭೂಮಿಯಲವತರಿಸೇ
ಹರಿದಾಸರಾಗಿ ಸುಖಿಸೇ
ವಾಸುದೇವಗೆ ತಾ ನಿಜದಾಸನು ಎನಿಸೇ
ಮಾರುತಿ ಇದ ಬಯಸೇ
ಶ್ರೀಶ ಗೋಪಾಲಕೃಷ್ಣವಿಠಲದಾಸಾ
ಬೆಳಗಾವಿ ವಾಸಾ ೫

## ೧೧೮

ಬಾರೊ ಹನುಮ ಬಾರೊ ಭೀಮ ಬಾರೊ ಮಧ್ವಮುನಿಪ ಪ.

ಬಾರೊ ರಾಮಕೃಷ್ಣ ವೇದವ್ಯಾಸರ ಪ್ರಿಯ ಭಕ್ತ ಅ.ಪ.

ಅಂಜನೇಯ ಸುತನು ಆಗಿ
ಸಂಜೀವನ ಗಿರಿಯ ತಂದೆ
ಕಂಜಲೋಚನೆಯ ವಾರ್ತೆ
ಮಂಜುಭಾಷಣ ರಾಮನಿಗರುಹಿದೆ ೧

ಪಾಪಿ ಕೌರವ ಕುಲವ ಕೊಂದು
ದ್ರೌಪದಿಯ ಕಾಯ್ದ ಮಹಿಮ
ಶ್ರೀಪತಿ ಶ್ರೀ ಕೃಷ್ಣನ ಭಜಿಸಿದ
ಭೂಪ ಭೀಮಸೇನ ಬೇಗ ೨

ಭೂಸುರ ಜನ್ಮದಲಿ ಬಂದು
ಆಸೆಯಿಂದ ಆಶ್ರಮ ಕೊಂಡು
ದೋಷಿ ಅನ್ಯಮತವ ಮುರಿದು
ಭೂಸುರರ ಕಾಯ್ದ ಮಧ್ವ ೩

ಸಕಲ ಸುಜನರ ಸೇವೆ ಕೊಂಡು
ಮುಕುತಿಮಾರ್ಗಪ್ರದ ನೀನಾಗಿ
ಭಕುತಿಮಾರ್ಗವ ತೋರಿ ಎನ್ನ
ಹೃತ್ಕಮಲ ಮಧ್ಯದಲಿ ನಿಲ್ಲೊ ೪

ಗೋಪಾಲಕೃಷ್ಣವಿಠ್ಠಲನ
ರೂಪ ನೋಡುವ ಕೃಪೆಯ ಮಾಡೊ
ಶ್ರೀಪತಿ ಶ್ರೀ ಶ್ರೀನಿವಾಸಗೆ
ನೀ ಪ್ರೀತಿಕರನೆಂದು ನಮಿಪೆ ೫

## ೧೧೯

ಮಂಗಳಂ ಶ್ರೀ ಭಾರತೀಶಗೇ
ಬಂಗಾರನೇತ್ರಗೆ ಪ.

ರಂಗನಾಥನ ದಾಸೋತ್ತಮಗೆ
ಶೃಂಗಾರದಿ ಶೋಭಿಪಗೆ ಅ.ಪ.

ಬಿಟ್ಟುನೇಮ ತೊಟ್ಟು ವಸನ
ಇಟ್ಟು ಆಭರಣ
ಶ್ರೇಷ್ಠ ಪದಕ ಹಾರ ಧರಿಸಿ
ದಿಟ್ಟತನದಿ ನಿಂತ ಧೀರಗೆ ೧

ಹನುಮ ಭೀಮ ಮುನಿ ಮ
ಧ್ವನಿಗೆ ಘನಗುಣಜ್ಞಗೆ
ಚಿನುಮಯಾತ್ಮ ರಾಮಕೃಷ್ಣ
ಮುನಿದ್ವೈಪಾಯನನು ಪೂಜಿಪಗೆ ೨

ಶ್ರೀಪತಿಯ ಭಕ್ತನಿಗೆ
ವ್ಯಾಪಕತ್ವಗೆ
ಗೋಪಾಲಕೃಷ್ಣವಿಠ್ಠಲನ
ರೂಪ ಮನದಿ ಸ್ಮರಿಸುವವಗೆ ೩

## ೧೨೦

ಮೂರುತಿ ಪುಟ್ಟ ಮೂರುತಿ ಪ.

ಕೀರುತಿ ಬಲು ಬಲು ವಾರುತಿ ಲೋಕರೊಳ್
ಸಾರುತಿ ಹರಿಗುಣ ಬೀರುತಿ ತ್ರಿಜಗದಿ ಅ.ಪ.

ತ್ರೇತೆಯ ಯುಗದಲಿ ಜನಿಸಿ । ರಾಮ
ದೂತಕಾರ್ಯಕೆ ಮನವಿರಿಸಿ
ಪ್ರೀತಿಯೊಳ್ ರವಿಜನ ಉಳಿಸಿ । ಬಹು
ಖ್ಯಾತಿಯ ವಾಲಿಯನಲ್ಲೇ ಅಳಿಸಿ
ವಾತವೇಗದಿ ವನಧಿಯ ದಾಟಿ ಉರ್ರ್ಗುರ
ಸೀತೆಗಿತ್ತು ಲಂಕೆ ವೀತಿಹೋತ್ರನಿಗಿತ್ತ ೧

ದ್ವಾರಕಿನಿಲಯನ ಒಲಿಸಿ । ಬಲು
ಧೀರ ಭೀಮಸೇನನೆನಿಸಿ
ಸೋಮಕುಲದಲಿ ಜನಿಸಿ । ಬಲು
ಕಾಮಿ ಕೀಚಕನನ್ನು ವರೆಸಿ
ಕಾಮಿನಿಗೋಸುಗ ಕಾಮುಕ ಕುರುಕುಲ
ಧೂಮವೆಬ್ಬಿಸಿದ ನಿಸ್ಸೀಮ ಸುಗುಣಧಾಮ ೨

ಪುಟ್ಟಯತಿಯ ರೂಪತಾಳಿ । ಬಲು
ಗಟ್ಟಿ ಗೋಪೀ ಗೆಡ್ಡೆ ಸೀಳಿ
ಪುಟ್ಟ ಕೃಷ್ಣನ ಕಂಡು ತೋಳಿ । ನಿಂದ
ನಿಷ್ಠೆಯೊಳ್ ನೆತ್ತಿಯೊಳ್ ತಾಳಿ
ಇಟ್ಟು ಉಡುಪಿಯಲ್ಲಿ ಅಷ್ಟಯತಿಗಳ ನಿಲಿಸಿ
ಕುಟ್ಟಿ ಕುಮತಗಳ ವೈಷ್ಣವಾಗ್ರಣಿಯಾದ ೩

ಸಾಕಾಯಿತೇ ಸ್ವಾಮಿಕಾರ್ಯ । ಇಲ್ಲಿ
ಬೇಕಾಯಿತೇ ಮೌನಚರ್ಯಾ
ಆ ಕಾಲದ ಎಲ್ಲ ಶೌರ್ಯ ಉಡುಗಿ
ಏಕಾಂತದಲಿ ಹರಿಚರ್ಯಾ
ನೀ ಕಂಡು ಮನದಲ್ಲಿ ವಾಕು ಉಚ್ಚರಿಸದೆ
ಈ ಕುಧರಜೆ ತೀರ ಏಕಾಂತವಾಸನೆ ೪

ಅಪಾರಮಹಿಮನೆ ಹಂಪೆ । ಯಲ್ಲಿ
ಈ ಪರಿ ಇರುವುದು ತಂಪೆ
ಶ್ರೀ ಪತಿ ಪದಕಂಜ ಕಂಪೆ । ಇಲ್ಲಿ
ನೀ ಪಾರಣೆಯೆ ಮಾಳ್ಪ ಸೊಂಪೆ
ಗೋಪಾಲಕೃಷ್ಣವಿಠ್ಠಲದಾಸ ನಿನ್ನಲ್ಲಿ
ಸ್ಥಾಪಿಸಿದರೆ ವ್ಯಾಸರೀಪರಿ ಯಂತ್ರದಿ ೫

## ೧೨೧

ಮೂರು ತುಂಡಾದ ಹನುಮನ ನೋಡಿರೆ ಪ.

ಮಾರುತಿಯ ಮರ್ಮವಿದರಿಂದರಿಯರೆ ಅ.ಪ.

ಮೊದಲ ಕಟ್ಟೆಯ ದಡದಿ ಮೊದಲಿದ್ದ ಹನುಮನ
ವಿಧಿವಶದಿ ಖಳರು ಕಿತ್ತೊಗೆಯೆ ಮದದಿ
ಮೊದಲು ಕಟ್ಟೆಯು ನಿಲದೆ ಒಡೆದು ಪರಿಯಲು ತುಂಗೆ
ಅದರೊಳಡಗಿದ್ದ ಕೆಲಕಾಲವೀ ರಾಯ ೧

ದೈವವಶದಿಂ ವ್ಯಾಸರಾಯರಿಲ್ಲಿಗೆ ಬರಲು
ದೇವರಿಲ್ಲದ ಭವನ ಕಂಡು ನಿಂದು
ತಾವೆ ಸ್ಥಾಪಿಸುವೆವೆಂಬನಿತರೊಳು ಸ್ವಪ್ನದಲಿ
ಪಾವಮಾನಿಯು ತನ್ನ ಇರುವು ತೋರಿದನೊ ೨

ಬರುತ ಕಟ್ಟೆಯ ದಿಡಗಿನಲ್ಲಿ ನಿಂದು ಕರೆವಡೆ
ಬರಲು ಮೂರು ತುಂಡು ಹನುಮರಾಯ
ತರುತ ಸ್ಥಾಪಿಸಿ ಬಂಧಿಸಲು ದ್ವಾರವಾರದಲಿ
ಕರನ್ಯೂನ ಸಾಕಾರ ಸರಿಯಾದನೀತ ೩

ಮೂರು ಯುಗದಲಿ ತಾನು ಮೂರು ರೂಪವ ತಾಳಿ
ಮೂರು ಮೂರ್ತಿಯ ಭಜಿಸಿ ಮೂರು ಆಶ್ರಮದಿ
ಮೂರಾರು ಎರಡೊಂದು ದುರುಳ ಮತಗಳ ಮುರಿದು
ಮೂರುದಶ ಏಳು ಗ್ರಂಥಗಳ ಸ್ಥಾಪಿಸಿದ ೪

ಮೂರು ಗುಣಬದ್ಧ ಮೂರು ದೇಹದಿ ನೆಲಸಿ
ಮೂರು ವಿಧ ಜಪದಿಂದ ಮೂರ್ಗತಿಯನೀವ
ಮೂರು ಸ್ಥಾನದಿ ಮೂರು ಕೋಟಿರೂಪವ ಧರಿಸಿ
ಮೂರು ಲೋಕದಿ ಮೆರೆವ ಮಾರುತಿಯ ಚರ್ಯ ೫

ಮೂರು ನಾಡಿಯ ಮಧ್ಯೆ ಮೂರೈದುದಲ್ಲಿ
ತೋರುವೊ ಹರಿರೂಪ ತೋರಿಸುವನು
ಮೂರು ಅವಸ್ಥೆಗಳ ಮೀರಿದ ಜಾಗ್ರತನು
ಮೂರು ಕಾಲದಿ ಜೀವರನು ಕಾಯುವನ ೬

ಮೂರು ಮಾರ್ಗಗಳಿಂದ ಮಾರುತಿಯ ತೋರುವೊ
ದಾರಿಯಿಂದಲಿ ಹರಿಯ ಸಾರಿ ಭಜಿಸೆ
ಸೇರಿಸುವ ಗೋಪಾಲಕೃಷ್ಣವಿಠ್ಠಲನ ಪುರವ
ತಾರಿಸುವ ಭವವನಧಿ ಮೊದಲಗಟ್ಟೇಶ ೭

## ೧೨೨

ಯಂತ್ರೋದ್ಧಾರಕನೆ । ಪಾಲಿಸೊ
ಯಂತ್ರೋದ್ಧಾರಕನೆ ಪ.

ಸಂತತ ತವ ಪದಕ್ರಾಂತಳಾಗಿರುತಿರೆ
ಇಂತು ನಿರ್ದಯವೇಕೊ ಸಂತಸದಲಿ ಪೊರೆ ಅ.ಪ.

ಯತಿಗಳಿಂದ ಸಂಸ್ಥಿತನೆನಿಸುತ ಅ–
ಪ್ರತಿಮ ಮಹಿಮ ಈ ಕ್ಷಿತಿಯೊಳು ನೆಲಸಿಹ ೧

ತುಂಗ್ರಭದ್ರ ತೀರ ಮಂಗಳ ಮಹಿಮನೆ
ಕಂಗೊಳಿಸೆನ್ನಂತರಂಗದಲಿ ನೆಲಸುತ ೨

ಮಂತ್ರಿವರ್ಯ ಮಾಹಂತ ಹರಿಪ್ರಿಯ
ಎಂತು ವ್ಯಾಸರಿಲ್ಲಿ ಯಂತ್ರದಿ ಬಿಗಿದರೊ ૩

ಹನುಮ ಭೀಮ ಶ್ರೀ ಮುನಿ ಮಧ್ವಾರ್ಯನೆ
ಸನುಮತದಲಿ ಎನ್ನ ಮನದಿಚ್ಛೆ ಸಲಿಸೊ ೪

ಬೆಟ್ಟದೊಡೆಯ ಬಹು ನಿಷ್ಠೆಯೊಳ್ ಸ್ತುತಿಸುವೆ
ಇಷ್ಟಾರ್ಥಕೆ ತಡೆ ಹಂಪೆ ಪಟ್ಟಣವಾಸಿಯೆ ೫

ಕಾಮಿತ ಫಲದನೆ ಕಾಮಿನಿಗುಂಗುರ
ನೇಮದಿಂದಿತ್ತೆಯೊ ರಾಮನ ದೂತನೆ ೬

ಎಷ್ಟು ಮಾನವೊ ಬೆಟ್ಟೆಲಿ ಜಪಮಣಿ
ದೃಷ್ಟಿಸೊ ಗೋಪಾಲಕೃಷ್ಣವಿಠ್ಠಲ ದಾಸ ೭

## ೧೨೩

ಯಾಕೆ ನೀನು ಹೀಗೆ ಮಾಡುವಿ ವೀರ ಹನುಮ
ಯಾಕೆ ನೀನು ಹೀಗೆ ಮಾಡುವಿ ಪ.

ಯಾಕೆ ನೀನು ಹೀಗೆ ಮಾಡುವಿ
ಜೋಕೆಯಿಂದ ಸಲಹೊ ಎಂಬ
ವಾಕು ಕೇಳದೇನೋ ನಿನಗೆ
ಸಾಕು ಸಾಕು ನಿನ್ನ ಬಿಂಕ ಅ.ಪ.

ಸತ್ಯವಂತನೆಂಬ ವಾಕು
ಎತ್ತ ಪೋಯಿತೀಗ ಬಿರುದು
ಒತ್ತಿ ಒತ್ತಿ ಕೇಳಿದರೂ
ಉತ್ತರವ ಕಾಣೆನಲ್ಲೊ ೧

ಒಡೆಯ ರಾಮಭಂಟನೆನಿಸಿ
ಒಡವೆ ವಸ್ತು ಇಟ್ಟುಕೊಂಡು
ಬಡಿವಾರದಲಿ ನಿಂತರೀಗ
ಬಡವರೆಮ್ಮ ಗತಿಯದೇನೊ ೨

ವೀರ ಉಡುಪು ಧರಿಸಿಕೊಂಡು
ವೀರ ಭೀಮನೆನಿಸಿಕೊಂಡು
ಮೋರೆ ಎತ್ತಿ ನೋಡದಿರಲು
ದಾರಿಯಾವುದೆಮಗೆ ಪೇಳು ೩

ಮುನಿಯ ರೂಪ ತಾಳಿ ಮತ್ತೆ
ಮೌನಧರಿಸಿ ನಿಂತರೀಗ
ಮಾನತನದಿ ತುತಿಸುವೆಮಗೆ
ಏನು ಮುಂದೆ ಗತಿಯು ಇನ್ನು ೪

ಬೇಡಲಿಲ್ಲೊ ನಿನ್ನ ಒಡವೆ
ಬೇಡಲಿಲ್ಲೊ ನಿನ್ನ ಭಾಗ್ಯ
ಆಡೊ ಒಂದು ಮಾತು ಎನಲು
ಮಾಡಿರುವೆ ಮನವ ಕಲ್ಲು ೫

ಏನು ಸೇವೆ ಮಾಡಲೀಗ
ಏನು ನಿನ್ನ ಸ್ತುತಿಸಲೀಗ
ಏನು ಧ್ಯಾನ ಮಾಡಲೀಗ
ಏನು ತಿಳಿಯದಲ್ಲೊ ಎನಗೆ ೬

ಶುದ್ಧವಾದ ನಿನ್ನ ಒಂದು
ಮುದ್ದು ಮಾತು ಕೇಳೆನೆಂದು
ಒದ್ದಾಡುವೆನೊ ಮನದಿ ಬಹಳ
ಇದ್ದಿಯಾಕೊ ಸುಮ್ಮನಿನ್ನು ೭

ಮನದಿ ಎನಗೆ ದೃಢವು ಇಲ್ಲ
ಹನುಮ ನಿನಗೆ ದಯವು ಇಲ್ಲ
ಮುನಿಸು ಮಾಡೆ ನೀನು ಸಲ್ಲ
ಘನವೆ ನಿನಗೆ ಪೇಳೊ ಸೊಲ್ಲ ೮

ನಿನ್ನ ಹೊರತು ಪೊರೆವರಿಲ್ಲ
ಮನ್ನಿಸಿನ್ನು ಕಾಳಿನಲ್ಲ
ನಿನ್ನ ಕೀರ್ತಿ ಜಗದಿ ಬಹಳ
ಉನ್ನತದಲಿ ಮೆರೆಸೊ ಮಲ್ಲ ೯

ಅನ್ನಕೊಡಿಸಿ ಇಟ್ಟುಕೊಂಡು
ಮನ್ನಿಸುವೆನೆಂಬೋ ಇಂಥ
ಭಿನ್ನನಾದ ನುಡಿಗೆ ನಾನು
ಇನ್ನು ಒಪ್ಪಲಾರೆ ಕಂಡ್ಯ ೧೦

ಕದರುಮಂಡಲಿಗಿ ಹನುಮ
ಹೆದರಲಾರೆ ನಿನಗೆ ಇನ್ನು
ಒದಗಿ ಪಾಲಿಸೆಂದು ಬೇಡೆ
ಹೃದಯ ಕರಗದಲ್ಲೊ ನಿನಗೆ ೧೧

ನಿರುತ ನಿನ್ನ ದಾಸಳೆನಿಸಿ
ಚರಿಸುವಂಥ ಎನಗೆ ಒಲಿದು
ಅರುಹದಿರಲು ಒಂದು ವಾಕು
ಬಿರುದು ಉಳಿವುದೇನೊ ಇನ್ನು ೧೨

ಇಷ್ಟ ಸಲಿಸದಿರೆ ಗೋಪಾಲ
ಕೃಷ್ಣವಿಠ್ಠಲಗ್ಹೇಳಿ ನಾನು
ಕಟ್ಟಿ ಹಾಕಿಸುವೆನೊ ಎನ್ನ
ಶ್ರೇಷ್ಠ ಮನದಿ ನಿನ್ನ ಮೂರ್ತಿ ೧೩

ಗುರುಗಳಾಜ್ಞೆಯಿಂದ ನಾನು
ಹರುಷದಿಂದ ಬಳಿಗೆ ಬರಲು
ಗರುವದಿಂದ ನಿನ್ನ ನೇತ್ರ
ತೆರದು ನೋಡದಿರುವರೇನೊ ೧೪

ತಂದೆ ನೀನೆ ಸಲಹೊ ಎಂದು
ಬಂದು ನಿನ್ನ ಅಡಿಗೆ ಎರಗೆ
ಒಂದು ಮಾತನಾಡದಂಥ
ಕುಂದು ಏನು ಪೇಳೊ ಇನ್ನು ೧೫

ಬೇಡ ಬೇಡ ಛಲವು ಇನ್ನು
ಬೇಡಿಕೊಂಬೆ ಹನುಮ ನಿನ್ನ
ಪಾಡಿಪೊಗಳುವಂತೆ ದಯವ
ಮಾಡು ಎನ್ನ ಮೊರೆಯ ಕೇಳಿ ೧೬

## ೧೨೪

ಯಾಕೆ ದಯಬಾರದೊ ಕಾಂತೇಶ ಪ್ರಾಣೇಶ
ಸಾಕಲಾರದೆ ಪೋದೆಯಾ ಎನ್ನನು ಪ.

ಏಕಚಿತ್ತದಿ ನಿನ್ನ ಚರಣ ನಂಬಿ ಬರಲು
ನೂಕುವುದುಚಿತವೇ ಶ್ರೀ ಭಾರತೀಶ ಅ.ಪ.

ತೊಳಲಿ ಬಳಲಿ ಸುಖ ಸುಳಿವೆಂಬೋದರಿಯದೆ
ನಳಿನಾಕ್ಷನ ದಾಸ ನಿನ್ನ ಕೀರ್ತಿ
ಇಳೆಯೆಲ್ಲ ಪೊಗಳಲು ಸಲಹುವನೆಂತೆಂದು
ಬಳಿಗೆ ಬರಲು ಮನಕರಗದೆ ತಂದೆ ೧

ಅಂದು ಕನಸಿನಲ್ಲಿ ಶಿರದಲ್ಲಿ ಕರವಿಟ್ಟೆ
ಇಂದೆಲ್ಲಿ ಪೋಯಿತೊ ಆ ಕರುಣ
ತಂದೆ ಮುದ್ದುಮೋಹನ ಗುರುಗಳ ವಚನವ
ತಂದಾದರೂ ಇಂದು ಒಲಿದೆನ್ನ ಕಾಯೊ ೨

ಮೊಸಲ ದಾಸ್ಯಕೆ ಆಶೆ ಮಾಡಿದೆನೆಂದು
ದೋಷವೆಣಿಸುವರೆ ಎನ್ನಲಿ ನೀ
ಶೇಷಶಯನನೆ ಬಲ್ಲೆನೊ ಇದರ ಮರ್ಮ
ಘಾಸಿಗೊಳಿಸದೆ ನೀ ಅಭಯವನೀಯೊ ೩

ರಾಮದಾಸ್ಯವ ಬಯಸಿ ನೇಮದಿಂದಲಿ ಇದ್ದು
ರಾಮನಾಗಮ ಕಂಡು ಎರಗಿ ನಿಂದು
ಭೂಮಿಜೆ ಪತಿ ಪಾದ ದಾಸ ಸಿದ್ಧಿಯ ಪಡೆದು
ಭೂಮಿಯೊಳು ಖ್ಯಾತನಾದೆಯೊ ಆಂಜನೇಯ ೪

ಚಿತ್ತಿದಿ ಕೃಷ್ಣನ ದಾಸತ್ವ ಸಾಧಿಸಿ
ಮತ್ತೆ ಮುನಿಯಾಗಿ ಗ್ರಂಥವ ರಚಿಸಿ
ಚಿತ್ತದಿ ಗೋಪಾಲಕೃಷ್ಣವಿಠ್ಠಲನ ಪಾದ
ನಿತ್ಯದಿ ಭಜಿಪೆ ನೀ ಮತ್ತೆನ್ನ ಕಾಯೊ ೫

## ೧೨೫

ಲಾಲಿ ಪಾಡಿರೆ ಮುದ್ದು ಬಾಲಕಂದನಿಗೆ
ಬಾಲಬ್ರಹ್ಮಚಾರಿಯಾದ ಕಪಿವರಗೆ ಪ.

ಅಂಜನೆಯ ಸುತನಾಗಿ ಅಂಬರಕೆ ಹಾರಿ
ಕಂಜಸಖನಿಗೆ ತುಡುಕಿ ವಜ್ರತನುವಾಗಿ
ಸಂಜೀವ ತಂದು ಕಪಿಮುಂಜಗಳ ಸಲಹಿ
ಮಂಜುಭಾಷಣ ರಾಮಪಾದ ದಾಸನಿಗೆ ೧

ಪುಟ್ಟಿ ಕುಂತಿಯ ಉದರದಲಿ ಗಿರಿ ಒಡೆದು
ದುಷ್ಟ ಕೀಚಕ ಬಕಾದಿಗಳ ಸಂಹರಿಸಿ
ಕುಟ್ಟಿ ಕೌರವರ ಕುಲ ದ್ರೌಪದಿಯ ಕೂಡಿ
ಪಟ್ಟವಾಳಿದ ಕೃಷ್ಣ ಪಾದಸೇವಕಗೆ ೨

ಶ್ರೀಪತಿಯ ಆಜ್ಞೆಯಲಿ ವಿಪ್ರಸುತನಾಗಿ
ಪಾಪಿ ದುರ್ಮತಗಳನು ತರಿದು ಮುರಿದೊಟ್ಟಿ
ಸ್ಥಾಪಿಸುತ ಸಚ್ಛಾಸ್ತ್ರ ಯತಿಯಾಗಿ ಚರಿಸಿ
ಗೋಪಾಲಕೃಷ್ಣವಿಠ್ಠಲನ ಮೆರೆಸಿದಗೆ ೩

## ೧೨೬

ಲಾಲಿ ಲಾಲೀ ಲಾಲಿ ಮೊದಲಗಟ್ಟೇಶ
ಲಾಲಿ ಲಾಲೀ ಲಾಲಿ ತುಂಗಭದ್ರ ತೀರೇಶಾ ಪ.

ಆಂಜನೆಯ ಸುತನಾಗಿ ಅಂಬರಕೆ ಹಾರಿ
ಕಂಜಾಕ್ಷ ರಾಮರಂಘ್ರಿಗಳನ್ನು ಸಾರಿ
ಮಂಜುಭಾಷಿಣಿಗೆ ಹರಿ ಮುದ್ರಿಕೆಯ ತೋರಿ
ಸಂಜೀವನವ ತಂದ ರಣಧೀರ ಶೌರಿ ೧

ಕುರುಕುಲದಿ ಜನಿಸಿದ ಕುಂತೀ ಕುಮಾರ
ರಣಧೀರನೆನಿಸಿದ ಕುರುಪ ಸಂಹಾರ
ಧರೆಯ ಭಾರವ ಕಳೆದೆ ಗದೆಯಿಂದ ಶೂರ
ಧುರಧೀರ ಶ್ರೀ ಕೃಷ್ಣನಂಘ್ರಿ ಪರಿಚಾರ ೨

ಅನ್ಯಮತಗಳ ಮುರಿದ ಧನ್ಯಮುನಿವರನೆ
ಮಾನ್ಯ ಸುರರಿಂದ ಹರಿಗುನ್ನಂತಪ್ರಿಯನೆ
ನಿನ್ನ ನಂಬಿದವರ ಭವ ಬನ್ನ ಬಿಡಿಸುವನೆ
ಘನ್ನ ಗೋಪಾಲಕೃಷ್ಣವಿಠ್ಠಲನ ಸೂನೆ ೩

## ೧೨೭

ವೀಣೆ ಧರಿಸಿದ ಕಾರಣೇನೊ ಹನುಮಾ
ಜಾಣತನವಿದು ಏನು ಪೇಳೊ ಬಲಭೀಮ ಪ.

ತ್ರೇತೆಯಲಿ ಶ್ರೀ ರಾಮದಾಸತ್ವ ಚರಿಸಿದುದು
ಖ್ಯಾತಿ ಬರಲಿಲ್ಲೆಂದು ಮನದಿ ತಿಳಿದೂ
ಪ್ರೀತಿಯಿಂದಲಿ ಕೃಷ್ಣನಂಘ್ರಿ ಗುಪ್ತದಿ ಭಜಿಸಿ
ನೀ ತಪೋನಿಧಿ ಎನಿಸಿ ಮುನಿಯಾದ ಮಹಿಮಾ ೧

ಮೂರು ಅವತಾರದಲಿ ತೋರದಂತ್ಹರಿ ದಾಸ್ಯ
ಆರಾಧಿಸುತ ಮೀಸಲಾಗಿ ಚಲಿಸೇ
ಧೀರಭಕ್ತರು ಬಯಲಿಗೆಳೆದು ಖ್ಯಾತಿಯ ಪಡೆಯೆ
ತೋರದಂತಾಗೆ ಬೇಗನೆ ದಾಸ್ಯ ವಹಿಸೀ ೨

ದಾಸರನುಭವಿಪ ಆನಂದ ನೋಡುತೆ ಭಾರ
ತೀಶ ನೀ ಮೊದಲು ದಾಸನು ಎನಿಸಲು
ವಾಸುಕೀಶಯನ ಗೋಪಾಲಕೃಷ್ಣವಿಠ್ಠಲಗೆ
ದಾಸನಾಗುತ ವೀಣೆ ಪುಸ್ತಕವ ಪಿಡಿದಿಯಾ ೩

## ೧೨೮

ವೀರಮಂಡಿ ಹೂಡಿರುವುದು । ಕಾರಣೇನು
ವೀರ ಹನುಮ ಪೇಳು ನೀನಿದ ಪ.

ರಾಮ ಹೆಗಲ ಏರಲೆನ್ನುತಾ । ಕುಳಿತಿಯೇನೊ
ನೇಮದಿಂದ ದಾಸನಾಗುತ
ಕಾಮಿನಿಯ ಚೋರನನ್ನು
ಧೂಮಕೆಡಹಲೆಂದು ರಾಮ
ಆ ಮಹಾರಣರಂಗದಲ್ಲಿ
ಸ್ವಾಮಿಗೆ ಜಯವಿತ್ತು ಮೆರೆದೆ ೧

ದ್ರೌಪದಿಯ ಮುಡಿಯನೆಳೆದನ । ಎದೆಯ ಮೇಲೆ
ಕೋಪದಿಂದ ಕುಳಿತು ಕರುಳಿನ
ಪಾಪಿ ಉರವ ಬಗೆದು ಘೋರ
ರೂಪ ತೋರಿ ಶತ್ರುಗಳಿಗೆ
ಶ್ರೀಪತಿಗೆ ಅರ್ಪಿಸಿದ್ದು
ಈ ಪರಿಯೆ ಪೇಳು ಹನುಮ ೨

ಅಭಯಹಸ್ತ ತೋರುತಿರುವುದು । ಭಕ್ತರಿಗೆ
ಉಭಯ ತತ್ವಜ್ಞಾನ ಕೊಡುವುದು
ಇಭವರದ ಗೋಪಾಲ ಕೃ-
ಷ್ಣವಿಠಲನಂಘ್ರಿ ಕಮಲ
ಶುಭಪ್ರದಾಯ ಕಾವುದೆಂಬ
ದೃಢದ ಬುದ್ಧಿ ಕೊಡುವ ತೆರವೊ ೩

## ೧೨೯

ಸುರನರ ವರಗುರು । ಸುರನರ ಪ.

ಸುರನರ ವರಗುರು ನಿನ್ನಾ । ದಿವ್ಯ
ಚರಣಕ್ಕೆ ಎರಗುವೆ ನಿನ್ನಾ । ಆಹ

ಕರುಣದಿಂದೀಕ್ಷಿಸಿ ವರಮತಿ ಪಾಲಿಸಿ
ಹರಿಯ ಶ್ರೀ ಚರಣಕ್ಕೆ ಎರಗಿಸು ಮನವನೂ ಅ.ಪ.

ಹಣ್ಣೆಂದು ನುಂಗೆ ಪೋದುದಕೇ । ಓದಿ
ತಣ್ಣಗೆ ಮಾಡಿದ ಮನಕೇ । ಹರಿ
ಯನ್ನು ಓಲೈಸಲು ಮರಕೇ । ಅಡರಿ
ಹೆಣ್ಣನ್ನೆ ತೊರೆದನು ವ್ರತಕೇ । ಆಹ
ಸಣ್ಣ ರೂಪದಿ ಪುರವನ್ನು ಶೋಧಿಸಿ । ಮುಡಿ
ಹೊನ್ನು ಸಲ್ಲಿಸಿ ವಾರ್ತೆಯನ್ನು ಪೇಳಿದ ಧೀರ ೧

ರಕ್ಕಸಿಯೊಳು ಪ್ರೇಮದಾಟಾ । ದನುಜ
ಗಿಕ್ಕಿದ ಕೂಳಿಗಾರಾಟ । ಅಣ್ಣ
ತಕ್ಕೊಂಡ ಎಡೆಯಲ್ಲಿ ಊಟ । ಬಲು
ಸೊಕ್ಕಿದರೊಡನೆ ಕಾದಾಟ । ಆಹ
ಮಕ್ಕಳ ಕೊಯ್ದವ ನಿಕ್ಕಿದಸ್ತ್ರಕೆ ತಲೆ
ಇಕ್ಕದೆ ಪುರವಾಳ್ದ ರಕ್ಕಸಾಂತಕ ದೂತ ೨

ಗುರುವಿಗೆ ವರೆದು ತತ್ವಾರ್ಥ । ಮತ್ತೆ
ಧರೆಯಲ್ಲಿ ಚರಿಸಿದ ವ್ಯಾಪ್ತಾ । ಮುನಿ
ವರರೊಳು ಬಲು ಶ್ರೇಷ್ಠನೀತಾ । ಪೇಳ್ದ
ಪರಿಶುದ್ಧ ವೇದ ಭಾವಾರ್ಥ । ಆಹ
ಸುರರುಷಿ ಪೂಜಿಪ ಹರಿಗಿರಿಯಲಿ ಸತ್ಯ
ವರಸೂನು ಚರಣದಿ ಗುರುಭಕ್ತಿರತ ವ್ರತ ೩

ದುಡಿದು ಸ್ವಾಮಿಗೆ ಪ್ರತಿಫಲವಾ । ಬೇಡ
ದಡಿಸೇವೆ ಕೈ ಕೊಂಡ ವ್ರತವಾ । ಗಿರಿ
ವಡೆದನು ಕೈ ಜಾರೆ ಶತವಾ ಮಾಡಿ
ಪಡೆದನು ಗೋಪಿ ಚಂದನವಾ । ಆಹ
ಕಡಲ ತೀರದಿ ತನ್ನ ವಡೆಯನ್ನ ನಿಲ್ಲಿಸಿ
ಅಡರಿದ ಹಿಮಗಿರಿ ದೃಢಕಾಯ ಹರಿಪ್ರೀಯ ೪

ಎಷ್ಟು ವರ್ಣಿಸಲಳವಿವನಾ । ಮಹ
ಗುಟ್ಟು ಮಂತ್ರವ ಸಾಧನವನಾ । ಮೂರು
ಬಟ್ಟೆ ಮಾಡುವ ನಂಬಿದವನಾ । ಜ್ಞಾನ
ಕೊಟ್ಟು ಕಾಯುವ ಕರುಣಿ ಮಾನ್ಯಾ । ಆಪ
ದಿಟ್ಟ ಗೋಪಾಲಕೃಷ್ಣವಿಠ್ಠಲ ಬ್ರಹ್ಮನ
ಪಟ್ಟ ಕಟ್ಟುವನೆಂದು ಘಟ್ಟಿ ಮನದಲಿಪ್ಪ ೫

## ೧೩೦

ಶ್ರೀ ಮಧ್ವಾಚಾರ್ಯ ಮುನಿ ಪ್ರೇಮದಲಿ ಸಲಹೊ ಪ.

ಕಾಮಪೂರ್ಣನೆ ಎನ್ನ ಕಾಮಿತವನೀಯೊ ಅ.ಪ.

ದ್ವಿತೀಯಯುಗದಲಿ ವಾಯುಸುತನಾಗಿ ಅವತರಿಸಿ
ಕ್ಷಿತಿಸುತೆಗೆ ಉಂಗುರವ ಹಿತದಿಂದಲಿತ್ತೆ
ತೃತಿಯುಗದಲಿ ಕುಂತಿಸುತನಾಗಿ ಕೌರವರ
ಹತಗೊಳಿಸಿ ಹರಿಯಪದ ಹಿತದಿ ಧ್ಯಾನಿಸಿದೆ ೧

ಕಲಿಯುಗದ್ಹೊಳವತರಿಸಿ ಕಲಿಕಲ್ಮಷವ ಕಳೆದು
ಒಲಿಸಿ ಹರಿಯನು ತುರಿಯ ಆಶ್ರಮದಲಿ
ಸುಲಭಮಾರ್ಗವ ತೋರಿ ಸುಜನರನು ರಕ್ಷಿಸಿದೆ
ಕಲಿಕಾಲ ಸಲಹೆನ್ನ ನೆಲಸಿ ಹೃದಯದಲಿ ೨

ಆಚಾರ್ಯರೂಪದಲಿ ಗೋಚರಿಸಿ ಸ್ವಪ್ನದಲಿ
ಸೂಚಿಸಿದೆ ದಾಸತ್ವ ಸಿದ್ಧಿಸಲಿ ಎಂದು
ಯಾಚಿಸೆನೊ ಅನ್ಯರನು ನಾಚಿಕೆಯ ತೊರೆದಿನ್ನು
ನೀಚತನವನೆ ಬಿಡಿಸಿ ಗೋಚರಿಸೊ ಸತತ ೩

ಉಪದೇಶವನೆ ಇತ್ತೆ ಗುಪಿತದಿಂ ಸ್ವಪ್ನದಲಿ
ಚಪಲತನದಲಿ ನಾನು ಅರಿಯಲಿಲ್ಲ

ಅಪರಿಮಿತ ಮಹಿಮ ಶ್ರೀ ಗುರುಗಳಲಿ ನೀ ನಿಂತು
ತಪ್ಪನೆಣಿಸದೆ ಎನ್ನ ನಮನ ಸ್ವೀಕರಿಸೊ ೪

ವೇದವ್ಯಾಸರ ಪ್ರಿಯನೆ ಮೋದದಲಿ ಶಿಶುವಾದೆ
ಶ್ರೀ ದುರ್ಗೆ ತಾ ಬಂದು ಎತ್ತಿದಳೊ ನಿನ್ನ
ವಾದಿಗಳ ಗೆದ್ದ ಅನಾದಿ ಮುನಿ ನಮಿಸುವೆನೊ
ಶ್ರೀದ ಗೋಪಾಲಕೃಷ್ಣವಿಠ್ಠಲನ ತೋರೊ ೫

## ಭಾರತೀ ದೇವಿ

### ೧೩೧

ಜಗದುದರನ ಸೊಸೆಯೆ ಶ್ರೀ ವಾಯು ಸತಿಯೆ
ಜಗದುದರನ ಸೊಸೆಯೆ ಪ.

ಸುಗುಣಿ ನಿನ್ನ ನಾ ಬಗೆ ಬಗೆ ವರ್ಣಿಸೆ
ಜಗದೊಳು ಖ್ಯಾತೆಯೆ ನಗಧರ ಪ್ರೀತೆಯೆ ಅ.ಪ.

ಸಾರಿ ಬಂದೆ ನಿನ್ನ ನಾರಿಮಣಿಯಳೆ
ತೋರೆ ಹರಿಪದ·ಭೂರಿ ಕರುಣದಿ ನೀ
ನಿರೆ ಸರಸಿಜೋದ್ಭವ ಸತಿ ಪದಕೆ
ಸೇರುವೆ ಮುಂದಿನ ಕಲ್ಪದಿ ಪತಿ ಸಹ
ಭಾರತಿ ನಿನ್ನಯ ವಾರಿಜಪದವನು
ಸೇರಿ ಸುಖಿಸುವಂಥ ದಯ ತೋರೆ ನೀ ೧

ದಾರಿ ತೋರಿ ನೀ ಪಾರುಗಾಣಿಸೆ
ತಾರತಮ್ಯದಿ ವಾರಿಜಾಂಬಕಿಯೆ
ಆರು ಅರಿಯದ ಹರಿಯ ಮಹಿಮೆಯ
ಸಾರತತ್ವ ನೀ ಪತಿಯಿಂದರಿತಿಹೆ
ಬಾರದು ಅಜ್ಞತೆ ನಿನಗೆ ಪ್ರಳಯದಿ
ನಾರಿ ರನ್ನೆ ಸರ್ವ ಬುದ್ಧ್ಯಭಿಮಾನಿಯೆ ೨

ಹಾರಪದಕವು ದೋರೆ ಕಂಕಣ
ನಾರಿ ನಿನ್ನನು ಯಾರು ವರ್ಣಿಪರೆ
ನಾರಿ ನಿನ್ನ ಪತಿದ್ವಾರದಿ ಎನ್ನ ಶ-
ರೀರದಿ ಸರ್ವನಿಯಾಮಕರೊಡನೆ
ತೋರೆ ಗೋಪಾಲಕೃಷ್ಣವಿಠ್ಠಲನ
ನೀರಜನಾಭನ ಶ್ರೀ ರಮೇಶನ ೩

## ೧೩೨

ಕಾಯೆ ಕಾಯೆ ಕಾಯೆ ಶ್ರೀ ಮಾರುತಿ ಜಾಯೆ ಪ.

ಸುರಸತಿಯರುಗಳಿಂ
ಪರಿಪರ ಓಲಗ
ಹರುಷದಿ ಕೈಗೊಂಬ
ಮರುತನ ಮಡದಿಯೆ ೧

ಇಂದಿರೆ ಪತಿಯನು
ತಂದು ತೋರಿಸೆ ಹೃನ್-
ಮಂದಿರದಲಿ ಬೇಗ
ಸಿಂಧುರಗಮನೆ ೨

ಕಾಲ ಕಾಲಕೆ ಮತಿ
ಪಾಲಿಸು ಶ್ರೀಗೋ
ಪಾಲಕೃಷ್ಣವಿ
ಠ್ಠಲನ ಸೊಸೆಯೆ ನೀ ೩

# ದ್ರೌಪದಿ ಸುಳಾದಿ

## ೧೩೩

ಶ್ರೀ ಗುರು ಪರಮಗುರು ವಿಜಯ ಪುರಂದರ ಗುರು
ನಾಗೇಶಾವೇಶ ಗುರು ಶ್ರೀಪಾದ ರಾಯ ಗುರು
ಯೋಗಿ ಟೀಕಾರ್ಯ ಗುರು ಶ್ರೀಮದಾಚಾರ್ಯ ಗುರು
ನಾಗಶಯನ ನೀನು ಸಕಲ ಜಗದ್ಗುರು
ಈತ ಗುರು ಸಂತತಿಗೆ ವಂದೀಸಿ ತಾತ್ವಿಕರ
ಜಾಗು ಮಾಡದೆ ನಮಿಪೆ ಜ್ಞಾನ ಪ್ರದಾತರೆಂದು
ಆಗಮ ಪೌರಾಣ ಶೃತಿ ತತಿಗಳೊಳೆಲ್ಲ
ಆಗುವಳಭಿಮಾನಿ ಭಾರತೀದೇವಿ ಎಂದು
ಈಗ ಈ ಮಹಿಮಳ ಚರಿತೆ ಬುದ್ಧಿಗೆ ದೇವಿ
ತಾಗಿಸಿದಂದದಿ ಸಾಗಲಿ ನುಡಿವುದು
ನಾಗರಾಜನ ಜನನಿ ಸ್ವಪ್ನದಿ ಸುಳಿದಳು
ಕೂಗಿದೆ ಅಯೋನಿಜೆ ದುಃಖರಹಿತಳೆಂದು
ಭಾಗವತರ ಕಾಯ್ವ ಭಾಗ್ಯ ಸಂಪನ್ನದೇವಿ
ಯೋಗಿ ಜನರಿಗೆಲ್ಲ ಗುರುಪತ್ನಿ ಎಂದೆನಿಪೆ
ಆಗಾಗ ಅವತರಿಸಿ ಅನಿಲನ ಕಾರ್ಯಕ್ಕೆ
ಆಗುವೆ ಸಹಕಾರಿ ಅಸುರರ ಸಂಹಾರಿ
ಶ್ರೀ ಗುರೋರ್ಗುರು ಹರಿ ಗೋಪಾಲಕೃಷ್ಣವಿಠಲ
ಭಾಗವತರ ಕಾಯ್ವ ನಿನ್ನದ್ವಾರದಿ ಸ್ಮರಿಸೇ ೧

ಕೃತಿಸುತೆ ಕೊಂಡದಿ ಉದಿಸಿ ಸುತೆ ಎನಿಸಿದೆ ದ್ರುಪದನಿಗೆ
ಚ್ಯುತರಹಿತ ಯೌವನಯುತೆ ಐವರಿಗರಸಿಯು ಆದೆ
ಪ್ರತಿಯಿಲ್ಲದ ಪತಿವ್ರತೆ ಸುರತತಿ ಜನನಿಯು ನೀನೌ ಮಾ–
ರುತ ಸುತನಲ್ಲದೆ ನಿನಗಿನ್ನಿತರರ ಸಂಗವು ಉಂಟೆ
ಸುತರಂದದಿ ನಾಲ್ವರ ತಿಳಿದತಿಶಯದಲಿ ಅವರವರಾ
ಸತಿಯರ ನಿನ್ನೊಳಗಡಿಗಿಸಿ ರತಿ ಕಾಲದಲೊಲಿದಿತ್ತೆ

ಮತಿವಂತರಿಗಲ್ಲದೆ ಪ್ರತಿ ಜನರಿಗೆ ಮೋಹಕವು
ಕ್ಷಿತಿಯೊಳು ನೀನವತರಿಸೀ ಕ್ಷಿತಿಗೇ ತೋರಿದ ಲೀಲೆ
ಅತಿ ಸೌಭಾಗ್ಯದಿ ಮೆರೆದೆ ಕ್ಷಿತಿಪತಿಸೂಯಾಗದಲಿ
ಖತಿಗೊಳ್ಳಲು ಖಳ ಜನರು ಸ್ಥಿತ ಸಾಮ್ರಾಜ್ಯವ ಕಂಡು
ಕ್ಷಿತಿಭಾರವನಿಳುಹಲು ಶ್ರೀಪತಿ ಪತಿಮನವರಿಯುತ ಕುರು
ಪತಿಸಭೆಯಲಿ ಭ್ರಮಿಸುತ ಜಾರುತ ಸರಸಿಯೋಳ್ ಬೀಳುತಿರೆ
ಪತಿ ಶ್ರೀಪತಿ ಮೊಗವೀಕ್ಷಿಸಿ ಅತಿ ಹಾಸ್ಯದಿ ನೀ ನಗಲು
ಖತಿಗೊಳ್ಳಲು ಕುರುಪತಿ ಕಲಕಿತು ದ್ವೇಷದ ಭಾವಗಳು
ಕ್ಷಿತಿ ಪತಿ ಭಾರದ ಹರಣಕೆ ಮೂಲಾಯಿತು ನಿನ್ನಯ ನಗೆ ಕಿಡಿ ತಾ
ಕಾತುರಕ್ಕಸ ತರುಗಳಿಗೆ ಸೋಕಿತು ಕಾಮನ ಬಿಸಿಯು
ಮತಿಹೀನರು ನಿನ್ನನು ಬಯಸುತ ಬರೆ ದ್ವೇಷಾಗ್ನಿ ಜ್ವಲಿ
ಸುತ ವಾಯು ಸಹಾಯದಲಿ ಹುತಗೈಸಿದೆ ಖಳತತಿಯ
ಪತಿಯಂತರ್ಗತ ಕೃಷ್ಣನ ನುತಿಸುತ ಭಕ್ತ್ಯಾಜ್ಯಾಹುತಿ
ಕ್ರತು ಎಂದರಿತರ್ಪಿಸುತಲಿ ಕ್ಷಿತಿ ಭಾರವನಿಳುಹಿಸಿದೆ
ಹಿತತಂಗಿಯೆ ಗೋಪಾಲಕೃಷ್ಣವಿಠ್ಠಲಗೇ ನೀ
ಪ್ರತಿಯುಂಟೆ ನಿನಗೆ ಈ ಕ್ಷಿತಿಯೊಳು ನಾಕಾಣೆ ೨

ಮಡಿಯದೆ ದುರ್ಯೋಧನನು ಮುಡಿಯನು ಕಟ್ಟೆನು ಎಂಬ
ದೃಢ ಸಂಕಲ್ಪಳೆ ಪುಷ್ಪ ಮುಡಿಯಲಪೇಕ್ಷಿಸಿದೆ ನೀ
ಒಡೆಯುವರುಂಟೇ ಇದರ ಒಡಲಿನ ಮರ್ಮವ ದೇವಿ
ಒಡೆಯ ವೃಕೋದರ ನಿನ್ನ ನುಡಿ ಕೇಳುತ ವನ ಪೊಕ್ಕು
ಮಡುಹುತ ಯಕ್ಷರ ತಂದು ಮುಡಿಸಿದ ಸೌಗಂಧಿಕವ
ಪೊಡವಿಯೊಳ್ಹರಡಿತು ವಾರ್ತೆ ಒಡಲರಿಯದೆ ಜನತತಿಗೆ
ಪಿಡಿಯುತ ಕರದಲಿ ಪುಷ್ಪ ಒಡೆಯನ ಪ್ರೇಮದಿ ನೋಡಿ
ಮುಡಿಸಿದೆ ಸಿರಿಹರಿ ಮುಡಿಗೆ ಕಡು ಭಕ್ತಿಯೊಳಂತರದಿ
ಬಿಡುಬಿಡು ಬಿಂಕವ ಲೀಲೆ ಕೊಡು ಕೊಡು ಭಕ್ತಿಯ ಬಾಲೆ
ಪಡಿಸಾನಂದವ ಶೀಲೆ ನುಡಿಸಡಿಗಡಿಗ್ಹರಿ ಲೀಲೆ
ಒಡಗೂಡತ ಪತಿಯೊಡನೆ ನಡೆಸಿದ ಚರಿತೆಗಳೆಲ್ಲ

ಕಡು ಮೋಹವು ರಜ ತಮರಿಗೆ ಕೊಡುವುದು ಸುಖ ಸುಜನರಿಗೆ
ಪೊಡವಿಪತಿ ಗೋಪಾಲಕೃಷ್ಣವಿಠಲ ನಿನ್ನ
ನಡೆನುಡಿ ಮೆಚ್ಚುತ ನಡೆಸಿದ ಭಾರತ ನಾಟಕವ ೩

ಆನಂದ ಜ್ಞಾನಪೂರ್ಣೆ ಆಗಾಗ ಒದಗಿದ
ಹೀನ ದುಃಖದ ಸೋಂಕು ಉಂಟೆ ನಿನಗೆ ಇನ್ನು
ಪ್ರಾಣಪತಿಗಳೈವರೆದುರಲಿ ಖಳ ನಿನ್ನ
ಮಾನ ಹಾನಿಯ ಗೈಸೆ ಜಗವೆ ತಲ್ಲಣಿಸಿತು
ಮಾನಾಭಿಮಾನ ಬಿಟ್ಟು ಶ್ರೀನಿಧಿ ಗತಿ ಎನ್ನೆ
ಕಾಣಿಸಿತಾನಂತ ಅಕ್ಷಯ ವಸನವು
ಪ್ರಾಣಪಂಚಕ ಹರಿಯಾಧೀನವೆಂಬುವ ತತ್ವ
ಪ್ರಾಣಕ್ಕೆ ಪ್ರಾಣಬಿಂಬ ಸ್ವಾಮಿ ಎಂಬುವ ತತ್ವ
ಮಾನಾಭಿಮಾನ ತೊರೆದು ಪ್ರಾಣೇಂದ್ರಿಯವ ಜರಿದು
ಮಾನಸದಲಿ ಹರಿಯ ಸ್ಮರಿಸಿದರಕ್ಷಯ
ಸ್ಥಾನಪ್ರಾಪ್ತಿಯು ಎಂಬ ತತ್ವರಹಸ್ಯಗ–
ಳಾನು ಸೂಚಿಸೆ ನಿನ್ನ ಕೃತಿಯಲ್ಲದಿನ್ನಿಲ್ಲ
ದಾನವರೆಲ್ಲ ನಿನ್ನ ಕಾಮಿಸಿ ನೋಡಲವರು
ಏನೆಂಬೆ ಮಾಡಿದಂಥ ಅಲ್ಪಸ್ವಲ್ಪದ ಪುಣ್ಯ
ಕ್ಷೀಣಗೈಸುತ ಸೆಳೆದು ಹೀನ ಪಾಪದಿ ನೂಕಿ
ಹಾನಿಗೈಸಿದೆ ಪವಮಾನಸುತನಿಂದಲಿ
ಮಾನುನಿಮಣಿ ಸರ್ವಕ್ಷೇಮ ಪಾಲಿಪ ಭಕ್ತ–
ರಾನನದಲಿ ನೋಡೆ ಜ್ಞಾನಾನಂದವನಿತ್ತು
ಹೀನ ನರಕದಿ ಬಿದ್ದ ಭ್ರಾತೃಸಹಿತದಿ ಕುರುಪ
ಕಾಣದೆ ನಿನ್ನ ಮಹಿಮೆ ಜ್ಞಾನರಹಿತನಾಗಿ
ಜಾಣೆ ಶ್ರೀ ಗೋಪಾಲಕೃಷ್ಣವಿಠ್ಠಲನ ನಿಜ
ಜ್ಞಾನ ಪಾಲಿಸಿ ಕಾಯೆ ಭೀಮಸೇನನ ಜಾಯೆ ೪

ಮುಕ್ತರ ಬಂಧುವೆ ನೀನು ಭಕ್ತಿಯದಾತಳೆ ನೀನು
ತತ್ವ ತಿಳಿಸುವೆ ನೀನು ಚಿತ್ತದೆ ನೆಲಸುವೆ ನೀನು
ಹತ್ತದು ದುಃಖವು ನಿನಗೆ ಸುತ್ತದು ಶೋಕವು ನಿನಗೆ

ಮುಕ್ತಾರ್ಥವ ಕೊಡುವವಳೆ ಮತ್ತೆ ಅಯೋನಿಜಹಳೆ
ಮುತ್ತು ಮಾಣಿಕ್ಯವು ನವರತ್ನದ ಆಭರಣಗಳ
ಉತ್ತಮ ವಸನ ಕಂಚುಕ ನೆತ್ತಿಲಿ ಮಕುಟವನಿಟ್ಟು
ಚಿತ್ತದೊಲ್ಲಭನಂಕದಲಿ ಹತ್ತಿ ಸಿಂಹಾಸನದಲಿರೆ
ಸುತ್ತಲು ಸೌಪರ್ಣ್ಯಾದಿ ಸುರಸ್ತ್ರೀಯರು ಓಲೈಸೆ
ಚಿತ್ತದಿ ಸಿರಿಹರಿಯನು ಭಕ್ತಿಲಿ ಭಜಿಸುತ ಮುಕ್ತಾ-
ಮುಕ್ತರ ಕೃಪಪಾಂಗದಲಿ ಸುತ್ತಲೀಕ್ಷಿಸಿ ಕಾವೆ
ಭಕ್ತಿಲಿ ದ್ರೌಪದಿ ಎಂದು ಎತ್ತಿದ ಸ್ವರದಲಿ ಕೂಗೆ
ಚಿತ್ತದೊಲ್ಲಭನೊಡನೆ ಚಿತ್ತೈಸೆನ್ನಯ ಮನಕೆ
ಹತ್ತಿಕಾಡುವ ಎನ್ನ ದುಷ್ಕೃತ ಕರ್ಮಗಳೆಲ್ಲ
ಕತ್ತರಿಸುತ ಕಾಯಮ್ಮ ಸತ್ಯಾಪ್ರಿಯನನು ತೋರೆ
ಆರ್ತಜನರ ಪಾಲ ಗೋಪಾಲಕೃಷ್ಣವಿಠ್ಠಲನ್ನ
ಅರ್ಥಿಯಿಂದಲಿ ಎನ್ನ ಚಿತ್ತದಿ ತೋರೆಲೆ ಜನನಿ ೫

## ಜತೆ

ತತ್ವದೇವತೆಗಳ ಜನನಿ ತತ್ವಾರ್ಥ ತಿಳಿಸೇ
ಆಪ್ತ ಗೋಪಾಲವಿಠ್ಠಲನೆಂದೆನಿಸೇ

## ಶೇಷ-ರುದ್ರದೇವರು

### ೧೩೪

ಕಂಡೆ ನಾನೀಗ ಈ ದಿವ್ಯ ಪಾದ ಭೂ-
ಮಂಡಲದೊಳು ಚರಿಸಿ ಉದ್ಧರಿಪ ಪಾದ ಪ.

ಹರಿಗೆ ಹಾಸಿಗೆಯಾಗಿ ಹರುಷಪಡುವ ಪಾದ
ಹರಿಯ ಮಂದಿರಲ್ಲಿ ಇರುವ ಪಾದ
ಹರ ಪುರಂದರರಿಗೆ ಪೂಜ್ಯವಾಗಿಹ ಪಾದ
ಹರ ಪದವಿಯಿಂ ಬಂದು ಮೆರೆವ ಪಾದ ೧

ವಾರುಣಿ ದೇವಿಗೆ ವರನೆನಿಸಿದ ಪಾದ
ಶ್ರೀ ರಾಮಗೆ ಕಿರಿಯನಾದ ಪಾದ
ಘೋರ ಇಂದ್ರಾರಿಯ ಸಂಹರಿಸಿದ ಪಾದ
ದ್ವಾರಕಾಪುರದಲ್ಲಿ ಮೆರೆವ ಪಾದ ೨

ವಾಯುದೇವರು ಜೊತೆಗೆ ವಾದವಾಡಿದ ಪಾದ
ನೋಯದೆ ಭೂಮಿಯನು ಪೊತ್ತಿಹ ಪಾದ
ಶ್ರೀಯರಸನ ಪಾದಪದ್ಮ ಸೇವಿಪ ಪಾದ
ಬಾಯಬಿಡುತಿರೆ ಸುರರು ಸುಧೆ ಕಡೆದ ಪಾದ ೩

ಸಪ್ತೆರಡು ಭುವನದಲಿ ಗುಪ್ತವಾಗಿಹ ಪಾದ
ಚಿತ್ತದಭಿಮಾನಿಗೆ ಸೇವಕನಾದ ಪಾದ
ಮತ್ತೆ ಮನ ಅಹಂಕಾರ ತತ್ವದೊಡೆಯನ ಪಾದ
ತೃಪ್ತ ಶರಣರಿಗೀವ ಕರುಣ ಪಾದ ೪

ಘೋರರೂಪವ ತೊರೆದು ಸೌಮ್ಯವಾಗಿಹ ಪಾದ
ಸೇರಿದವರನು ಪೊರೆವ ಶ್ರೇಷ್ಠ ಪಾದ
ಹಾರೈಸಿ ಗೋಪಾಲಕೃಷ್ಣವಿಠ್ಠಲನ ಪಾದ
ಸಾರಿ ಭಜಿಸುತ ಸೌಖ್ಯ ಪೊಂದಿರುವ ಪಾದ ೫

## ೧೩೫

ನಾಟ್ಯವಾಡಿದ ನಮ್ಮ ನಾರಸಿಂಹನ ಭಕ್ತ
ಶಿಷ್ಟೇಷ್ಟ ಜನಪ್ರಿಯ ಶ್ರೀ ಪಾರ್ವತೀಶ ಪ.

ಪರಮ ಸಂತೋಷದಲಿ ಉದಯಸ್ತ ಪರಿಯಂತ
ಸಿರಿವರ ರಾಮನ ಪರಮ ನಾಮಾಮೃತವ
ತರುಣಿ ಗಿರಿಜೆಗೆ ಅರುಹಿ ಮರೆದು ತನುಮನವನ್ನು
ಉರುತರದ ಭಕ್ತಿಯಿಂ ಪರಮ ವೈರಾಗ್ಯನಿಧಿ ೧

ತರತಮ್ಯ ಜಗಸತ್ಯ ಹರಿಯು ಸರ್ವೋತ್ತಮನು
ಸಿರಿಯು ಅನಂತರದಿ ವಾಯು ಜೀವೋತ್ತಮನು
ಪರಮ ವೈರಾಗ್ಯ ಹರ ವೈಷ್ಣವೋತ್ತಮನೆನುತ
ಉರವಣಿಸಿ ನುಡಿಯುವರ ನುಡಿ ಕೇಳಿ ಹರುಷದಿ ೨

ಗೋಪಾಲಕೃಷ್ಣವಿಠಲ ತಾ ಪ್ರೀತಿಯಿಂದಲಿ
ಗೋಪತನಯರನೆಲ್ಲ ಸಲಹಲೋಸುಗದಿ
ಪಾಪಿ ಕಾಳಿಂಗನ ಫಣೆಯಲ್ಲಿ ಕುಣಿದುದು
ಈ ಪರಿ ಎಂದೆನುತ ತಾ ಪ್ರೀತಿಯಿಂ ತೋರಿ ೩

## ೧೩೬

ಪಾಲಿಸು ಶಂಕರನೆ ಪಾರ್ವತಿ ಪತೆ
ಪಾಲಿಸು ಶಂಕರನೆ ಪ.

ಹರಚರ್ಮಾಂಬರ ಗೌರಿ ಮನೋಹರ
ಸುರನರ ವಂದಿತ ಗರಳಕಂಧರನೆ ೧

ಮನದಭಿಮಾನಿಯೆ ಸನುಮತದಲಿ ಎನ್ನ
ಮನದಲಿ ಶ್ರೀ ಹರಿ ವನಜ ಪಾದವ ತೊರೋ ೨

ಶ್ರೇಷ್ಠನೆ ಗೋಪಾಲಕೃಷ್ಣವಿಠ್ಠಲನಿಗೆ
ಪುಟ್ಟ ಮೊಮ್ಮಗ ನೀನೆ ತುಷ್ಟಿಯಿಂದಲಿ ಕಾಯೊ ೩

## ೧೩೭

ಪಾಲಿಸೋ ಗಂಗಾಧರ ಪಾಲಿಸೋ ಪ.

ಪಾಲಿಸೊ ಗಂಗಾಧರನೆ । ಮಧ್ಯ
ಫಾಲದಿ ನಯನ ಉಳ್ಳವನೆ । ಆಹ

ಶ್ರೀಲೋಲನ ಗುಣಜಾಲವ ಸ್ಮರಿಸುತ್ತ
ಲೀಲೆಯಿಂ ಭಕ್ತರ ಪಾಲಿಸುತಿಪ್ಪನೆ ಅ.ಪ.

ಬ್ರಹ್ಮನ ಭ್ರೂಮಧ್ಯೆ ಜನಿಸಿ । ಬಹು
ದುರ್ಮತಿಗಳನೆ ಮೋಹಿಸಿ । ಕು
ಧರ್ಮದ ಶಾಸ್ತ್ರವ ರಚಿಸಿ । ಅಂ
ಧತಮ್ಮಸಿಗವರ ಕಳಿಸಿ । ಆಹ
ನಿರ್ಮಲ ಮನದಲ್ಲಿ ಬೊಮ್ಮನಯ್ಯನ ಭಜಿಸಿ
ಉಮೆಯೊಡನೆ ನಿತ್ಯ ರಮಿಸುತಲಿಪ್ಪನೆ ೧

ಕಂಜನಾಭನ ಮೊಮ್ಮಗನೆ । ಖಳರ
ಭಂಜಿಸುವಂಥ ಬಲಯುತನೆ । ಮನ
ರಂಜನ ರೂಪಾಕೃತನೆ । ಖಳ
ಗಂಜಿ ಹರಿಯಿಂದ ರಕ್ಷಿತನೆ । ಆಹ
ಅಂಜಿ ದೈತ್ಯರಿಗೆ ಅಮೃತ ಮಥಿಸುವಾಗ
ನಂಜುದ್ಭವಿಸೆ ಕುಡಿದು ನಂಜುಂಡನೆನಿಸಿದೆ ೨

ಕಪಿಲನದಿ ತೀರದಲ್ಲಿ । ಬಹು
ತಪಸಿಗಳಿಗೆ ಒಲಿಯುತಲಿ । ಭಕ್ತ
ರಪರಿಮಿತ ಬರುತಿಲ್ಲಿ । ನಿತ್ಯ
ಜಪಿಸುತ್ತ ನಿನ್ನ ಸ್ತೋತ್ರದಲಿ । ಆಹ
ಗುಪಿತದಿಂದ್ಹರಿ ಭಕ್ತರಪವರ್ಗದೊಡೆಯ ನಿನ್ನ
ಲ್ಲಿಪ್ಪನೆಂತೆಂದು ಜಪಿಸುತ್ತಲಿಪ್ಪರೊ ೩

ಗಂಗಾಧರನೆನಿಸಿದನೆ । ಅಂತ
ರಂಗದಿ ಹರಿಯ ತೋರುವನೆ । ಉಮೆ
ಕಂಗಳಿಗಾನಂದಪ್ರದನೆ । ನಿತ್ಯ
ರಂಗನಾಥನ ಪೂಜಿಸುವನೆ । ಆಹ

ಜಂಗಮ ಜೀವರ ಮನದಭಿಮಾನಿಯೆ
ಲಿಂಗರೂಪದಿ ಜನರ ಕಂಗಳರಂಜನೆ ೪

ಅಪಾರ ಮಹಿಮನ ಗುಣವ । ಬಹು
ರೂಪಗಳನೆ ನೋಡುತಿರುವ । ನಿತ್ಯ
ಶ್ರೀಪತಿ ನರಹರಿಯ ನೆನೆವ । ಮುಂದಿ
ನಾ ಪದವಿಗೆ ಶೇಷನಾಗ್ವ । ಆಹ
ಈ ಪರಿ ಮಹಿಮನೆ ನೀ ಪರಿ ಪರಿಯಿಂದ
ಗೋಪಾಲಕೃಷ್ಣವಿಠ್ಠಲನ ಧ್ಯಾನವ ನೀಡೊ ೫

## ೧೩೮

ಲಿಂಗನ ನೋಡಿದೆ । ಭವ ಭಸಿ–
ತಾಂಗನ ನೋಡಿದೆ ಪ.

ರಂಗನ ತನ್ನಂಗದೊಳಗೆ ಇಟ್ಟು
ಹಿಂಗದೆ ನೆನೆಯುವ ಮಂಗಳ ಮೂರುತಿ ಅ.ಪ.

ತ್ರ್ಯಕ್ಷನ ನೋಡಿದೆ । ಕರುಣಕ–
ಟಾಕ್ಷನ ನೋಡಿದೆ
ವೀಕ್ಷಣದಿಂದ ಶ್ರೀ ವಕ್ಷನ ಸುತನನು
ಶಿಕ್ಷಿಸಿದ ಫಾಲಾಕ್ಷನ ಶಿವನ ೧

ಹರನನು ನೋಡಿದೆ । ಗಂಗಾ–
ಧರನನು ನೋಡಿದೆ
ಗಿರಿಜೆವಲ್ಲಭ ಭಾಸುರ ವಂದಿತನಾ
ಸರಿತು ತುಂಗ ಪಂಪಾಪುರವಾಸನ ೨

ಶೂಲಿಯ ನೋಡಿದೆ । ರುಂಡ
ಮಾಲಿಯ ನೋಡಿದೆ

ಕೈಲಾಸದಿ ಉಮೆ ಲೋಲನೆನಿಸಿ ಇಲ್ಲಿ
ವ್ಯಾಳಭೂಷಣನಾಗಿ ಲೀಲೆಯೊಳ್ ಮೆರೆವನ ೩

ಈಶನ ನೋಡಿದೆ । ನರಹರಿ
ದಾಸನ ನೋಡಿದೆ
ಪಾಶುಪತಾಸ್ತ್ರವ ವಾಸವಜನಿಗಿತ್ತ
ಪೋಷಿಕಿರಾತನ ವೇಷನ ಹರುಷದಿ ೪

ದಿಟ್ಟನ ನೋಡಿದೆ । ವೈಷ್ಣವ
ಶ್ರೇಷ್ಠನ ನೋಡಿದೆ
ವೃಷ್ಣೀಶ ಗೋಪಾಲಕೃಷ್ಣವಿಠ್ಠಲನಿಗೆ
ಪುಟ್ಟ ಮೊಮ್ಮಗನಾಗಿ ತುಷ್ಟಿಪಡಿಸುವನ ೫

## ೧೩೯

ಸೋಮ ಶಿವ ಶರ್ವ ಭವ ಕಾಮಹರ ನಿನ್ನಂಘ್ರಿ
ತಾಮರಸಯುಗಳ ಭಜಿಸುವೆ । ಭಜಿಸಿ ಬಿನ್ನೈಸುವೆ
ಶ್ರೀ ಮನೋಹರನ ತೋರಯ್ಯ ೧

ಕೃತ್ತಿವಾಸನೆ ಎನ್ನ ಚಿತ್ತದಲಿ ಹರಿಯಪದ
ನಿತ್ಯದಲಿ ಭಜಿಪ ಮತಿ ನೀಡೊ । ಮತಿ ನೀಡೊ ಪಾರ್ವತಿ
ಚಿತ್ತದೊಲ್ಲಭನೆ ನಮಿಸುವೆ ೨

ಸುವರ್ಣಮುಖರಿಯ ತೀರದಲಿ ನೆಲಸಿರುವೆ
ಶ್ರೀ ವರಾಹನಂಘ್ರಿ ಭಜಿಸುತ್ತ । ಭಜಿಸುತ್ತ ನೆಲಸಿರುವ
ಪಾವನರೂಪ ಸಲಹಯ್ಯ ೩

ಕಾಳಸ್ತಿನಿಲಯನೆ ಪೇಳಲಿನ್ನೇನು ನಾ
ತಾಳಲಾರೆನು ಈ ಭವಬಂಧ । ಭವಬಂಧ ಬಿಡಿಸುವ
ವ್ಯಾಳ ಶಯನನ್ನ ತೋರೈಯ್ಯ ೪

ಭಕ್ತರಿಗೊಲಿದು ಅಪಮೃತ್ಯು ಪರಿಹರಿಸಿದೆ
ಸತ್ಯ ಸಂಕಲ್ಪ ನಿನ್ನಂಘ್ರಿ । ನಿನ್ನಂಘ್ರಿ ಕಮಲಗಳ
ಚಿತ್ತದಲಿ ತೋರಿ ಸಂತೈಸು ೫

ಮನಕೆ ಗುರು ನೀನಹುದು ಮನವ ಹರಿಯಲಿ ನೆಲಸೊ
ಮನಸಿಜ ವೈರಿ ಮಮತೆಯಿಂ । ಮಮತೆಯಿಂದಲಿ ನಿತ್ಯ
ಮನಶುದ್ಧಿಗೈದು ಕಾಯಯ್ಯ ೬

ಶಂಖಚಕ್ರವ ಪಿಡಿದ ಸಂಕರ್ಷಣನ ರೂಪ
ಶಂಕಿಸದೆ ನಿತ್ಯ ಭಜಿಸುವೆ । ಭಜಿಸುವೆ ಕೈಲಾಸ
ಅಂಕದಲಿ ನೆಲಸಿ ಹರುಷದಿ ೭

ನರಸಿಂಹ ರೂಪವನು ಸ್ಮರಿಸುತ್ತ ಮೈಮರೆವೆ
ಉರುತರ ಭಾವ ಭಕ್ತಿಯಲಿ । ಭಕ್ತಿಯಲಿ ಭಜಿಪ ನಿನ್ನ
ಸ್ಮರಿಸುವರ ಭಯವ ಹರಿಸುವೆ ೮

ಶ್ರೀ ರಾಮನಾಮವನು ಪ್ರೇಮದಿಂದುಮೆಗರುಹಿ
ಆರಾರು ಅರಿಯದಾನಂದ । ಆನಂದವಿತ್ತೆ ಭವ
ತಾರಕವೆಂದು ಕರುಣಾಳೂ ೯

ಅಜನ ಭ್ರೂಮಧ್ಯದಲಿ ಜನಿಸಿದೆಯೊ ಜಗದಲ್ಲಿ
ಅಜಸುತನ ಯಾಗ ಭಂಜನ । ಭಂಜನಗೊಳಿಸಿದೆ
ತ್ರಿಜಗದಲಿ ನಿನಗೆ ಸರಿಯುಂಟೆ ೧೦

ಶೇಷ ಪರ್ಯಂಕನಿಗೆ ಹಾಸಿಗೆಯಾಗಲು
ತೋಷದಲಿ ತಪವಾಚರಿಸಿದೆ । ಚರಿಸಿ ಸಾಧಿಸಿದೆ ನೀ
ಶೇಷ ಪದವಿಯನು ತ್ರಿನೇತ್ರ ೧೧

ಸುರರು ಅಸುರರು ಕೂಡಿ ಶರಧಿ ಮಥಿಸಲು
ಗರಳ ಉದ್ಭವಿಸಿ ಭಯವಾಗೆ । ಭಯವಾಗಿ ಪರಿಹರಿಸಿ
ಗರಳವನೆ ಕುಡಿದೆ ಶ್ರೀ ಕಂಠ ೧೨

ಅಸುರರ ವಂಚಿಸಿದ ವಶವಲ್ಲದ ಹೆಣ್ಣು
ವಶವಾಗಲೆಂದು ಹಾರೈಸಿ । ಹಾರೈಸಿ ಬಳಲುತಿರೆ
ಬಿಸಜಾಕ್ಷ ನಿನ್ನ ಸಲಹಿದ ೧೩

ತಾರಕಾಸುರನಿಂದ ಘೋರಪಡುತಿರೆ ಜಗವು
ಮಾರ ಪೂಲಸ್ತ್ರ ಎಸೆಯಲು । ಎಸೆಯಲು ದಹಿಸಿ ಕು–
ಮಾರನನು ಪಡೆದೆ ಗಿರಿಜೇಶ ೧೪

ಸ್ತುತಿಪ್ರಿಯ ನಿನ್ನ ನಾ ಸ್ತುತಿಸಲಾಪೆನೆ ಮಂದ
ಮತಿ ಎಂದು ನೀನೆ ಸಂತೈಸೊ । ಸಂತೈಸಬೇಕಿನ್ನು
ಮತಿಯಿತ್ತು ಹರಿಯ ಪದದಲ್ಲಿ ೧೫

ಶಿರದಲ್ಲಿ ಗಂಗೆ ಚಂದ್ರನ ಮೆರೆಯುವ
ಉರಗ ಭೂಷಣನೆ ಕೇಳಿನ್ನು । ಕೇಳಿನ್ನು ಎನ್ನ ಮನ
ಮರೆಯದೆ ಹರಿಯ ನೆನೆಯಲಿ ೧೬

ವಿಷ್ಣು ಭಕ್ತರೊಳಗೆ ಶ್ರೇಷ್ಠ ನೀನಹುದಯ್ಯ
ಜಿಷ್ಣುವಿಗೆ ಮೆಚ್ಚಿ ಧನುವಿತ್ತೆ । ಧನುವಿತ್ತೆ ಗೋಪಾಲ–
ಕೃಷ್ಣವಿಠ್ಠಲನ ತೋರಯ್ಯ ೧೭

## ೧೪೦

ಹಾಲಹಲ ಉಂಡ ನಮ್ಮ ಪಾರ್ವತಿಯ ಗಂಡ ಪ.

ನೀಲಕಂಠನೆಂದೆನಿಸುತ ಸುರರನು ಪಾಲಿಸಿದನು ಕಂಡ್ಯಾ ಅ.ಪ.

ಸುರರು ಅಸುರರು ಕೂಡಿ ಶರಧಿಯ
ಭರದಿ ಮಥನವ ಮಾಡಿ
ಗರಳವು ಉದ್ಭವಿಸಲು ಕಂಗೆಡುತಲಿ
ಹರನನು ಸ್ತುತಿಮಾಡಿ ೧

ಮೃತ್ಯುಂಜಯ ಪಾಹಿ । ಸಲಹೊ
ಕೃತ್ತಿ ವಾಸನೆ ಪಾಹಿ
ಮೃತ್ಯುವಾದ ವಿಷ ಭಯವನೆ ಬಿಡಿಸೈ
ಸತ್ಯವಿಕ್ರಮ ಪಾಹಿ ೨

ಪರಿಪರಿ ಸ್ತುತಿಗೈಯೆ । ಹರಮನ
ಕರಗುತ ಕೃಪೆ ಗೈಯೆ
ಗಿರಿಜೆ ನೀಡು ಅಪ್ಪಣೆ ವಿಷ ಕುಡಿವೆನು
ಪರಮ ಮಂಗಳ ಕಾಯೆ ೩

ತನುಸುಖವ ತೊರೆದು । ಲೋಕವ
ಸನುಮತದಲಿ ಕಾಯ್ದು
ಘನಕೀರ್ತಿಯನು ಪಡೆಯಲು ಹರಿ ಮೆಚ್ಚುವ
ಎನುತ ಗಿರಿಜೆಗೆ ಪೇಳ್ದು ೪

ಕರದಿ ಸೆಳೆದು ಕುಡಿದ । ವಿಷವನು
ಭರದಲಿ ವಿಧಿ ಕಂದ
ಉರಕಿಳಿಯದೆ ನಿಂತಿತು ತಾ ಕಂಠದಿ ಶ್ರೀ
ಹರಿಯ ಕೃಪೆಯಿಂದ ೫

ಜಗವ ದಹಿಪ ಕಾಳಕೂಟವ
ನಗಜೇಶನು ಕೇಳ
ಬಿಗಿದು ಕಂಠದಿ ನಿಲ್ಲಿಸಿ ಲೋಕವ
ಪೊರೆದನು ಉರಿಫಾಲ ೬

ಪೋಯ್ತು ಕಾಳರಾತ್ರಿ । ಮಂಗಳ
ಆಯಿತು ಶಿವರಾತ್ರಿ
ಶ್ರೀಯರಸ ಗೋಪಾಲಕೃಷ್ಣ
ವಿಠ್ಠಲನ ಪ್ರೀತಿ ಪಾತ್ರ ೭

## ತುಳಸೀ ದೇವಿ

### ೧೪೧

ಉದಯ ಕಾಲದೊಳೆದ್ದು ಮುದದಿಂದ ಶ್ರೀ ತುಳಸಿ
ಪದುಮನಾಭನ ಸತಿ ಉದ್ಧರಿಸೆನ್ನನೆಂದು
ಉದಕವೆರೆದು ನಮಸ್ಕರಿಸಿ ವಂದಿಸುತಲಿ
ಸುಧೆಯ ಸುರರಿಗಿತ್ತ ಧನ್ವಂತರಿ ನಯನದಿ
ಉದಿಸಿದೆ ಆನಂದ ಅಶ್ರುಗಳಿಂದಲಿ
ಮದಗರ್ವ ಬಿಡಿಸೆನ್ನ ಶುದ್ಧಿಯನ್ನೆ ಮಾಡಿ
ಹೃದಯದಿ ಹರಿಯ ತೋರಿ ರಕ್ಷಿಸೆಂದೆನಲು
ಸದ್ದಿಲ್ಲದೆ ಪೊರೆವ ಗೋಪಾಲಕೃಷ್ಣವಿಠ್ಠಲ

### ೧೪೨

ಜಯ ಮಂಗಳಂ ನಿತ್ಯ ಶುಭ ಮಂಗಳಂ
ದಯದಿ ಭಕ್ತರ ಪೊರೆವ ಜಯ ತುಳಸಿಗೆ ಪ.

ವೃಂದಾವನದ ಮಧ್ಯೆ ಅಂದದಲಿ ಮೆರೆವಳಿಗೆ
ವೃಂದಾರಕರಿಗೆಲ್ಲ ಅತಿಪ್ರಿಯಳಿಗೆ
ವೃಂದಾರಕೇಂದ್ರ ಮುನಿವಂದ್ಯನ ಸತಿಯಳಗೆ
ವೃಂದಾರಕರ ಮಧ್ಯೆ ಶ್ರೇಷ್ಠಳಾದಳಿಗೆ ೧

ಹರಿಯ ಆನಂದಬಾಷ್ಪಗಳಿಂದ ಜನಿಸುತ
ಹರಿಯನ್ನೆ ವರಿಸಿ ಹರಿಸೇವೆ ಮಾಳ್ಪಳಿಗೆ
ಅರೆಘಳಿಗೆ ಅಗಲಿ ನಾನಿರಲಾರೆನೆಂಬಂತೆ
ಹರಿಯ ಮರುಳುಗೊಳಿಸಿ ಹರುಷಪಡುವಳಿಗೆ ೨

ವರದಳದ ಮಧ್ಯದಿ ಹರಿ ಬಂದು ನೆಲಸಿರಲು
ಸಿರಿಲಕುಮಿ ಆವೇಶದಿಂದ ಮೆರೆವಳಿಗೆ ಸ-
ರ್ವರಂತರ್ಯಾಮಿ ಗೋಪಾಲಕೃಷ್ಣವಿಠ್ಠಲ
ಸರ್ವೇಷ್ಟದಾಯಕನ ತೋರುವಳಿಗೆ ೩

## ೧೪೩

ಪೂಜಿಸುವೆನೆ ತುಳಸಿ ನಿನ್ನ ಬೇಗ ಸಲಹೆ ನೀ ಪ.

ಜಾಜಿ ಮಲ್ಲಿಗೆ ಕುಸುಮದಿಂದ ಪೂಜೆಗೈಯ್ಯುವೆ ಅ.ಪ.

ಧ್ಯಾನ ಆವಾಹನೆಯಿಂದ ಶ್ರೀ ವರನ ಸಹ
ನಾನಾ ಮಂಗಳ ದ್ರವ್ಯದಿ ನಾನು ಪೂಜಿಪೆ ೧

ವೃಂದಾವನದಿ ಮೆರೆಯುವವಳೆ ಸುಂದರಾಂಗಿಯೆ
ನಂದಕಂದಗೆ ಮಾಲೆಯವಳೆ ಇಂದು ಕರುಣಿಸೆ ೨

ಗೋಪಾಲಕೃಷ್ಣವಿಠ್ಠಲನ ರೂಪ ತೋರೆ ನೀ
ಶ್ರೀಪತಿಯ ಪಾದ ತೋರಿ ಕಾಪಾಡೆ ದೇವಿ ೩

## ೧೪೪

ಬಾರಮ್ಮ ತುಳಸಿ ನೀನು ಶ್ರೀ ಹರಿ ಸತಿ ಪ.

ನಾರಿಮಣಿಯೆ ನಿನ್ನ ಯಾರು ವರ್ಣಿಸುವರೆ
ಸಾರಸಾಕ್ಷಿಯೆ ನಿನ್ನ ಸಾರಿ ಭಜಿಪೆ ಮುನ್ನ ೧

ರಂಗನ ಅಂಗನೆ ಮಂಗಳ ರೂಪಳೆ
ರಂಗು ಮಾಣಿಕ್ಯದ್ವಜ್ರ ಅಂಗಾಭರಣವಿಟ್ಟು ೨

ಶ್ರೇಷ್ಠರೂಪಳೆ ಮನಮುಟ್ಟಿ ಪೂಜಿಪೆ ನಿನ್ನ
ಸೃಷ್ಟೀಶ ಗೋಪಾಲಕೃಷ್ಣವಿಠ್ಠಲನರಸಿ ೩

## ೧೪೫

ಮುಡಿದಿಹ ಕುಸುಮವ ಸಡಗರದಲಿ ನೀಡೆ
ಮಡದಿ ತುಳಸಿ ಎನಗೆ ಕಡುದಯದಿಂದ ಪ.

ಕಂಕಣ ಕಡಗವು ವಂಕಿ ಬಳೆಯನಿಟ್ಟು
ಪಂಕಜಕರದಿಂದ ಶಂಕಿಸದಲೆ ಎನಗೆ ೧

ಪಾರಿಜಾತದ ಕುಸುಮ ನೀರೆಯೆ ನೀಡೆನಗೆ
ಪಾರುಗಾಣಿಸೆ ಭವ ಶ್ರೀ ರಮೇಶನ ತೋರಿ ೨

ತುಷ್ಟಳಾಗಿ ನೀಡೆ ಅಷ್ಟು ವಿಧದ ಕುಸುಮ
ಶ್ರೇಷ್ಠ ಶ್ರೀ ಗೋಪಾಲಕೃಷ್ಣವಿಠಲನ ಸತಿ ೩

## ೧೪೬

ವರವ ಕೊಡೆ ವಾರಿಜಾಕ್ಷಿ ನೀರೆ ತುಳಸಿಯೆ
ಕರಕರೆಯಗೊಳಿಸಬೇಡೆ ಕರುಣ ಪೂರ್ಣಳೆ ಪ.

ಸಿರಿವರನ ಸಹಿತ ನಿನ್ನ ಪೂಜಿಪೆ ಮುನ್ನ
ಪರಿಪರಿಯ ಧೂಪ ದೀಪ ಗಂಧಾಕ್ಷತೆಗಳಿಂ ೧

ವಾರಿಜಾಕ್ಷಿ ಷಡ್ರಸಗಳ ಆರೋಗಣೆ ಕೊಳ್ಳೆ
ನಾರಿ ನಿನಗೆ ಸರ್ವವಿಧದಿ ನಾನು ಎರಗುವೆ ೨

ಸಿರಿವರ ಗೋಪಾಲಕೃಷ್ಣವಿಠ್ಠಲನರಸಿಯೆ
ಕರದು ಎನಗೆ ಸರ್ವಾಭೀಷ್ಟ ಕೊಟ್ಟು ಪಾಲಿಸೆ ೩

## ನದೀದೇವತೆಗಳು

### ೧೪೭

ಕಂಗಳಿಂದಲಿ ನಿನ್ನ ಕಂಡೆ ನಾನೀಗ
ಹಿಂಗಿತೇ ಎನ್ನ ಅಘದ್ದಿಂಡು ಕಾವೇರಿ ಪ.

ಮಂಗಳಾಂಗಿಯೆ ಶ್ರೀ ರಂಗನಾಥನ ಪದ
ಭೃಂಗಳೆನಿಸಿ ಜನರ ಪಾವನಗೈವೆ
ತುಂಗವಿಕ್ರಮ ಹರಿಗೆ ಮೂಲರೂಪಳಾಗಿ
ಅಂಗ ಶುದ್ಧಿಯಗೈವೆ ಪಾಪಿಗಳ ಸತತ ೧

ಎಲ್ಲೆಲ್ಲಿ ನೋಡೆ ಶ್ರೀರಂಗನ್ನ ಸೇವಿಸುವೆ
ಪುಲ್ಲಲೋಚನೆ ನಿನ್ನ ಬಗೆಯರಿವೆನೆ
ಬಲ್ಲ ಭಕ್ತರು ಬಂದು ನಿನ್ನಲ್ಲಿ ಸ್ನಾನವಗೈದು
ಉಲ್ಲಾಸದಿಂದ ಆನಂದಪಡುತಿಹರೆ ೨

ನೊರೆಸುಳಿಗಳಿಂದ ಭೋರ್ಗರೆಯುತ್ತ ಹರಿ ಇರುವ
ಅರಮನೆಯೆ ವೈಕುಂಠವೆಂದು ಸೂಚಿಸುತ
ಹರಿಸದನ ಸುತ್ತಿರುವೆ ವಿರಜೆ ನಾನೆಂದೆನುತ
ಅರುಹುವಾ ತೆರದಿ ಬಹು ರಭಸದಿಂ ಪರಿವೆ ೩

ನಿನ್ನ ಧ್ವನಿ ಇಂಪೆಂದು ಆನಂದದಿಂದಾಲಿಸುತ
ಚನ್ನ ಶ್ರೀರಂಗ ತಾ ಪವಡಿಸಿಹನೆ
ಘನ್ನ ಮಹಿಮಳೆ ಸಕಲ ಜೀವರಾಶಿಯ ಪೊರೆವೆ
ಎನ್ನ ಮನ ಹರಿಪದದಿ ನಲಿವಂತೆ ಮಾಡೆ ೪

ನಿನ್ನನೇ ವಿರಜೆ ಎಂತೆಂದು ಭಾವಿಸಿ ಈಗ
ಎನ್ನ ಗುರುಗಳ ದಯದಿ ಸ್ನಾನಗೈದೆ
ಇನ್ನು ಶ್ರೀ ವೈಕುಂಠದೊಡೆಯನಾ ತೋರಮ್ಮ
ಘನ್ನ ಶ್ರೀ ಗೋಪಾಲವಿಠ್ಠಲನ ೫

## ೧೪೮

ಗೋದಾವರಿ ಎನಗೆ ಶ್ರೀಧರನ ತೋರೆ ಪ.

ನೀ ದಯದಿ ಸಲಹೆನ್ನ ಮಾಧವಗೆ ಪ್ರಿಯೆ ಅ.ಪ.

ಸ್ವಚ್ಛವರ್ಣಳೆ ಬಹು ಹೆಚ್ಚಾಗಿ ಪರಿಯುವಳೆ
ಮುಚ್ಚಿರುವ ಮಲಗಳನು ದೂರಮಾಡೆ
ಅಚ್ಯುತನ ಪದವೀವ ಹೆಚ್ಚಿನಾ ಜ್ಞಾನವನು
ಸ್ವಚ್ಛತನದಲಿ ಕೊಟ್ಟು ಮೆಚ್ಚಿ ಎನ್ನನು ಸಲಹೆ ೧

ಧರೆಯ ಜನರು ನಿನ್ನೊಳ್ ಬರುತ ಮಲಗಳ ತೊಳೆಯೆ
ಅರಿತು ಅದನು ಮನದಿ ಪರಿಹರಿಸಿಕೊಳಲು
ಪರಮ ಭಾಗವತರ ವರ ಮಂದಿರಕೆ ಪೋಗಿ
ವರಹ ವೆಂಕಟಗಿರಿಯೊಳ್ ಸ್ಥಿರವಾಗಿ ನಿಂತೆ ೨

ಬರುತ ದಾರಿಯೊಳೆನಗೆ ಸ್ವಪ್ನದಲಿ ತೋರಿದೆ
ವರ ದಿವ್ಯರೂಪವನು ನಾರಿಮಣಿಯೆ
ಸರಿಗೆ ಕಂಕಣ ಮುತ್ತಿನಾ ಬುಗುಡಿಯನೆ ಧರಿಸಿ
ವರ ಮುತ್ತೈದೆಯರಿಬ್ಬರಂದದಲಿ ತೋರಿದೆ ೩

ಮುಕ್ಕೋಟಿ ಗಂಧರ್ವ ದೇವರ್ಕಳೂ ಬರುತಿರಲು
ಅಕ್ಕರದಿ ತಂಗಿಯನೆ ಒಡಗೂಡುತ
ಲಕ್ಕುಮಿ ಸ್ವಾಮಿ ಶ್ರೀ ಪುಷ್ಕರಣಿ ಸಾರಿರಲು
ಉಕ್ಕುವೋ ಉಲ್ಲಾಸದಿಂದ ತೆರಳಿದೆಯೆ ೪

ಜಿಷ್ಣು ಸಖನ ದಿವ್ಯ ಪಟ್ಟಣವ ಸೇರಲು
ಕೃಷ್ಣವೇಣಿಯ ಒಡಗೂಡಿ
ವಿಷ್ಣುಪಾದೋದ್ಭವೆಗೆ ಸರಿಯೆನಿಸಿ ಗೋಪಾಲ
ಕೃಷ್ಣವಿಠ್ಠಲನ ಬಹುನಿಷ್ಠೆಯಿಂ ಧ್ಯಾನಿಸುವೆ ೫

# ೧೪೯

ತುಂಗೆ ಮಂಗಳ ತರಂಗೆ । ಕರುಣಾಂತರಂಗೆ
ರಂಗನಾಥನ ಪದಭೃಂಗೆ ಪ.

ಅಂಗಜಪಿತನ ಅಂಗದಿ ಉದ್ಭವೆ
ಮಂಗಳಾಂಗಿ ಭವ ಭಂಗ ಹರಿಸೆ
ಅಂಗನೆ ಎನ್ನಂತರಂಗದಿ ಹರಿಪಾ-
ದಂಗಳ ತೋರಿಸೆ ಶೃಂಗೆ ಶುಭಾಂಗೆ ಅ.ಪ.

ಆದಿ ದೈತ್ಯನು ಖತಿಯಲಿ । ಮೇದಿನಿಯ ಸುತ್ತಿ
ಒಯ್ದು ಪಾತಳ ಪುರದಲಿ
ಬಾಧೆಪಡಿಸುತಿರೆ ಮಾಧವ ಕರುಣದಿ
ಆದಿವರಾಹನೆಂದೀ ಧರೆಯೊಳು ಬಂದು
ಬಾಧಿಸಿ ಖಳನನು ಮೇದಿನಿ ಪೊರೆಯಲು
ಶ್ರೀದನ ದಾಡೆಯಿಂ ನೀನುದುಭವಿಸಿದೆ ೧

ಸ್ನಾನಪಾನದಿ ನರರನು । ಪಾವನಗೈವ
ಮಾನಿನಿ ನಿನ್ನ ಕಂಡೆನು
ನಾನಾ ದುಷ್ಕೃತಗಳ ನೀನೋಡಿಸಿ ಮತ್ತೆ
ನಾನು ಎಂಬುವ ನುಡಿ ನಾಲಗೆಗೀಯದೆ
ನಾನಾ ವಿಧದಲಿ ಮಾನವ ಕಾಯೆ
ಶ್ರೀನಾಥನ ಪದಧ್ಯಾನವನೀಯೆ ೨

ಹರನ ಪೆಸರಿನ ಪುರದಲಿ । ಹರಿದು ಬಂದು
ವರ ಶ್ರೀ ಕೂಡಲಿ ಸ್ಥಳದಲಿ
ಭರದಿ ಭದ್ರೆಯ ಕೂಡಿ ಪರಿದಲ್ಲಿಂದಲಿ
ಹರಿಹರ ಕ್ಷೇತ್ರವ ಬಳಸಿ ಮಂತ್ರಾಲಯ
ಪುರಮಾರ್ಗದಿ ಸಾಗರವನೆ ಸೇರಿ
ವರ ಗೋಪಾಲಕೃಷ್ಣವಿಠ್ಠಲನ ಧ್ಯಾನಿಪೆ ೩

## ೧೫೦

ನಮಿಪೆ ನದಿ ದೇವತೆಗಳೇ । ನಿಮಗೆ ಪ.

ನಮಿಪೆ ನದಿ ದೇವತೆಗಳೇ ನಿಮ್ಮ ಚರಣಕ್ಕೆ
ಕಮನೀಯ ಗಾತ್ರೆಯರೆ ಕಂಜದಳ ನೇತ್ರೆಯರೆ
ಸುಮನರ ವಂದಿತರೆ ಸುಗುಣ ಸಂಪನ್ನೆಯರೆ
ವಿಮಲಾಂಗ ಅಘ ಹರೆಯರೇ
ಕಮಲನಾಭನ ಅಂಗೋಪಾಂಗ ಸಂಜಾತೆಯರೇ
ಅಮರ ಭೂ ಪಾತಾಳ ಲೋಕ ಸಂಚರೆಯರೆ
ನಮಿಸಿ ಸ್ನಾನವಗೈವ ನರರ ಪಾವನಗೊಳಿಪ
ಅಮಿತ ಪಾವಿತ್ರತರರೇ ೧

ಗಂಗೆ ಗೋದಾವರಿ ಯಮುನೆ ಸರಸ್ವತಿ ಸಿಂಧು
ಮಂಗಳಾಂಗೆ ಕೃಷ್ಣ ಭೀಮರಥಿ ಪಲ್ಗುಣಿ
ಸಂಗಮ ತ್ರೀವೇಣಿ ಸರಯು ಗಂಡಿಕಿ ಸೀತ
ತುಂಗಭದ್ರಾ ನಾಮರೇ
ಅಂಗ ಮಾಲಾಪಾರಿ ಕಾವೇರಿ ಕಪಿಲೆ ನರ
ರಂಗ ಪಾವನ ಗೈವ ಪುಷ್ಕರಗಳಭಿಮಾನಿ
ಅಂಗನೆಯರೆಲ್ಲರಿಗೆ ಅಭಿವಂದಿಸುವೆ ಅಘವ
ಹಿಂಗಿಸುವುದೆಂದು ಮುದದೀ ೨

ಬಂದು ಸ್ವಪ್ನದಿ ಮಾಘ ಶುದ್ಧ ನವಮೀ ಭರಣಿ
ಸಂಯೋಗದ ಪರ್ವವೆಂದು ಭದ್ರೆಲಿ ಸ್ವಾನ
ವಿಂದು ಗೈದೆವು ಎಂದು ಮುಂದೆ ಕುಳ್ಳಿರೆ ನಾನಾ
ನಂದದಿಂ ಕಂಡು ನಿಮ್ಮಾ
ಸುಂದರಿಯರೇ ನಿಮ್ಮ ಸಂದರ್ಶನದಿ ಫಲವು
ಬಂದುದೆನಗೆಂದು ನಾನಂದ ವಚನಕೆ ನಲಿದು
ಒಂದು ಅರಿಯದ ಎನಗೆ ತಂದು ಕೊಟ್ಟಿರಿ ಸ್ನಾನ
ದಿಂದ ಬಹು ಪುಣ್ಯ ಫಲವಾ ೩

ಹರದಿಯರೆ ಕಂಡೆ ನಿಮ್ಮರವಿಂದ ಮುಖ ಶುಭ್ರ
ಸರಿತು ದೇವತೇಗಳೇ ಗುರು ಕೃಪೆಯ ಬಲದಿಂದ
ವರನಾಡಿಯಲಿ ಪರಿವ ಸಿರಿ ನದಿಗಳೇ ಜಗದಿ
ಹರಿದು ನರರಘವ ಕಳೆದು
ಭರದಿಂದ ಪರಿದು ಸಾಗರವ ಕೂಡುವ ತ್ವರದಿ
ಪರಿಪರಿಯ ಜಲ ಜಂತು ಸಂಸಾರಿ ಸಂಗೆಯರೆ
ನರರು ಬಣ್ಣಿಸಲಳವೆ ಕರುಣಿ ನಿಮ್ಮಯ ಮಹಿಮೆ
ಸಿರಿಕಾಂತ ಪ್ರಿಯಸುತೆಯರೇ ೭

ಶ್ರೇಷ್ಟನದಿ ಅಭಿಮಾನಿ ಸತಿಯರೇ ಎನ್ನ ಅಘ
ಸುಟ್ಟು ನಿರ್ಮಲ ಭಾವ ಕೊಟ್ಟು ಹೃತ್ಪದದಲಿ
ವಿಷ್ಣು ಮೂರ್ತಿಯ ಕಾಂಬ ಶ್ರೇಷ್ಟ ಜ್ಞಾನದ ಮಾರ್ಗ
ಕೊಟ್ಟು ಸದ್ಭಕ್ತಿ ಭರದೀ
ಚಿಟ್ಟನೇ ಚೇರಿ ದಾಸ್ಯದ ಭಾವದಲಿ ಕುಣಿದು
ಶ್ರೇಷ್ಟ ಶ್ರೀ ಗೋಪಾಲಕೃಷ್ಣವಿಠ್ಠಲನ ಪದ
ಮುಟ್ಟುವೊ ವಿಜ್ಞಾನ ಪ್ರವಹ ರೂಪದಿ ವಲಿದು
ದಿಟ್ಟೆಯರ ಸಂತೈಸಿರಿ ೫

## ಯತಿಗಳ ಸ್ತುತಿ

### ೧೫೧

ಮಧ್ವಮುನಿಯೆ ಎನ್ನ ಉದ್ಧರಿಸಿನ್ನ ಪ.

ಸದ್ಗುರುವೆ ನಿನ್ನ ಪದ್ಮಪಾದಗಳಿಗೆ
ಬಿದ್ದು ಮುಗಿವೆ ಕರ ಸದ್ವೈಷ್ಣವ ಮಣಿ ಅ.ಪ.

ವರಕಲ್ಪ ಕಲ್ಪದಲಿ ಹರಿಯ ಮೆಚ್ಚಿಸಿ
ಸಿರಿವರನಲಿ ಜನಿಸಿ ವಾಯುವೆಂದೆನಿಸಿ
ಸುರರೆಲ್ಲ ಮೊರೆಯಿಡೆ ಹರಿಯವತರಿಸಿ

ಹರಿಯ ಸೇವೆಗೆ ನೀ ಮಾರುತಿ ಎನಿಸಿ
ಶರಧಿ ಲಂಘಿಸಿ ಉಂಗುರ ಸೀತೆಗೆ ಇತ್ತು
ದುರುಳನ ಪುರ ಸುರಮುಖನಿಗರ್ಪಿಸಿದೆ ೧

ಚಂದ್ರವಂಶದಲಿ ಬಂದ್ಯೊ ಬಲಶಾಲಿ
ನಂದಕಂದನ ಲೀಲೆ ಅಂದ ಪಾಡುತಲಿ
ಬಂದಿತು ಕಲಹ ಅಲ್ಲಿ ದ್ವಂದ್ವ ಭಾಗದಲಿ
ಅಂದು ಕೌರವರಲಿ ನಿಂದ್ಯೊ ದ್ವೇಷದಲಿ
ಇಂದುಮುಖಿಗೆ ಸೌಗಂಧಿಕ ಇತ್ತು ಕುರು
ನಂದನ ವಂಶವನಂದು ಛೇದಿಸಿದೆ ೨

ದುರುಳರೆಲ್ಲರು ಬಂದು ಕಲಿಯುಗದಿ ನಿಂದು
ಹರಿಯು ನರನು ಒಂದು ಅರುಹಲಿಂತೆಂದು
ಸುರರೆಲ್ಲ ಬಲುನೊಂದು ಕ್ಷೀರಾಬ್ಧಿಗೆ ಬಂದು
ಸಿರಿವರ ಪೊರೆಯೆಂದು ಮೊರೆಯಿಡಲಂದು
ಹರಿ ನಿನಗರುಹಲು ಧರೆಯಲ್ಲಿಗೆ ಬಂದು
ಸುರ ಭೂ ಶ್ರೇಷ್ಠನುದರದಲಿ ಜನಿಸಿದೆ ೩

ಪರಮಾಯಿಗಳ ಮತ ತರಿದು ಕೆಡಹುತ್ತ
ಹರಿ ಸರ್ವೋತ್ತಮೆನುತ ಧರೆಯೊಳ್ ಸಾರುತ್ತ
ತರತಮ್ಯ ಸತ್ಯವೆನುತ ಪಂಚಭೇದೆನುತ
ಸಿರಿರಮಣಗೆ ನರಭೃತ್ಯನೆನ್ನುತ್ತ
ಪರಿ ಪರಿ ಬೋಧಿಸಿ ದುರುಳರ ಛೇಡಿಸಿ
ಸರಸಿಜಾಕ್ಷಗೆ ಬಲು ಸಮ್ಮತನೆನಿಸಿ ೪

ವೈಷ್ಣವಾಗ್ರಣೀ ಲೀಲೆ ಪೇಳಲಳವಲ್ಲ
ಜಿಷ್ಣುಸಖನ ಲೀಲೆ ನುಡಿಸೆನಗೆ ಸೊಲ್ಲ
ಕಷ್ಟಪಡುತಿಹೆನಲ್ಲ ಕರುಣವೇಕಿಲ್ಲ
ಶ್ರೇಷ್ಠನೆ ಗೋಪಾಲಕೃಷ್ಣವಿಠಲ
ಇಷ್ಟು ತಿಳಿಸುತ ಅಷ್ಟದಳದಲಿ
ಶ್ರೇಷ್ಠದಿ ಪೂಜಿಪ ಗುಟ್ಟು ತೋರೆನಗೆ ೫

## ೧೫೨

ಬೇಗ ಪಾಲಿಸೊ ಬ್ರಹ್ಮಣ್ಯತೀರ್ಥ । ಕರುಣಿಸು ಇಷ್ಟಾರ್ಥ ಪ.

ಯೋಗಿವರ ಶ್ರೀ ಅಬ್ಬೂರು ನಿಲಯ । ಸದ್ಭಕ್ತರಿಗತಿ ಪ್ರಿಯ ಅ.ಪ.

ಸತ್ವಗುಣನೆ ಸರ್ವೋತ್ತಮ ಹರಿ ಪ್ರಿಯ । ಪಾವನ ಶುಭಕಾಯ
ಚಿತ್ತದಲಿ ಹರಿ ಚಿಂತನೆ ಮಾಡುತಲಿ । ವರಗಳ ನೀಡುತಲಿ
ಅತ್ಯಧಿಕದ ಕಣ್ವ ನದಿಯ ತೀರ ವಾಸ । ನಿನ್ನಲಿ ಹರಿ ವಾಸ
ಮತ್ತೆ ವ್ಯಾಸರಾಯರಿಗತಿಶಯ ಗುರುವೆ ।
ಸುಜನರುಗಳ ಪೊರೆವೆ ೧
ಆಗಲೆ ಜನಿಸಿದ ಶಿಶುವ ತಾಯಿ ಕೊಡಲು ।
ಪ್ರೇಮದಿ ನೀ ಕೊಳಲು
ಸಾಗಿ ಬಂದು ಗುಹೆಯೊಳಗೆ ಇಟ್ಟು ಪೊರೆದೆ ।
ಗೋಕ್ಷೀರವನೆರೆದೆ
ಆಗಮಗಳ ಕಲಿಸಲು ಮೌಂಜಿಯ ಕಟ್ಟಿ । ಶ್ರೀಪಾದರಲಿ ಬಿಟ್ಟೆ
ಯೋಗಿ ವ್ಯಾಸರಾಯರು ಎಂದ್ಹೆಸರಿಟ್ಟು । ಸನ್ಯಾಸವನೆ ಕೊಟ್ಟು ೨

ಪಾಪಿ ಜನರ ಪಾವನಗ್ಯೆಯುತಲಿ । ಶ್ರೀನಿಧಿ ಧ್ಯಾನದಲಿ
ಕಾಪಾಡು ಸಧ್ಭೃತ್ಯರ ದಯದಿಂದ । ತಪಸಿನ ಶಕ್ತಿಂದ
ಶ್ರೀಪತಿಯೊಲುಮೆಯ ಶೀಘ್ರದಿ ಪಡೆಯುತಲಿ ।
ಶಿಷ್ಟರ ಪೊರೆಯುತಲಿ
ಗೋಪಾಲಕೃಷ್ಣವಿಠ್ಠಲನನು ಹೃದಯದಲಿ । ನಿತ್ಯದಿ ಕಾಣುತಲಿ ೩

## ೧೫೩

ಧರೆಯೊಳಗೆ ವ್ಯಾಸಮುನಿವರನ ಸಂಸ್ಥಾನಕಿ
ನ್ನೆರಡನೆಯದಾವುದುಂಟು ಪ.

ಪರಿಪರಿಯಲಿ ನೋಡೆ ಪರಮ ವೈಭವದಿಂದ
ಧರಣಿಯೊಳು ಮೆರೆಯುತಿಹುದು ಇಹುದು ಅ.ಪ.

ಹಂಸನಾಮಕನಿಂದ ಹರಿದು ಬಂದಂಥ ಯತಿ
ಸಂಸ್ಥಾನ ಸುರನದಿಯೊ
ಕಂಸಾರಿಪ್ರಿಯ ಶ್ರೀ ಮಧ್ವಮುನಿ ಮತ ಸಾರ
ಹಂಸಗಳು ಸುರಿಯುತಿರಲು
ಸಂಶಯವ ಪರಿಹರಿಸಿ ಸದ್ಗ್ರಂಥಗಳ ಸ–
ದ್ವಂಶರಿಗೆ ಸಾರುತಿರಲು
ಅಂಶ ಹರಿಪರ್ಯಂಕ ಸಹಿತ ಬಾಹ್ಲೀಕ ಯತಿ
ವಂಶದಲಿ ಉದಿಸಿ ಬರಲು ಬರಲು ೧

ಬನ್ನೂರು ಸ್ಥಳದಲ್ಲಿ ಜನ್ಮವೆತ್ತುತಲಿ ಬ್ರ
ಹ್ಮಣ್ಯರಾ ಕರದಿ ಬೆಳೆದು
ಚಿಣ್ಣತನದಲಿ ಮೌಂಜಿಧರಿಸಿ ಕಿತ್ತೊಗೆಯುತಲಿ
ಧನ್ಯಯತಿಯಾಗಿ ಮೆರೆದು
ಘನ್ನ ಶ್ರೀಪಾದರಾಯರಲಿ ಸದ್ಗ್ರಂಥಗಳ
ಚನ್ನಾಗಿ ಮನನಗೈದು
ಸಣ್ಣ ಪೆಟ್ಟಿಗೆಯೊಳಡಗಿದ್ದ ಶ್ರೀ ಕೃಷ್ಣನ
ತನ್ನ ಭಕ್ತಿಯೊಳ್ ಕುಣಿಸಿ ನಲಿದು ೨

ಪಡೆದು ಪರಿಪರಿಯ ಮಹಿಮೆಗಳ ತೋರುತಲಿ ದುರ್ವಾದಿ
ದುರುಳ ಮತಗಳನೆ ಮುರಿದು
ಮರುತ ಮತ ಶೀತಾಂಶುಕಿರಣ ಚಂದ್ರಿಕೆಯನ್ನು

ಹರಹಿ ಪ್ರಕಾಶಗೈದು
ಸರ್ವ ಸಜ್ಜನರ ಮನದಂದಕಾರವ ಕಳೆದು
ಸಿರಿವರನ ಪ್ರೀತಿ ಪಡೆದು
ತಿರುವೆಂಗಳೇಶನ ಪರಮ ಮಂಗಳ ಪೂಜೆ
ವರುಷ ದ್ವಾದಶವಗೈದು ಮೆರೆದು ೩

ಆರಸನಿಗೆ ಬಂದಂಥ ಆಪತ್ಕುಯೋಗ ಪರಿ
ಹರಿಸಿ ಸಂಸ್ಥಾನ ಪಡೆದು
ಪರಮ ಸಾಮ್ರಾಜ್ಯ ಪಟ್ಟಾಭಿಷೇಕವ ತಳೆದು
ಪರಮ ವೈಭವದಿ ಮೆರೆದು
ಚಿರಕಾಲ ವಿಜಯನಗರವು ಮೆರೆಯಲೆಂದ್ದರಸಿ
ಅರಸನಿಗೆ ರಾಜ್ಯವೆರೆದು
ಕರುಣಾಳುವೆನಿಸಿ ವೈರಾಗ್ಯ ಶಿಖರದಿ ಮೆರೆದು
ಮೊರೆಪೊಂದಿದವರ ಪೊರೆದು ಬಿರುದು ೪

ಎಲ್ಲೆಲ್ಲಿ ನೋಡಲಲ್ಲಲ್ಲಿ ಶ್ರೀ ಮರುತನ್ನ
ನಿಲ್ಲಿಸುತ ಪೂಜೆಗೈದು
ನಿಲ್ಲದಿರೆ ಹಂಪೆಯಲಿ ಪ್ರಾಣಾರಾಯನು ಯಂತ್ರ
ದಲ್ಲಿ ಬಂಧನವಗೈದು
ಚಲ್ಲಾಡಿ ಸುವರ್ಣವೃಷ್ಟಿಯಿಂ ದುರ್ಭಿಕ್ಷ
ನಿಲ್ಲಿಸದೆ ದೂರಗೈದು
ಎಲ್ಲ ಕ್ಷೇತ್ರಗಳ ಸಂಚರಿಸಿ ಬಹುದಿನ ಹಂಪೆ
ಯಲ್ಲಿ ಶಿಷ್ಯರನು ಪಡೆದು ನಿಂದು ೫

ನವಕೋಟಿ ಧನಿಕ ವೈರಾಗ್ಯ ಧರಿಸುತ
ಭವದ ಬವಣೆಯಲಿ ನೊಂದು ಬಂದು
ನವ ಜನ್ಮಕೊಟ್ಟು ಉದ್ಧರಿಸಬೇಕೆಂದೆರಗೆ
ಅವನಂತರಂಗವರಿದು

ಪವಮಾನ ಮತವರುಹಿ ತಪ್ತ ಮುದ್ರಾಂಕಿತದಿ
ನವ ಜನ್ಮವಿತ್ತು ಪೊರೆದು
ಪವನ ಗ್ರಂಥಾಂಬುಧಿಯೊಳಡಗಿದ್ದ ದಾಸ್ಯ ರ
ತ್ನವ ಪೂರ್ವಗುರುವಿಗೊರೆದು ಸುರಿದು ೬

ಯತಿವಾದಿರಾಜ ಪುರಂದರ ಕನಕರೆಂ
ಬತುಲ ಶಿಷ್ಯರ ಕೂಡುತಾ
ಸತತ ಹರಿ ಚರ್ಯ ಮಹಿಮಾದಿಗಳ ಸ್ಮರಿಸುತ್ತ
ಸ್ಮೃತಿ ಮರೆದು ಕುಣಿದಾಡುತಾ
ರತಿಪಿತನ ಗಾನ ಭಕ್ತಿಯಲಿ ಕನ್ನಡ ಕವನ
ಮತಿಯೊಳ್ ನಾಲ್ವರುಗೈಯುತಾ
ಕ್ಷಿತಿಯಲ್ಲಿ ದಾಸಪದ್ಧತಿ ಬಾಳಲೆಂದೆನುತ
ಯತಿವರರ ಸೃಷ್ಟಿಸುತ್ತಾ । ಸತತ ೭

ಅಂದು ವಿಜಯೀಂದ್ರರನು ಯತಿವರರು ಬೇಡೆ
ಆನಂದದಲಿ ಭಿಕ್ಷವಿತ್ತ
ಬಂದು ಕೈ ಸೇರಿದಾ ರಾಜ್ಯವನು ಕ್ಷಿತಿಪನಿಗೆ
ಮುಂದಾಳಲೆನುತಲಿತ್ತ
ಇಂದಿರೇ ಪತಿ ವೆಂಕಟೇಶನ್ನ ಪೂಜೆ ವರ
ಕಂದನಿಗೆ ಒಲಿದು ಇತ್ತ
ಒಂದೊಂದು ವೈಭವವು ಕೈ ಸೇರೆ ವೈರಾಗ್ಯ
ತಂದು ಅಭಿರೂಪ ಬಿಡುತಾ । ಕೊಡುತ ೮

ನವವಿಧದ ಭಕ್ತಿಯಲಿ ಜ್ಞಾನ ವೈರಾಗ್ಯದಲಿ
ಕವನದಲಿ ಶಾಂತತೆಯಲಿ
ನವಗ್ರಂಥ ನಿರ್ಮಾಣ ಪವನ ಗ್ರಂಥೋದ್ಧಾರ
ಸವಿನಯವು ಸದ್ಗುಣದಲೀ

ಸುವಿವೇಕ ಸತ್ಕರ್ಮ ಅಂತರ್ಮುಖ ಧ್ಯಾನ
ಅವನಿ ಸಂಚಾರದಲ್ಲಿ
ಇವರ ಸರಿಯಿಲ್ಲ ದಾಸ ವ್ಯಾಸ ಕೂಟದಲಿ
ಭುವನದಲಿ ಮೆರೆದ ಧನ್ಯಾ । ಮಾನ್ಯ ೯

ಪಾಪಿಗಳ ಸಲಹಿ ಪಾವನ್ನಗೈಯುತ ಭವದ
ಕೂಪದಿಂದುದ್ಧರಿಸಿದಾ
ಆಪಾರ ಮಹಿಮೆ ಆದ್ಯಂತ ವರ್ಣಿಸಲಳವೆ
ಶ್ರೀಪಾದ ಪದುಮ ರಜದಾ
ವ್ಯಾಪಾರವೆನ್ನ ಗುರು ದಯದಿ ಎನ್ನೊಳು ನಿಂದು
ತಾ ಪಾಲಿಸುತ ನುಡಿಸಿದ
ಗೋಪಾಲಕೃಷ್ಣವಿಠಲ ಧ್ಯಾನದಲಿ ಹಂಪೆ
ಗೋಪ್ಯಸ್ಥಳದಲಡಗಿದಾ ೧೦

## ೧೩೪

ಕರುಣಿಸೆನ್ನ ಗುರು ಮಂತ್ರಾಲಯ ನಿಲಯಾ
ಶ್ರೀ ನರಹರಿ ಗತಿ ಪ್ರೀಯಾ ಪ.

ಹರಿಶಯ ಮರುತರ ಆವೇಶಕೆ ನಿಲಯಾ
ನಂಬಿದೆ ಶುಭಕಾಯಾ ಅ.ಪ.

ತರಳತನದಿ ಶ್ರೀ ನೃಹರಿ ಶಾಂತನಾಗೇ
ಸುರರೆಲ್ಲರು ನಿಮಗೇ
ಎರದು ಕೀರ್ತಿ ಹಿರೆತನವಹಿಸಿದ ರಾಗೇ
ಅದರಂದದಿ ಈಗೇ
ವರ ಯತಿಗಳು ಹರಿದಾಸರು ವಂದಾಗೇ
ಭಕ್ತರ ಅಘ ನೀಗೇ
ಧರೆ ಕಲ್ಪ ಧ್ರುಮವೆಂದು ನಿಮ್ಮ ಬಳಿಗೇ
ವಪ್ಪಿಸುವರು ಅಡಿಗೇ ೧

ಎಮ್ಮ ಗುರುಗಳಿಂದ್ಹೇಳಿದ ನುಡಿ ಮರೆದೇ
ನಿಮ್ಮಡಿಗೆರವಾದೇ
ಸಮ್ಮತದಲಿ ಮೃತ್ತಿಕೆಯನು ಸೇವಿಸದೇ
ಹಮ್ಮಿನಲಿ ಮೈಮರೆದೇ
ನಿಮ್ಮ ಸುಕೀರ್ತಿಯ ತಿಳಿಸು ತಿಳಿಯದಾದೇ
ಅತಿ ಭಕ್ತಿಯ ಜರಿದೇ
ನಿಮ್ಮ ಕರುಣವಿರಲದರಿಂದೀಗರಿದೇ
ತನುಮನವರ್ಪಿಸಿದೇ ೨

ಒಂದೇ ಕೃತಿ ದ್ವಿದಳಾತ್ಮಕದಪರಾಧ
ಪಡಿಸಿತು ಬಹು ಬಾಧ
ಸಂದಿತು ಕಾಲವು ಮುಂದರಿಯುವ ಮೋದ
ಸಂದಿಸಿತುತ್ಸಹದಾ
ನಂದಕೆ ಕಲಿ ಮಲ ತೊಳೆಯಲು ಮೌನದಾ
ಪರಿ ಅರಿತೆ ಸುಭೋಧಾ
ಕುಂದೆಣಿಸದೆ ಪೊರೆದೆನ್ನ ನಿಮ್ಮಗಾಧಾ
ಕೃಪೆತೋರಲು ಬಹು ಮೋದಾ ೩

ಎಲ್ಲಿ ನೋಡಲಲ್ಲಲ್ಲಿ ನಿಮ್ಮ ವಾಸಾ
ಪುರಗಳು ಜನ ತೋಷಾ
ಸೊಲ್ಲು ಸೊಲ್ಲಿಗೇ ನುತಿಪ ಗಾನ ಘೋಷಾ
ಮಹಿಮೆಗಳ ಪ್ರಕಾಶ
ವಲ್ಲದಾಯಿತ್ಯಾತಕೊ ಎನಗಭಿಲಾಷಾ
ಈಗಾಯಿತು ಈ ಆಶಾ
ಬಲ್ಲವರೀಪರಿ ಮಾಡುವರೇ ಮೋಸಾ
ಸದ್ಭಕ್ತರಲಾಭಾಸಾ ೪

ಒಂದು ದಿನದ ಮೃತ್ತಿಕೆ ಜಲ ಸೇವಿಂದ
ಪೊಂದಿದೆ ನಿಮ್ಮ ಪದಾ
ಒಂದಾಗಲಿ ಗುರುವೆನಿಸಿದರೆಲ್ಲರದಾ

ಮನವಮ್ಮನ ವಾದಾ
ನಂದವು ಶ್ರೀ ನರಹರಿ ತಾ ಪರಿಕಿಸಿದಾ
ನಂದವು ಬಹು ಮೋದಾ
ಸಂದಲಿ ಗೋಪಾಲಕೃಷ್ಣವಿಠಲನಿಂದಾ
ಎಣಿಸದೆ ಬಹು ಕುಂದಾ ೫

## ೧೫೫

ಪಾರುಗಾಣಿಸೊ ಎನ್ನ ಪಾವನಕಾಯ ಶ್ರೀ
ಗುರು ರಾಘವೇಂದ್ರಾರ್ಯನೇ ಪ.

ಶ್ರೀ ರಮಾಪತಿ ಗುಣವ ನೀ ಮನದೊಳು ತಿಳಿಸಿ
ಶ್ರೀ ರಾಮ ನಾಮ ನುಡಿ ಸೋ । ಭವ ಬಂಧ ಬಿಡಿಸೋ ಅ.ಪ.

ಮಿಂಚಿನಂತಿಹ ಎನ್ನ ಚಂಚಲ ಮನದಲ್ಲಿ
ಸಂಚಿತನೆ ಎನೆ ನೆಲಸೋ
ಸಂಚಿತಾಗಮಿಗಳು ಕೊಂಚ ಉಳಿಯದ ತೆರದಿ
ಪಂಚ ಭೇದಾರ್ಥ ತಿಳಿಸೊ
ಪಂಚವಕ್ತ್ರನ ತಾತ ಮಿಂಚಿನಂದದಿ ಪೊಳೆವೊ
ಹಂಚಿಕೆಯ ಎನಗೆ ತೋರೋ । ಮನಕ್ಷರುಷ ಬೀರೋ ೧

ಶ್ರೀ ನರಹರಿ ಕೃಷ್ಣ ರಾಮ ವ್ಯಾಸರ ಪದವ
ನೀ ನಿರ್ಮಲದಲಿ ನೆನೆವೆ
ಮಾನನಿಧಿ ಮುರಹರಿಯ ಧಾಮತ್ರಯಗಳ ಮಾರ್ಗ
ಕಾಮಿಸಿದ ಭಕ್ತಗೀವೆ
ನಾನಧಮೆ ನಿನ್ನಡಿಗೆ ಬಾಗಿ ಭಜಿಸುವೆ ಗುರುವೆ
ನೀನಿತ್ತ ನೋಡಿ ಪೊರೆಯೊ । ನೀ ದಯವ ಗರೆಯೊ ೨

ತರಳತನದಲಿ ಶ್ರೀ ನರಹರಿಯ ಭಜಿಸುತ್ತ
ಉರುತರದಿ ಬಾಧೆ ಸಹಿಸಿ

ಹರಿಯು ಸರ್ವತ್ರ ವ್ಯಾಪಕನೆಂಬೊ ಮಹಿಮೆಯ
ಉರ್ವಿಯೊಳಗೆಲ್ಲ ನೆಲಸಿ
ವರಯತಿ ರೂಪದಲಿ ಸಿರಿ ಕೃಷ್ಣನಾ ಭಜಿಸಿ
ಮರುತ ಮತವನೆ ಸ್ಥಾಪಿಸಿ । ಗುರುರಾಯನೆನಿಸಿ ೩

ತುಂಗ ತೀರದಿ ನಿಂದು ಮಂಗಳರೂಪದಲಿ
ಪಂಗು ಬಧಿರರ ಸಲಹುತ
ಸಂಗೀತ ಪ್ರಿಯನೆನಿಸಿ ಶೃಂಗಾರರಾಮನ
ಮಂಗಳರೂಪ ಭಜಿಸಿ
ಹಿಂಗದೇ ಸುಜನರಿಗೆ ವರವ ಕೊಡುವೊ ಬಿರುದು
ರಂಗನಾ ಪದದೊಲುಮೆಯೋ । ನಿನ್ನಯ ಮಹಿಮೆಯೋ ೪

ಗೋಪಾಲಕೃಷ್ಣವಿಠ್ಠಲನ ಪರಿಪರಿಯಿಂದ
ಆ ಪಾದ ಮೌಳಿ ನೋಳ್ಪೆ
ಶ್ರೀ ಪತಿಯ ತೋರೆನಗೆ ಪಾಪ ಕಲುಷವ ಕಳದು
ತಾಪಪಡಲಾರೆ ಭವದಿ
ಕಾಪಾಡುವವರಿಲ್ಲ ನೀ ಕೃಪಾನಿಧಿಯೆಂದು
ಈ ಪರಿ ಕೇಳ್ದೆ ಗುರುವೆ । ಭಕ್ತರ ಕಲ್ಪ ತರುವೆ ೫

## ೧೫೬

ಕಂಡು ನಮಿಸಿದೆ ಸತ್ಯಬೋಧ ಮುನಿಯ
ಮಂಡೆ ಬಾಗುತ ದೇಹ ದಂಡವಿಕ್ಕುತಲಿ ಪ.

ಭವ್ಯ ಬೃಂದಾವನದಿ ವೈಭವದಿ ಮೆರೆವವರ
ಸವ್ಯಸಾಚಿಯ ಸಖನ ಪ್ರಿಯ ಪಾತ್ರರ
ದಿವ್ಯ ಕೂರ್ಮಾಸನದಿ ಕುಳಿತು ತಪಚರಿಸುವರ
ಅವ್ಯಯಾತ್ಮನ ಚರಣ ಧ್ಯಾನ ಮಾಳ್ಪವರ ೧

ವಿಷವಿಡಲು ಪಾಪಿಗಳು ರಾಮಗರ್ಪಿಸಿ ಭುಜಿಸೆ
ನಿಶಿಯಲ್ಲಿ ನಿದ್ರೆ ಜೈಸುತ ನಿತ್ಯದಲಿ
ಹಸನಾಗಿ ದೇವತಾರ್ಚನೆ ಭೋಜನವಗೈಯೆ
ದೂಷಿಸಿದ ಕುಜನರಿಗೆ ರಾತ್ರೆ ಸೂರ್ಯನ ತೋರ್ದ ೨

ಕಾಶಿಗ್ಹೋಗುವೆನೆಂಬ ಆಸೆ ಪೂರೈಸುವೊಡೆ
ತಾ ಸ್ವಪ್ನದಲಿ ಬಂದು ಜಾಹ್ನವಿಯು ಪೇಳೆ
ರಸರಹಿತವಾದ ವೃಕ್ಷದಿ ಗಂಗೆಯನೆ ತರಿಸಿ
ತಾ ಸ್ನಾನಗೈದು ಭಾಗೀರಥಿಯ ಪೂಜಿಸಿದ ೩

ಪೇಳಲಳವಲ್ಲದಿಹ ಬಹಳ ಕೌತುಕ ಮಹಿಮೆ
ಕಾಲಕಾಲಕೆ ತೋರಿ ಭಕ್ತರನು ಕಾಯ್ದು
ಮೇಲಾದ ಮಧ್ವ ಶಾಸ್ತ್ರಾರ್ಣವದಿ ಈಜುತಲಿ
ಲೀಲೆಯಿಂದಲಿ ಮಾಯ್ಗಳನೆ ಗೆದ್ದ ಮಹಿಮ ೪

ಪ್ರತಿವರ್ಷ ಪಾಲ್ಗುಣದಿ ದ್ವಿತೀಯ ಪಕ್ಷದಿ
ದ್ವಿತೀಯ ತಿಥಿಯಲ್ಲಿ ದಿವ್ಯ ಉತ್ಸವ ಕೊಳುತ
ಸತತ ಈ ಸವಣೂರು ಕ್ಷೇತ್ರದಲಿ ನೆಲಸುತಲಿ
ಚ್ಯುತರಹಿತ ಗೋಪಾಲಕೃಷ್ಣವಿಠ್ಠಲನ ಭಜಿಪೆ ೫

## ೧೫೭

ನಿತ್ಯಾನಮಿಪೆ ನಿಮ್ಮುತ್ತಮ ಪದಕೆ ಶ್ರೀ
ಸತ್ಯಾಬೋಧ ಗುರುವೆ ಪ.

ಚಿತ್ತದಲ್ಲಿ ಶ್ರೀ ವತ್ಸಾಂಕಿತನ ಪದ
ನಿತ್ಯಾ ಸ್ಮರಿಪ ಮುನಿಯೆ ಅ.ಪ.

ಚಿದಾತ್ಮವಾದ ನಿಮ್ಮುದಾರ ಕೀರ್ತಿಗೆ
ಸದಾ ಉದಯವಹುದು
ಇದನರಿಯದ ಅಧಮರಿಂದಲಿ

ಒದಗುವುದೆ ಕುಂದು
ವಿಧವಿಧಾನ್ನವ ಬುಧರಿಗಿತ್ತಂಥ
ನಿಧಾನಿ ನೀನೆಂದು
ಇದೆ ವಾರ್ತೆ ಕೇಳೆದೂರಿಗೆ ಬಂ
ದದಾನರಿತೆನಿಂದು ೧

ವೃಂದಾವನಸ್ಥನೆ ಮಂದರಿಗರಿದೆ ನಿ
ಮ್ಮಂದಿನ ಕೀರುತಿಯು
ಒಂದನರಿಯದ ಮಂದಮತಿಯು ನಾ
ಬಂದೆ ನಿಮ್ಮ ಬಳಿಯು
ಕುಂದುಗಳನೆಣಿಸದೆ ಸಂದೇಹ ಮಾಡದೆ
ಇಂದು ಪೊರೆದು ಆಯು
ಮುಂದೆ ಕೊಟ್ಟು ಗೋಪಿಕಂದನ ಪಾದ
ದ್ವಂದ ತೋರಿ ಕಾಯೋ ೨

ಕೃಪಾಳು ನಿಮ್ಮಂಥ ತಪಸಿಗಳು ಉಂಟೆ
ತಪಾನ ನಿಶಿ ತೋರ್ದೆ
ಶ್ರೀ ಪತಿ ರಾಮನ ಆಪಾದಮಸ್ತಕ
ರೂಪ ನೋಡಿ ದಣಿದೆ
ಭೂಪತಿಯಿಂದಲಿ ಈ ಪರಿಭವನವ
ನೀ ಪ್ರೀತಿಯಿಂ ಪಡೆದೆ
ಗೋಪಾಲಕೃಷ್ಣವಿಠ್ಠಲನ ಧ್ಯಾನಿಸುತ ಸ್ವ
ರೂಪಾನಂದ ಪಡೆದೆ ೩

## ೧೫೮

ಧೀರೇಂದ್ರ ಧೀರೇಂದ್ರ ಪ.

ಧೀರ ಮೂಲರಾಮನ ಪದಕಮಲವ
ತೋರು ಮನದಿ ನೀ ಕುಣೀಕುಣಿದಾಡುವೆ ಅ.ಪ.

ವರದಾ ತೀರದಿ ವರಗಳ ಕೊಡುತಲಿ
ಮರುತಮತಾಂಬುಧಿ ಚಂದಿರನೆನಿಸಿದ ೧

ಕುಷ್ಟಾದಿ ಬಹು ದುಷ್ಟ ಗ್ರಹಗಳ
ಕುಟ್ಟ್ಯೋಡಿಸುತ ಅಭೀಷ್ಟವಗರೆಯುವ ೨

ಮುನಿ ಮೌಳಿಯೆ ನಿನ್ನನು ಸ್ತುತಿಗೈಯುತ
ಘನ ಭಕ್ತಿಯೊಳಾಂ ಕುಣಿಕುಣಿದಾಡುವೆ ೩

ಅರ್ಥಿಯಿಂದ ನಾ ನರ್ತನಗೈಯುವೆ
ಸುತ್ತಿ ಸುತ್ತಿ ದಾಸತ್ವದ ನೇಮದಿ ೪

ಶ್ರೇಷ್ಠ ಶ್ರೀ ಗೋಪಾಲಕೃಷ್ಣವಿಠ್ಠಲಪ್ರಿಯ
ಕೃಷ್ಣನ ಚರಣವ ಥಟ್ಟನೆ ತೋರಿಸೋ ೫

## ೧೫೯

ಸುಶೀಲೇಂದ್ರತೀರ್ಥರ ವೈಭವವನು ನೋಡ ಬನ್ನಿರೆ ಜನರು
ಹೊಸರಿತ್ತಿ ಧೀರೇಂದ್ರರ ಬಳಿಯಲಿ ಹಸನಾಗಿರುವವರು ಪ.

ವರದಾ ತೀರದಿ ನೆಲಸುತ ಹರುಷದಿ
ವರಗಳ ಕೊಡುತಿಹರು
ಪರಿಪರಿಯಿಂದಲಿ ಸೇವಿಪ ಭ-
ಕ್ತರ ಕರುಣದಿ ಪೊರೆಯುವರು ೧

ವೃಂದಾವನದಲಿ ದ್ವಾದಶ ವರ್ಷಗ
ಳಿಂದಲಿ ನಿಂದಿಹರು
ಕುಂದದೆ ಶ್ರೀ ರಾಘವೇಂದ್ರರ ದಯವನು
ಚಂದದಿ ಪಡೆದಿಹರು ೨

ಕುಷ್ಟಾದಿಗಳನು ದುಷ್ಟ ಗ್ರಹಗಳ
ಥಟ್ಟನೆ ತೊಲಗಿಪರು
ಇಷ್ಟ ಭಕ್ತರನು ಸಲಹುವ
ಗೋಪಾಲಕೃಷ್ಣವಿಠ್ಠಲ ಪ್ರಿಯರು ೩

## ೧೬೦

ಕೇಶವ ಮಾಧವ ತೀರ್ಥ ಯತಿ
ವಾಸಿಪ ವೃಂದಾವನದಲ್ಲಿ ಖ್ಯಾತಿ ಪ.

ವಾಸುದೇವನ ಭಕ್ತ ಸುಜನಕೆ ಪ್ರೀತಿ
ಸೂಸುತ ಪೊರೆಯುವ ಕರುಣಿ ಪ್ರತೀತಿ ಅ.ಪ.

ಭದ್ರಾವತಿಯ ತೀರ ನರಸಿಂಹ ಕ್ಷೇತ್ರ
ಭದ್ರಾವತೀ ಪುರ ಮಠದಿ ಸತ್ಪಾತ್ರಾ
ಮುದ್ದಾದ ವೀರ ರಾಮನ ಪ್ರೀತಿ ಗಾತ್ರಾ
ಪೊದ್ದಿಸಿಕೊಂಡಿಪ್ಪ ಶಿರದಿ ಪತಿತ್ರ ೧

ಸ್ವಪ್ನದಿ ತೋರಿದ ಯತಿರೂಪದಿಂದ
ವಪ್ಪದಿ ದರ್ಶನಕೆ ಬಾರೆಂದು ನುಡಿದಾ
ಅಪ್ಪ ತಿಮ್ಮಪ್ಪನ ಸ್ತುತಿಯನಾಲಿಸಿದಾ
ಬಪ್ಪ ನರ ದರ್ಶನಕೆ ಮುಂದೆ ನಿಲ್ಲಿಸಿದಾ ೨

ಎನ್ನಿಂದ ಸಾರೋದ್ಧಾರ ಪದವನ್ನು
ಎನ್ನಲ್ಲೆ ನಿಂತು ತಾ ಬರಸಿದ ಘನ್ನ
ತನ್ನ ದೇವತ್ವವ ತೋರ್ದ ಪ್ರಸನ್ನ
ಇನ್ನಿಂಥ ಕರುಣಿಯ ಕಾಣೆ ನಾ ಮುನ್ನ ೩

ಮಧ್ವಕರ ಸಂಜಾತ ಮಾಧವರಂತೇ
ಶುದ್ಧ ಈ ಯತಿಕುಲ ಸಂಜಾತನಂತೇ
ಭದ್ರಾವತೀ ಪುರದಲ್ಲಿ ವಾಸಂತೇ
ಮುದ್ದು ಕೇಶವ ಮಾಧವಾತೀರ್ಥನಂತೆ ೪

ಕಾಮಿತಾರ್ಥವ ನಂಬೆ ಕೊಡುತಿಪ್ಪನಂತೆ
ಕಾಮಚಾರಿಗಳೀಗೆ ತೋರ್ಪನಲ್ಲಂತೆ
ಸ್ವಾಮಿ ರಾಮನ ಜಪಮೌನ ವ್ರತವಂತೆ
ಈ ಮಹಿಯಲಿ ಯೋಗಿ ಅವಧೂತನಂತೆ ೫

ಭಾಗಾವತಾದಲ್ಲಿ ಬಹು ದೀಕ್ಷಾಯುತರು
ಬಾಗಿದ ಜನರಿಗೆ ಪ್ರೇಮ ತೋರುವರು
ಭಾಗವತವ ರಾಜಗ್ವೇಳಿದರಿವರು
ಬೇಗರಿತುಕೊಳ್ಳಿರಿ ಬಹುಗೋಪ್ಯಯುತರು ೬

ನಂಬಿದ ಜನರಿಂದ ಹಂಬಲೊಂದಿಲ್ಲ
ತುಂಬಿದ ಭಕ್ತಿ ಆತ್ಮಾರ್ಪಣೆ ಬಲ್ಲ
ಸಂಬ್ರಹ್ಮದಿಂ ನಲಿವ ಗುರುಭಕ್ತಿ ಬೆಲ್ಲ
ಕುಂಭಿಣಿ ಮೂಢರಿಗೀವನು ಬಲ್ಲಾ ೭

ಎನ್ನ ಶ್ರೀ ಗುರು ತಂದೆ ಮುದ್ದುಮೋಹನ್ನ
ಘನ್ನರ ಕೃಪೆಯಿಂದ ಈ ಮುನಿವರನಾ
ಸನ್ನುತ ಸುಗುಣವ ಕಂಡ ನಾ ನಿನ್ನ
ಚನ್ನ ಶ್ರೀ ಲಕ್ಷ್ಮೀ ನರಸಿಂಹ ತೋರ್ದರನಾ ೮

ಸ್ವಾಪರೋಕ್ಷಿಯ ವೃಂದಾವನಸ್ಥಾ
ಗೋಪ್ಯದಿ ವಾಸಿಪ ಮಹಿಮ ವಿಖ್ಯಾತಾ
ಗೋಪಾಲಕೃಷ್ಣವಿಠಲನ ಕೃಪಾ ಪಾತ್ರಾ
ಕಾಪಾಡು ತವ ದಾಸದಾಸರ ನಿರುತಾ ೯

## ೧೬೧

ವಿದ್ಯಾ ಪ್ರಸನ್ನ ಶ್ರೀ ಯತಿಕುಲ ಗುರುರನ್ನ
ಸದ್ವೈಷ್ಣವ ಘನ್ನ ಪ.

ಸಿದ್ಧಸಾಧನ ಮಧ್ವಮುನಿಯ ಚಿನ್ಹ
ಧರಿಸಿದ ಬಹುಮಾನ್ಯ ಅ.ಪ.

ವಿದ್ಯಾರತ್ನಾಕರ ಯತಿ ಕರಕಮಲದಿ ಜಾತ
ಮುದ್ದು ಕುವರನೀತ
ವಿದ್ಯಾವಾರಿಧಿ ಮುನಿಕರ ಸಂಜಾತ
ಯತಿವರನಾದಾತ
ಮಧ್ವಗ್ರಂಥಗಳ ಮನನ ಮಾಡಿದಾತ
ಬಹುಮತಿಯುತನೀತ
ಬುದ್ಧಿಕುಶಲದಿ ಬುಧರನು ಪೊರೆವಾತ
ಸುಜನರ ಮನದಾತ ೧

ವ್ಯಾಸತೀರ್ಥನ ಆಸ್ಥಾನಕೊಡೆಯರಾಗಿ
ದುರ್ಗುಣಗಳ ನೀಗಿ
ಆಸೆಯಿಂದ ಶ್ರೀ ಕೃಷ್ಣನ ಚನ್ನಾಗಿ
ಪೂಜಿಸುತಲಿ ಬಾಗಿ
ದಾಸತ್ವದ ಲಕ್ಷಣ ತಿಳಿದವರಾಗಿ
ವಿಷಯ ಸಂಗ ತ್ಯಾಗಿ
ಪಸನ್ನ ಕೃಷ್ಣನೆಂಬಂಕಿತವನೆ ಇಟ್ಟು
ಪದರಚಿಸಿದ ಗುಟ್ಟು ೨.

'ವಿ' ಎನ್ನಲು ನರವಿಷಯ ಸಂಗದೂರ
'ಧ್ಯಾ' ಎನೆ ಧ್ಯಾನವರ
'ಪ್ರ' ಎನಲು ಸದ್ಗುಣನು
'ನ್ನ' ಎನ್ನಲು ಶ್ರೀ ನರಹರಿ ತಾನೊಲಿವ

'ತೀ' ಎನೆ ತೀರ್ವ ಭವ
'ರ್ಥಾ' ಎನ್ನಲು ಪುರುಷಾರ್ಥ ಪಡೆದ ಭೋಗಿ
'ರು' ಎನೆ ರುಜುಮಾರ್ಗಿ ೩

ವಿದ್ಯಾಪ್ರಸನ್ನತೀರ್ಥರು ಎಂದೆನ್ನುತಲಿ
ಸ್ಮರಿಪರ ಸಲಹುತಲಿ
ಮುದ್ದುಕೃಷ್ಣ ಪಟ್ಟಾಭಿರಾಮನಂಘ್ರಿ
ಸಚ್ಚರಿತ ಪ್ರಸಂಗಿ
ಸದ್ವಿದ್ಯಗಳಿಗೆ ಗರ್ವರಹಿತ ಭಾವ
ಬಹು ಸರಳ ಸ್ವಭಾವ
ಹೃದ್ವನಜಸ್ಥನ ಕಾಂಬ ಮುನಿವರೇಣ್ಯ
ಸದ್ಭಕ್ತ ಶರಣ್ಯ ೪

ಒಂದು ಅರಿಯದ ಮಂದ ಮತಿಯು ನಾನು
ಕ್ಷಮಿಸು ತಂದೆ ನೀನು
ಕುಂದನೆಣಿಸದೆ ಗುಣಗ್ರಹಿಸುತಲಿನ್ನು
ಶ್ರೀ ಹರಿ ನುಡಿಸಿದನು
ತಂದೆ ಮುದ್ದುಮೋಹನರ ಕೃಪೆಯಿಂದ
ರಚಿತ ಪದದಂದ
ಮಂದರಧರ ಗೋಪಾಲಕೃಷ್ಣವಿಠ್ಠಲ
ಗರ್ಪಿತ ಗುಣಮಾಲ ೫

## ೧೬೨

ಕರಕಮಲ ತಡೆಯುವುದೆ ಕಟುಖಾರವಾ
ನರಹರಿಯ ನಿತ್ಯ ಪೂಜಿಸುವ ಕೋಮಲದಾ ಪ.

ಪರಿವಾರ ಜನವು ಭೋಜನಕೆ ಕುಳಿತಿರಲು ನರ
ಹರಿಗೆ ಅರ್ಪಿತದ ಹುಳಿಯಲ್ಲಿ ಕರವಿಟ್ಟು

ಪರಿಪಕ್ವ ಶಾಖದ ಹೋಳುಗಳ ಬಡಿಸಲು
ಉರಿ ಉರಿ ಎಂಬ ತೆರದಿ ಮನ ಕರ ಕರೆಗೆ ಸಿಲುಕೇ ೧

ಮಧ್ವದುಗ್ಧಾಬ್ಧಿಯಲಿ ಜನಿಸಿದ ಸುಧಾರಸವ
ಶುದ್ಧ ದೃಷ್ಟಿಯಲ್ಲೀ ಸವಿಸವಿದು ಮಧುರಾ
ಹೃದ್ವಜದಲಿ ತುಂಬಲನುವಾದ ಪುಸ್ತಕವ
ಮುದ್ದಾಗಿ ಪಿಡಿಯಲನುಕೂಲವಾಗಿ ಇಂಥ ೨

ಗಂಧ ಕುಸುಮಾಕ್ಷತೆಗಳಿಂದ ಶ್ರೀ ತುಳಸಿದಳ
ದಿಂದ ವಿಠ್ಠಲ ಕೃಷ್ಣ ಲಕ್ಷ್ಮಿನರಹರಿಯಾ
ವೃಂದ ಸಾಲಿಗ್ರಾಮ ಹನುಮ ಯತಿಕುಲಜರುಗ
ಳಿಂದ ಸಹಿತದಿ ಪೂಜೆ ವಿಭವದಲಿ ಗೈದಾ ३

ಮಧುರಾನ್ನ ಸವಿದು ಮಧುಸೂದನನ ಗುಣಗಳನು
ವಿಧವಿಧದಿ ಮದ್ವಗ್ರಂಥದಿ ಕಂಡು ನಲಿದೂ
ಹೃದಯ ನಿರ್ಮಲದಿ ಆಲಿಸುವ ಭಕ್ತರಿಗೆ
ಮಧುರ ರಸಮನದ ಎಡೆಯಲ್ಲಿ ಬಿಡಿಸುವ ಇಂಥ ೪

ಗೋಪಾಲಕೃಷ್ಣವಿಠ್ಠಲನ ಭಕ್ತರು ಬಂದು
ಶ್ರೀಪಾದಕೆರಗೆ ಸಿರದಲ್ಲಿ ಅಕ್ಷತೆಯಾ
ಅಪಾರ ಕರುಣದಿಂದಲಿ ಸೂಸಿ ನಲಿಯುತಲಿ
ಅಪತ್ತು ಕಳೆವ ಶ್ರೀ ಪ್ರದ್ಯುಮ್ನತೀರ್ಥಯತಿ ೫

## ಹರಿದಾಸರ ಸ್ತುತಿ

### ೧೬३

ಆನಂದ ಸಾಗರದ ಸೌಖ್ಯವೇಂ ನುತಿಪೆ ಪ.

ಆನಂದ ಶ್ರೀ ಗುರುಗಳತಿ ಕೃಪೆಯೊಳಿತ್ತ ಅ.ಪ.

ಗಾನಲೋಲನ ಮಹಿಮೆ ಜ್ಞಾನ ಬೋಧನೆಯಿಂದ
ನಾನಾಪ್ರಕಾರದಿಂ ವರ್ಣಿಸುತಲಿ
ಮಾನಿನಿಯ ಮನದ ಶೋಕಾಗ್ನಿ ಶಾಂತಿಯಗೈಸಿ
ಮಾನಸದಿ ನಲಿವಂತೆ ಮಮತೆಯೊಳು ಪೊರೆದ ೧

ರಾಮಚಂದ್ರನ ಮಹಿಮೆ ನೇಮದಿಂದಲಿ ಪಠಿಸೆ
ಸೋಮಕಳೆ ಪೌರ್ಣಿಮ ಸ್ಥಿರವಾರದಿ
ರಾಮಪಟ್ಟಾಭಿಷೇಕದ ಮಹೋತ್ಸವ ನಡೆಸೆ
ಕಾಮಧೇನುವು ಎನುತ ಕರೆದು ಮುದವಿತ್ತು ೨

ಕಲುಷ ಲಿಂಗದ ಕಳೆಯ ಕಳೆದು ಚಂದ್ರನೊಳಿಟ್ಟು ಅ-
ನಿಲ ಭಾರತಿಯರ ವ್ಯಾಪಾರ ತಿಳಿಸಿ
ಜಲಜಾಕ್ಷ ಗೋಪಾಲಕೃಷ್ಣವಿಠ್ಠಲ ಮನದಿ
ನೆಲಸಿ ಮುಕ್ತಿಯ ಕೊಡುವ ಮಾರ್ಗ ತೋರಿದರು ೩

## ೧೬೪

ಆನಂದರತ್ನ ಪರಮಪ್ರಿಯರೆಂಬೊ ಬಿರುದುಳ್ಳ
ಶ್ರೀ ಗುರುವರರಾಯ ಪ.

ಏನೆಂಬೆ ನಾ ನಿಮ್ಮ ಕರುಣಕ್ಕೆ ಎಣೆಗಾಣೆ ಶ್ರೀ ಗುರುವರರಾಯ ಅ.ಪ.

ಭೂಸುರ ಜನ್ಮದಲಿ ದಾಸತ್ವದಿಂದ ಮೆರೆವೊ ।
ಶ್ರೀ ಗುರುವರರಾಯ
ಸಾಸಿರ ಫಣಿ ಪನ್ನಗಶಯನನ ಭಜಿಸುವೊ ।
ಶ್ರೀ ಗುರುವರರಾಯ ೧
ಶ್ರೀ ತಂದೆ ಮುದ್ದುಮೋಹನವಿಠಲದಾಸ । ಶ್ರೀ ಗುರುವರರಾಯ
ಪ್ರೀತಿಯಿಂದ ಹರಿಯ ಅಂಕಿತ ಕೊಡುವಂಥ ।
ಶ್ರೀ ಗುರುವರರಾಯ ೨

ಅಜ್ಞಾನಿಯಾದೆನಗೆ ಸುಜ್ಞಾನವಿತ್ತು ಕಾಯ್ದೆ ।
ಶ್ರೀ ಗುರುವರರಾಯ
ವಿಘ್ನಗಳನೆ ತರಿದು ಪ್ರಾಜ್ಞಾ ಮೂರುತಿಯ ತೋರ್‍ಯೆ ।
ಶ್ರೀ ಗುರುವರರಾಯ ೩

ಮಂದಜ್ಞರಿಗೆ ಜ್ಞಾನ ತಂದಿತ್ತು ರಕ್ಷಿಪ । ಶ್ರೀ ಗುರುವರರಾಯ
ಬಂದೆನು ನಿಮ್ಮ ಪಾದದ್ವಂದ್ವವೇ ಗತಿಯೆಂದು ।
ಶ್ರೀ ಗುರುವರರಾಯ ೪

ಅರಿಯೆನು ಅನ್ಯರ ಪರಿಹರಿಸಿ ಭವ । ಶ್ರೀ ಗುರುವರರಾಯ
ತರಳನ ಕಾಯ್ದು ನರಹರಿಯ ಭಜಿಸುವಂಥ ।
ಶ್ರೀ ಗುರುವರರಾಯ ೫

ಅಪರಾಧವೆಣಿಸದೆ ಸುಪಥಮಾರ್ಗವ ತೋರ್‍ಯೆ ।
ಶ್ರೀ ಗುರುವರರಾಯ
ಗುಪಿತ ಮಹಿಮ ನಿನ್ನ ಜಗದೊಳರಿವರ‍್ಯಾರು ।
ಶ್ರೀ ಗುರುವರರಾಯ ೬

ಅರಿಯಬಲ್ಲೆನೆ ನಿಮ್ಮ ಅಗಣಿತ ಮಹಿಮೆಯ ।
ಶ್ರೀ ಗುರುವರರಾಯ
ಸುರನರರಿಂದಲಿ ವಂದನೆಗೊಂಬುವ । ಶ್ರೀ ಗುರುವರರಾಯ ೭

ಅಂತರಂಗದಿ ಆನಂದವನಿತ್ತ ಮಹಿಮ । ಶ್ರೀ ಗುರುವರರಾಯ
ಶಾಂತಮೂರುತಿ ನಿಮ್ಮ ಶರಣೆಂದು ಭಜಿಸುವೆ ।
ಶ್ರೀ ಗುರುವರರಾಯ ೮

ನೀತ ಗುರುವೆ ನಿಮ್ಮ ನಂಬಿದೆ ಸಲಹಯ್ಯ ।
ಶ್ರೀ ಗುರುವರರಾಯ
ಖ್ಯಾತ ಶ್ರೀ ಗೋಪಾಲಕೃಷ್ಣವಿಠಲ ಪ್ರಿಯ ।
ಶ್ರೀ ಗುರುವರರಾಯ ೯

## ೧೬೫

ಇಂದಿರೇಶನ ಪದದ್ವಂದ್ವಕಮಲ ಭಜಿಪ
ಶ್ರೀ ಗುರುವರ ಭೂಪ ಪ.

ಬಂದೆನು ನಿಮ್ಮ ಪದ ಸಂದರುಶನಕೀಗ
ನೀಗಿರಿ ಭವರೋಗ ಅ.ಪ.

ಬಂದವರಯೋಗ್ಯತೆ ಅರಿತಂಕಿತವೀವ । ಕರುಣಾಳುವೆ ದೇವ
ನೊಂದೆನೀಗ ಈ ಅಜ್ಞಭವದಿ ಬಿದ್ದು । ಎಂದಿಗೆ ನಾ ಗೆದ್ದು
ಇಂದಿರೇಶನ ಹೃತ್ಕಮಲದಲಿ ಕಾಂಬೆ । ಗುರುವೆ ತೋರೆಂಬೆ
ಬಂದ ಬಂದ ಕಷ್ಟ ಹಿಂದು ಮಾಡಿ ಪೊರೆದು ।
ಕೃಪೆಗೈಯ್ಯಲಿ ಬೇಕಿಂದು ೧

ಮುಖ ಕಮಲದಿ ಹೊರಡುವ ವಾಕ್ಸರಣಿಗಳು ।
ಗಂಗಾ ಪ್ರವಾಹಂಗಳು
ಅಕಳಂಕದ ತತ್ವಾರ್ಥದಿ ನಾ ಮುಳುಗಿ । ದುರಿತದ ಭವನೀಗಿ
ಸುಖ ಸಾರೂಪ್ಯದ ಮುಕುತಿ ಮಾರ್ಗ ಕಂಡೆ ।
ಇನ್ನೀ ಭವ ತುಂಡೆ
ಭಕುತಿ ಭಾಗ್ಯವ ನಿತ್ಯದಿ ಕರುಣಿಪುದು । ಸುಜ್ಞಾನವ ನೀಡುವುದು ೨

ಇಳೆಯೊಳಿಲ್ಲ ಈ ಚರ್ಯೆ ತೋರುವವರು । ಉದ್ಧರಿಪರಿನ್ಯಾರು
ಒಳಹೊರಗೊಂದಾಗುವ ಪರಿ ಕರುಣಿಪುದು । ನ್ಯಾಯವೆ ನೂಕುವುದು
ಪೊಳಲೊಡೆಯನ ಪರಿಪರಿ ಮಹಿಮಾದಿಗಳ । ರೂಪ ಜಾಲಗಳ
ತಿಳಿದಾನಂದಪಡುವ ಗುರುವರೇಣ್ಯ । ಪೊರೆಯ ಬೇಕೀಗೆನ್ನ ೩

ಕರಿಗಿರಿ ನರಹರಿ ಪದಕಮಲಗಳನ್ನು । ಹೃದ್ವನಜದೊಳಿನ್ನು
ಪರಿಪರಿ ಪೂಜಿಸಿ ಪರಮಾದರದಲ್ಲಿ । ಸಂಕರ್ಷಣನಲ್ಲಿ

ಇರಿಸಿಹ ಮನವನು ನರರಿಗೆ ತೋರದಲೆ । ಚರಿಸುವ ಈ ಲೀಲೆ
ಅರಿತು ಪೇಳೆ ಈ ಪಾಮರಳಿಗೆ ಅಳವೇ । ಆನಂದದಲಿರುವೆ ೪

ತಂದೆ ಮುದ್ದು ಮೋಹನವಿಠಲ ದೇವ । ಹೃದ್ವನಜದಲಿ ಕಾವ
ಸುಂದರ ಗೋಪಾಲಕೃಷ್ಣವಿಠ್ಠಲ ನಿಮ್ಮೊಳು ।
ರಮಿಸುವ ನಿತ್ಯದೊಳು
ಮಂದಬುದ್ಧಿಗೆ ಇಂತು ಮತಿಯನಿತ್ತು । ಸಲಹಲಿ ಬೇಕಿಂತು
ತಂದೆ ಧರೆಯೊಳು ಮತ್ತೊಬ್ಬರ ಕಾಣೆ । ಕಾಪಾಡಬೇಕೆನ್ನಾಣೆ ೫

## ೧೬೬

ಇಂದೇಕೆ ಈ ಪರಿ ನಿರ್ದಯಗೈದಿರಿ
ತಂದೆ ಶ್ರೀ ಗುರುವೆ ಪೇಳಿ ಪ.

ನೊಂದೆನು ಈ ದಿನ ನಿಮ್ಮ ವಾರ್ತೆ ತಿಳಿಯದೆ
ಕುಂದೇನು ತೊರಿತೋ ಎನ್ನಿಂದ ಕ್ಷಮಿಸಿರಿ ಅ.ಪ.

ಪ್ರತಿದಿನದಲಿ ನಿಮ್ಮ ಹಿತವಾರ್ತೆ ಕೇಳುತ
ಅತಿಶಯಾನಂದವ ಪಡುತಲಿದ್ದೆ
ಮತಿವಂತರೇ ಇಂದು ಅತಿಶಯದ ನಿಮ್ಮ
ಹಿತವಾರ್ತೆ ತಿಳಿಯದೆ ಮತಿ ಹೀನಳಾಗಿಹೆ ೧

ಉಲ್ಲಾಸಗೊಳಿಸುವ ಪುಲ್ಲನಾಭವ ಮಹಿಮೆ
ಸೊಲ್ಲು ಸೊಲ್ಲಿಗೆ ನುಡಿಸಿ ಭವದಾಟಿಸಿ
ಒಲ್ಲೆನು ನಾನೊಂದು ಇಹಪರ ಸೌಖ್ಯವು
ನಿಲ್ಲಲಿ ಎನ್ನಮನ ನಿಮ್ಮ ಪಾದದಿ ನಿರುತ ೨

ತನುಮನ ಒಪ್ಪಿಸಿ ಮನದಿ ಧ್ಯಾನಿಸುವುದು
ಘನಮನಕಿನ್ನೀಗ ಬರಲಿಲ್ಲವೆ
ವನಜಜಾಂಡದೊಳಿನ್ನು ಎನ್ನ ರಕ್ಷಿಸುವರ
ಮನದಿ ನಾ ಕಾಣೆನು ವನಜಾಕ್ಷ ಬಲ್ಲನು ೩

ಮೊರೆಯ ಕೇಳುತಲೀಗ ತ್ವರಿತದಿಂ ಬನ್ನಿರಿ
ಸರಸಿಜಾಕ್ಷನ ತೋರಿ ಹರುಷವಿತ್ತು
ದುರಿತವ ತೊಲಗಿಸಿ ಕರಕರಗೊಳಿಸದೆ
ಪರಮಪ್ರಿಯರು ಎಂಬೊ ಬಿರುದುಳ್ಳ ಶ್ರೀ ಗುರುವೆ ೪

ತಡಮಾಡದೆ ಭವಕಡಲ ದಾಟಿಸಿ ಈಗ
ಮೃಡಸಖನನು ತೋರಿ ದೃಢ ಮನದಿ
ಒಡೆಯ ಶ್ರೀ ಗೋಪಾಲಕೃಷ್ಣವಿಠ್ಠಲ ಜಗಕೆ
ಬಿಡದೆ ಪೊರೆಯುವನೆಂಬೊ ದೃಢವೆನಗೆ ಕರುಣಿಸಿ ೫

## ೧೬೭

ಎಂದಿಗೆ ನಿಮ್ಮ ಪದ ಕಾಂಬೆನೊ । ಗುರು
ಎಂದಿಗೆ ನಿಮ್ಮ ಪದ ಕಾಂಬೆನೊ ಪ.

ಎಂದಿಗೆ ನಿಮ್ಮ ಕಾಂಬೆ
ಅಂದಿಗೆ ಮುಕ್ತಳಹೆ ಅ.ಪ.

ಸಕಲ ಶಾಸ್ತ್ರಗಳನೆ ಶೋಧಿಸಿ । ಬಹು
ಅಕಳಂಕ ತತ್ವವ ಸಾಧಿಸಿ । ಬೇಗ
ಮುಕುತಿ ಯೋಗ್ಯರಿಗೆಲ್ಲ
ಸುಖವ ತೋರುವ ಗುರು ೧

ಮನದಿ ನೆಲಸಿ ಲೀಲೆ ತೋರುತ । ದೃಢ
ಮನದಿ ಮನಸಿಜನ ಗೆಲ್ಲುತ । ದೇವ
ಮನಸಿಜನಯ್ಯನ
ಮನಸಿನೊಳ್ ತೋರುತ ೨

ಕಷ್ಟಪಡುವುದು ಕಾಣುತ । ಬಹು
ತುಷ್ಟರಾಗಿ ಅಭಯ ನೀಡುತ । ಮನ
ಮುಟ್ಟಿ ರಕ್ಷಿಪೆನೆಂದು
ಇಷ್ಟು ಸಲಿಪ ಗುರು ೩

ನರಹರಿ ಧ್ಯಾನಿಪ ಶ್ರೀ ಗುರು । ಬಹು
ಕರುಣಾಳುವೆ ದೇವತರು । ನಿಮ್ಮ
ಅರಘಳಿಗೆ ಬಿಟ್ಟು
ಇರಲಾರೆ ಧರೆಯೊಳು ೪

ಮುಕ್ತಿ ಸೌಭಾಗ್ಯವ ನೀಡುವ । ಬಹು
ಶಕ್ತರಹುದು ನಿಮ್ಮ ಭಾವವ । ನಾನು
ಎತ್ತ ಯೋಚಿಸೆ ಕಾಣೆ
ಸತ್ಯವಚನವಿದು ೫

ಆನಂದಪಡಿಸುವ ಶ್ರೀ ಗುರು । ನಿಮ್ಮ
ಏನೆಂದು ಸ್ತುತಿಹಲಿ ಪಾಮರರು । ನಿಮ್ಮ
ಕಾಣರು ಜಗದಲಿ
ಏನೆಂಬೆ ಮಹಿಮೆಯ ೬

ಗೋಪಾಲಕೃಷ್ಣವಿಠ್ಠಲನ । ಶುಭ
ರೂಪವ ತೋರುವ ಕಾರುಣ್ಯ । ದೇವ
ಈ ಪರಿ ನಿಮ್ಮ ಸ್ತುತಿಸಿ
ನಾ ಪಾರು ಕಾಂಬೆನು ೭

## ೧೬೮

ಏನು ಮಹಿಮರೊ ನಮ್ಮ ಶ್ರೀ ಗುರುಗಳು
ಶ್ರೀನಿಧಿಗೆ ಪರಮ ಪ್ರಿಯರೆನಿಸಿ ಮೆರೆಯುವರು ಪ.

ಶಾಂತತ್ವವೆಂತೆಂಬ ಕವಚವನೆ ತೊಟ್ಟಿಹರು
ದಾಂತತ್ವದಾ ನಡುಕಟ್ಟು ಕಟ್ಟಿಹರು
ಸಂತೋಷ ಸುಖದಲಿ ಅಂತರಂಗದಿ ಹರಿಯ
ಚಿಂತನೆಯ ಮಾಡುತಲಿ ಮುಕ್ತಿಪೊಂದಿಹರು ೧

ವೈರಾಗ್ಯವೆಂತೆಂಬ ಆಯುಧವ ಧರಿಸಿಹರು
ಸೇರಿದವರನು ಪೊರೆವ ಕಂಕಣವ ಕಟ್ಟಿ
ನಾರಸಿಂಹನ ನಾಮ ಕರ್ಣಭೂಷಣ ಧರಿಸಿ
ನಾರಾಯಣನ ಗುಣದ ಹಾರ ಧರಿಸಿಹರು ೨

ಪರರಿಗುಪಕಾರವನೆಸಗುವ ಭುಜದ ಕೀರುತಿಯು
ವರತತ್ವ ಅರುಹುವ ವನಮಾಲಿಕೆಯು
ಸಿರಿ ಭಕ್ತಿಗುಣಗಳೆಂತೆಂಬೊ ವಸನಗಳು
ಧರಿಸಿರುವ ಮಹಿಮರ ಸರಿಗಾಣೆ ಜಗದಿ ೩

ಕುಂದದೆ ಭಕ್ತರನು ಪೊರೆಯುವ ಭಾರದ
ಅಂದದಾ ಮುಕುಟ ಶಿರದಲ್ಲಿ ಧರಿಸಿ
ತಂದೆ ಮುದ್ದುಮೋಹನದಾಸರೆಂದೆನಿಸುತ
ಮಂದಜ್ಞಮನ ಪಾಪ ಪಾದುಕೆಯ ಮೆಟ್ಟಿಹರು ೪

ಎಷ್ಟು ಹೇಳಲು ಸಾಧ್ಯ ಶ್ರೇಷ್ಠ ಗುರುಗಳ ಚರಿತೆ
ಪಟ್ಟವಾಳ್ವರು ಜ್ಞಾನ ಸಾಮ್ರಾಜ್ಯವ
ಕೆಟ್ಟ ಭವರೋಗವನು ಸುಟ್ಟು ಭಸ್ಮವ ಮಾಡಿ
ಶ್ರೇಷ್ಠ ಗೋಪಾಲಕೃಷ್ಣವಿಠ್ಠಲನ ತೋರ್ವರು ೫

## ೧೬೯

ಏಳು ಪುರಂದರ ಗುರುವರ ಇನ್ನು
ಭಾಳ ಹೊತ್ತಾಯಿತು ಭಕುತ ಜನಪ್ರಿಯ ಪ.

ಶ್ರೀಶನಪ್ಪಣೆಯಿಂದ ಭೂಲೋಕದಲಿ ಪುಟ್ಟಿ
ಆಶೆಯಿಂದಲಿ ಧನ ಗಳಿಸಿ ಕೋಟಿ
ವಾಸುದೇವನು ಎಚ್ಚರಿಸಲು ವೈರಾಗ್ಯ
ದಾಸತ್ವದಲಿ ಜಗದಿ ಮೆರೆಯಬೇಕು ೧

ವ್ಯಾಸ ಮುನಿಯಿಂದುಪದೇಶಕೊಳ್ಳಲುಬೇಕು
ದಾಸತ್ವ ಜಗದಲಿ ಸ್ಥಾಪಿಸಬೇಕು
ದೋಷರಹಿತ ಮಧ್ವಶಾಸ್ತ್ರ ತತ್ವಗಳ ಪ್ರ
ಕಾಶಗೈಸುತ ಕವನಗೈಯ್ಯಬೇಕು ೨

ಸತಿಸುತ ಪರಿವಾರ ಭೂ ಸಂಚರಿಸಬೇಕು
ಸ್ತುತಿಸುತ್ತ ಹರಿಯನ್ನು ಕುಣಿಸಬೇಕು
ಜತನದಿ ನಿಜತತ್ವಗಳನರಿಯಲಿಬೇಕು
ಕ್ಷಿತಿಗೆ ಅಚ್ಚರಿ ಮಹಿಮೆಯ ತೋರಬೇಕು ೩

ಪುಷ್ಯದಮಾವಾಸೆ ಹರಿಪುರ ಸೇರಲು
ಶಿಷ್ಯಕುಲವು ಜಗದಿ ಬೆಳೆಯಲೆಂದು
ಶಿಷ್ಯ ವಿಜಯದಾಸರಿಗೆ ಅಂಕಿತವನಿತ್ತು
ಶಿಷ್ಯ ಪ್ರಶಿಷ್ಯ ಸಂತತಿ ಬೆಳಸಬೇಕು ೪

ಪಾಪಿ ಜನಗಳ ಪಾವನಗೈಯಲಿಬೇಕು
ತಾಪಪಡುವರ ಪೊರೆಯಲೆತ್ನಿಸಬೇಕು
ಶ್ರೀಪತಿ ದಾಸತ್ವ ಜಗದಿ ನಿಲ್ಲಿಸಬೇಕು
ಗೋಪಾಲಕೃಷ್ಣವಿಠ್ಠಲನ ಸ್ಮರಿಸಬೇಕು ೫

## ೧೭೦

ಏಳು ಶ್ರೀ ಗುರುರಾಯ ಏಳು ಪರಮಪ್ರಿಯ
ಏಳು ಮಂಗಳಕಾಯ ಭಕ್ತಜನಪ್ರಿಯ ಏಳಯ್ಯ ಬೆಳಗಾಯಿತು ಪ.

ಬಳಲಿ ಬಂದಿರುವಂಥ ಬಾಲ ಶಿಷ್ಯಂದಿರನು
ಸುಲಲಿತದ ಪ್ರಿಯ ವಾಕ್ಯದಿಂದ ಸಂತೈಸಿ
ಮಲಿನ ಮನವನೆ ತಿದ್ದಿ ಸುಜ್ಞಾನ ಬೋಧಿಸಿ
ನಳಿನನಾಭನ ಪಾದಕೊಪ್ಪಿಸಲಿಬೇಕು ೧

ಶುದ್ಧಾಂತಃಕರಣದಿಂ ಪೊದ್ದಿರುವ ಶಿಷ್ಯರನು
ಉದ್ಧಾರಗೈಯಲಂಕಿತಗಳಿತ್ತು
ಮಧ್ವಶಾಸ್ತ್ರದ ಸಾರ ತತ್ವಾಮೃತವನುಣಿಸಿ
ಪದ್ಮನಾಭನ ದಾಸರೆಂದೆನಿಸಬೇಕು ೨

ಎದ್ದು ಸ್ನಾನವಗೈದು ತಿದ್ದಿ ನಾಮವನ್ಹಚ್ಚಿ
ಪದ್ಮಾಕ್ಷಿ ತುಳಸಿ ಮಾಲೆಗಳ ಧರಿಸಿ
ಗದ್ದುಗೆಯೊಳು ಕುಳಿತು ಹೃದ್ವನಜಸ್ಥಾನ
ಪದ್ಮಪಾದವ ಮನದಿ ಸ್ಮರಿಸಬೇಕು ೩

ಹಿಂದ್ಯಾರು ಪೊರೆದರು ಮುಂದ್ಯಾರು ಕಾಯ್ದರು
ತಂದೆ ನೀವಲ್ಲದಿರೆ ಪೊಂದಿದರಿಗೆ
ತಂದೆ ಮುದ್ದುಮೋಹನದಾಸವರ ಎಮ್ಮೊಳು
ಕುಂದನೆಣಿಸದೆ ಕಾಯೊ ಕರುಣಾಳು ಗುರುವೆ ೪

ಅಪಾರಮಹಿಮನೆ ಆಪನ್ನ ರಕ್ಷಕನೆ
ಗೋಪಾಲಕೃಷ್ಣವಿಠ್ಠಲನಂಘ್ರಿ ಕಮಲ
ಕೃಪಾಳು ತೋರು ನೀ ಕೃಪೆಮಾಡು ಕಣ್ತೆರದು
ಶ್ರೀ ಪದ್ಮಜಾತರೊಂದಿತನ ದಾಸಾರ್ಯ ೫

# ೧೭೧

ಐದನೆ ವರ್ಷದ ಅಂತ್ಯ ಭಾಗದೊಳಗೆ
ಐದುವೊ ಮಾರ್ಗವನು ನಿಶ್ಚಯಿಸಿದೆ ಪ.

ಆದಿಮಾಸದ ಶುದ್ಧನವಮಿ ಸ್ಥಿರವಾರದಲಿ
ಮೋದಗುರುಗಳು ಬೋಧಿಸೆ । ದಯದಿ ಅ.ಪ.

ಐದನೆ ತಿಂಗಳಲಿ ಅಂಕುರುವು ಪಲ್ಲೈಸಿ
ಐದು ಇಂದ್ರಿಯವು ಕಲೆತು
ಐದು ಭೂತನ ಕಾಯ ಐದಲಾರದು ಜೊತೆಗೆ
ಐದುವುದು ಕರ್ಮ ಒಂದು
ಈ ದಿವ್ಯ ಮತಿಯೆನಗೆ ಸಾದರದಿ ಪುಟ್ಟಲು
ಮೋದವಾಗುತ ಮನದೊಳು
ಆದಿದೈವನ ಕರುಣವಾದ ಬಳಿಕಿನ್ನೇನು
ಪಾದಪದ್ಮವ ತೋರೆಲೊ । ಸ್ವಾಮಿ ೧

ಐದೆರಡು ಒಂದು ಇಂದ್ರಿಯಗಳನೆ ಬಂಧಿಸಿ
ಐದಿಸಿ ಮೂಲಸ್ಥಳಕೆ
ಐದು ರೂಪಾತ್ಮಕನ ಆದರದಿ ಪೂಜಿಸುತ
ಐದೊಂದು ದೂರ ತ್ಯಜಿಸಿ
ಐದು ನಾಲ್ಕು ತತ್ವದಧಿಪತಿಗಳನು
ಆದರದಿ ಧ್ಯಾನಮಾಡಿ
ಐದು ಮೂರು ದಳದಿ ಆದಿತ್ಯನಂತಿರುವ
ಶ್ರೀಧರನ ನುತಿಸಿ ನುತಿಸಿ । ಸ್ತುತಿಸಿ ೨

ಐದು ಭೇದಗಳ ಮತ ಸ್ಥಾಪಕರ ಕರುಣದಲಿ
ಐದು ಮೂರನೆ ಖಂಡಿಸಿ
ಐದೆರಡು ರೂಪಕನ ಆದರದಿ ಸ್ತುತಿಸುತ್ತ
ಭೇದಿಸಿ ಹೃದಯಗ್ರಂಥಿ

ಶ್ರೀದ ಶ್ರೀಗೋಪಾಲಕೃಷ್ಣವಿಠ್ಠಲನ ಪದ
ಆದರದಿ ನಂಬಿ ಸ್ತುತಿಸಿ
ಈ ದಾರಿ ಕಾಣಲು ಇದಕೆ ಕಾರಣದಿವ್ಯ
ಮೋದ ಶ್ರೀಗುರು ಕರುಣವೋ । ದಯವೋ ೩

## ೧೭೨

ಕಂಡು ಧನ್ಯಳಾದೆ ನಾನೀಗ । ಈ ದಿವ್ಯ ಪಾದ
ಕಂಡು ಧನ್ಯಳಾದೆ ನಾನೀಗ ಪ.

ಕಂಡು ಧನ್ಯಳಾದೆನೀಗ ತಂಡ ತಂಡದ ಪಾಪಗಳನು
ಖಂಡಿಸುತಲಿ ಹರಿಯ ರೂಪ ಕಂಡು ಭಜಿಪ ದಿವ್ಯ ಪಾದ ಅ.ಪ.

ಭಕ್ತ ನುಡಿಗೆ ಮನದಿ ಮರುಗಿ
ಮುಕ್ತಿ ತೋರ್ವೆನೆಂದು ಬಂದು
ಶಕ್ತನಾದ ಹರಿಯ ತೋರಿ
ಭಕ್ತಜನರ ಪೊರೆವೊ ಪಾದ ೧

ಕಮಲನಾಭನ ಭಜಿಪ ಪಾದ
ಕಮಲಾಪತಿಗೆ ಪ್ರೀತಿ ಪಾದ
ಕಮಲಪುಷ್ಪ ಹರಿಗೆ ಅರ್ಪಿಸಿ
ಕಮಲಾಕ್ಷನನು ತೋರ್ಪ ಪಾದ ೨

ತಂದೆ ಮುದ್ದುಮೋಹನರೆಂ–
ತೆಂದು ಜಗದಿ ಮೆರೆವೊ ಪಾದ
ನಂದ ಕಂದನ ಮನದಿ ತೋರಿ
ಇಂದು ಆನಂದ ಕೊಡುವೊ ೩

ಪಾದತೊಳೆದು ಪೂಜೆಗೈದು
ಪಾದೋದಕವ ಪಾನಮಾಡಿ

ಪಾದಪದ್ಮ ನಂಬಿ ನಮಿಸಿ
ಪಾದಕಮಲ ಸ್ತೋತ್ರಗೈವೆ ೪

ಗೋಪಾಲಕೃಷ್ಣವಿಠ್ಠಲನ
ರೂಪ ಮನದಿ ತೋರ್ವ ಪಾದ
ಪಾಪಗಳನು ಧ್ವಂಸಗೈದು
ಶ್ರೀಪತಿಯ ತೋರ್ವ ಪಾದ ೫

## ೧೭೩

ಗುರುವೆ ನಿಮ್ಮನು ನಾ ಮೊರೆಹೊಕ್ಕೆನಲ್ಲದೆ
ಅರಿಯೆ ಅನ್ಯರನಿನ್ನು ಪೊರೆಯಿರೀಗ ಪ.

ಸಿರಿಯರಸನ ತೋರಿ ಗುರುವೆ ಕರುಣಿಸಿರಿ
ತರತಮ್ಯ ತಿಳಿಸುತ ಹರಿಸಿರಿ ಭವದುಃಖ ಅ.ಪ.

ಬಂದೆನು ಭವದೊಳು ನಿಂದೆನು ತಾಪದಿ
ಹಿಂದು ಮುಂದರಿಯದೆ ಕುಂದಿದೆನು
ಬಂದು ಕರುಣದಿ ಆನಂದವ ನೀಡುತ
ನಂದಕಂದನ ಲೀಲೆಯಿಂದ ರಕ್ಷಿಸಿದಿರಿ ೧

ಮುಸುಕಿದ ಅಜ್ಞಾನ ಹಸನಾಗಿ ತೊಲಗಿಸಿ
ಕುಶಲದ ಮತಿಯಿತ್ತು ಪಾಲಿಸುತ
ಬಿಸಜಾಕ್ಷನು ದಯ ಎಸೆವ ಕರುಣದಿಯಿತ್ತು
ಘಸಣೆಗೊಳಿಸದಲೆ ವಸುಮತಿಯೊಳು ಪೊರೆವ ೨

ಕಷ್ಟವಪಡಲಾರೆ ಸೃಷ್ಟಿಯೊಳಗಿನ್ನು
ತಟ್ಟದೆ ಎನ್ನ ಮೊರೆ ಮನಸಿಗೀಗ
ಕೊಟ್ಟು ಅಭಯವನು ಘಟ್ಯಾಗಿ ಪೊರೆಯಿರಿ
ಕೆಟ್ಟ ಕಲ್ಮಷ ಕಳೆದು ಸೃಷ್ಟಿಗೊಡೆಯನ ತೋರಿ ೩

ತಲ್ಲಣಿಸುತಿಹೆ ಕ್ಷುಲ್ಲ ದೇಹದಿ ಬಂದು
ಒಲ್ಲೆನು ಈ ದುಃಖಭವ
ಎಲ್ಲ ಮನಸು ನಿಮ್ಮ ಪಾದದಲಿರುವುದು
ತಲ್ಲಣಗೊಳಿಸದೆ ಪೊರೆಯಿರಿ ಗುರುದೇವ ೪

ತಂದೆ ಮುದ್ದುಮೋಹನವಿಠ್ಠಲನೆಂಬೊ
ಇಂದಿರೇಶನ ಅಂಕಿತದಿ ಮೆರೆವೊ
ಸುಂದರ ಗೋಪಾಲಕೃಷ್ಣವಿಠ್ಠಲನ
ಎಂದೆಂದಿಗೂ ಮನಮಂದಿರದಲಿ ಕಾಂಬ ೫

## ೧೭೪

## ಉಗಾಭೋಗ

ಗುರುವಿನ ಕರುಣದಿ ಭಕ್ತಿ ಜ್ಞಾನಾದಿಗಳು
ಗುರುವಿನ ಕರುಣದಿ ವೈರಾಗ್ಯ ಭಾವವು
ಗುರುವಿನ ಕರುಣದಿ ತತ್ವ ಸಾಧನೆಗಳು
ಗುರುವಿನ ಕರುಣದಿ ಆತ್ಮ ವಿವೇಕಗಳು
ಗುರುವಿನ ಕರುಣದಿ ಅಪರೋಕ್ಷ ಪುಟ್ಟಲು
ಗರುವಿಕೆಯನೆ ಬಿಡಿಸಿ ಕರೆದು ಕೊಡುವ ಮುಕ್ತಿ
ಗುರು ಅಂತರ್ಯಾಮಿ ಶ್ರೀ ಗೋಪಾಲಕೃಷ್ಣವಿಠ್ಠಲ

## ೧೭೫

ಗುರುರಾಜ । ನಮಿಪರ ಸುರಭೋಜ
ಗುರುರಾಜ ಪ.

ವರತಂದೆ ಮುದ್ದುಮೋಹನರೆಂದೆನಿಸುತ
ಮೆರೆಯುತ ಜಗದೊಳು ಪೊರೆಯುವ ಕರುಣಿ ೧

ಅಜ್ಞತೆ ತೊಲಗಿಸಿ ಸುಜ್ಞತೆ ಕೊಡುತಲಿ
ವಿಘ್ನವ ತರಿಯುವ ಪ್ರಾಜ್ಞ ಮೂರುತಿಯೆ ೨

ಸರಸಿಜಾಕ್ಷನ ಪದ ಹರುಷದಿ ಭಜಿಸುವ
ಪರಮಪ್ರಿಯರು ಎಂದು ಬಿರುದು ಪೊತ್ತಿಹರೆ ೩

ನಾಗಶಯನನಿಗೆ ಭೋಗವಪಡಿಸುವ
ಆಗಮಜ್ಞರೆ ನಿಮಗೆ ಬಾಗುವೆ ಸತತ ೪

ಸಾಸಿರ ಫಣೆಯಿಂದ ಸೂಸುವ ಕಾಂತಿಯೊಳ್
ಶ್ರೀಶನ ಕಾಣುವ ವಾಸವ ವಿನುತ ೫

ದೇವತಾಂಶದ ಗುರು ಪವಮಾನಿಗೆ ಪ್ರಿಯ
ಭಾವಿಸಿ ಭಜಿಪರ ಕಾವ ಕರುಣಾಳು ೬

ಶಾಂತಚಿತ್ತದಿ ಬಹು ಸಂತೋಷಪಡುತಲಿ
ಅಂತರಂಗದಿ ಹರಿಯ ಚಿಂತಿಸುತಿರುವ ೭

ಉದ್ಭವಿಸಿ ಜಗದಿ ಅದ್ಭುತ ಮಹಿಮೆಯ
ಒಬ್ಬೊಬ್ಬರಿಗೆ ತೋರಿ ಹಬ್ಬಿಪೆ ಹರುಷ ೮

ಸೃಷ್ಟೀಶ ಗೋಪಾಲಕೃಷ್ಣವಿಠ್ಠಲನನು
ದೃಷ್ಟಿಗೆ ತೋರಿಸಿ ಕಷ್ಟ ಬಿಡಿಸಿರಿ ೯

## ೧೭೬

ಗುರುರತ್ನ ಪರಮ ಪ್ರಿಯ ಕರುಣಾನಿಧೆ ನಿಮ್ಮ
ಶರಣು ಹೊಕ್ಕೆನು ಪೊರೆಯಬೇಕೆನ್ನ ದೊರೆಯೆ ಪ.

ವರ ತಂದೆ ಮುದ್ದುಮೋಹನ ದಾಸಾರ್ಯರೆ
ಪರಿಪರಿಯಿಂದ ಭಕ್ತರನು ಪೊರೆಯುವರೆ

ಪರಮಾರ್ಥ ಚಂದ್ರೋದಯದ ಪ್ರಕಾಶಕರೆ
ಪರಿಮಳ ಸುನಾಮದಲಿ ಸರ್ವತ್ರವ್ಯಾಪಕರೆ ೧

ತರತರದ ಸುಗುಣ ಮಣಿಮಾಲೆಯಿಂ ಶೋಭಿಪರೆ
ವರಶಿಷ್ಯ ರತ್ನಪದಕಗಳಿಂದಲೊಪ್ಪಿಹರೆ
ಸುರರಗಣ ಮಧ್ಯದಲಿ ಪರಿಶೋಭಿಸುತಲಿಹರೆ
ಮೊರೆಹೊಕ್ಕವರ ಕಾಯ್ವ ಪರಮ ಕರುಣಾಕರರೆ ೨

ಕನಸಿನಲಿ ಮನಸಿನಲಿ ಕಳವಳವ ಹರಿಸುವರೆ
ಮನಸಿಜಪಿತನನ್ನು ಮನದಿ ನೆನೆಯುವರೆ
ಇನಕೋಟಿತೇಜ ಶ್ರೀ ಶ್ರೀನಿವಾಸನ ಕೃಪೆಗೆ
ಅನುಮಾನವಿಲ್ಲದೆಲೆ ಅರ್ಹತೆಯ ಕೊಡಿಸುವರೆ ೩

ಭಕ್ತರನು ಪೊರೆಯುವ ಕಾರುಣ್ಯನಿಧಿ ಎಂದು
ಭಕ್ತಿಯಿಂದಲಿ ನಿಮ್ಮ ಪಾದ ನಂಬಿರುವೆ
ಭಕ್ತವತ್ಸಲ ಶೇಷಶಯನನಾ ಸೇವೆಯನು
ನಿತ್ಯ ಮಾಳ್ಪಂಥ ಸೌಭಾಗ್ಯ ನೀಡುವುದು ೪

ಕವಿದಿರುವ ಅಜ್ಞಾನಪರೆಯನ್ನು ಭೇದಿಸುತ
ಸವಿಯಾದ ಹರಿಯ ನಾಮಾಮೃತ ಉಣಿಸಿ
ಪವನನಂತರ್ಯಾಮಿ ಗೋಪಾಲಕೃಷ್ಣವಿಠ್ಠಲ
ತವಕದಿಂದಲಿ ಪೊಳೆವ ಸುಜ್ಞಾನ ನೀಡುವುದು ೫

## ೧೭೭

ತಪಿಸಲಾರೆ ನಾನು ಪರಿಪರಿ ತಾಪದಲಿ
ಕೃಪೆಮಡಿ ಸಲಹಿರಿ ಶ್ರೀ ಗುರುಗಳೆ ಪ.

ಸುಪಥ ಕಾಣದೆ ನಿಮ್ಮ ಪಾದವನೆ ನಂಬಿದೆನು
ಗುಪಿತ ಮಹಿಮರೆ ಇನ್ನು ಭವಪಾಶ ಬಿಡಿಸುತ್ತ ಅ.ಪ.

ಬಂಧು ವರ್ಗಗಳನ್ನ ಬದುಕಿಸುವರು ಎಂದು
ಬಂಧನದೊಳು ಬಿದ್ದು ಬೆಂದು ನೊಂದೆ
ಮುಂದೆ ದಾರಿಯ ಕಾಣೆ ಮುಕ್ತಿ ಮಾರ್ಗವನರಿಯೆ
ಬಂಧು ಬಳಗಗಳೆಲ್ಲ ನೀವೆಂದು ನಂಬಿದೆ ೧

ಅಶನವಸನಗಳಲ್ಲಿ ಆಸೆಯನು ತೊರೆಯದೆ
ವಸುಮತಿಯೊಳು ಜ್ಞಾನ ಹೀನವಾಗಿ
ಪಶುವಿನಂದದಿ ತಿರುಗಿ ಕಾಲವ್ಯರ್ಥ ಕಳೆದೆ
ಅಸಮ ಮಹಿಮರೆ ಇನ್ನು ಅಜ್ಞಾನ ಪರಿಹರಿಸಿ ೨

ಮಮತೆಯನು ತೊರೆಯದೆ ಮಾಯ ಪಾಶಕೆ ಸಿಲುಕಿ
ಮಮಕಾರದಿಂದ ನಾ ಮೈಮರೆತೆನು
ನಮಿಸುವೆನು ದೈನ್ಯದಲಿ ನಾನೀಗ ನಿಮ್ಮ ಪದಕೆ
ರಮೆಯರಸನ ತೋರಿ ಎನ್ನ ಮನ ಮಧ್ಯದಿ ೩

ಪಾವನರೂಪರೆ ಪಾಪರಾಹಿತ್ಯರೆ
ಪಾವಿನಶಯನಗೆ ಪರಮಪ್ರಿಯರೆ
ದೇವತೆಗಳೊಡೆಯರೆ ದೇವಾಂಶ ಸಂಭವರೆ
ಪಾವಮಾನಿಗೆ ಪ್ರಿಯರೆ ಪಾವನ್ನಗಾತ್ರರೆ ೪

ಆಪತ್ತು ಕಳೆಯುವರೆ ಶ್ರೀಪತಿಯ ತೋರ್ವರೆ
ಕೋಪಿಸದೆ ಎನ್ನೊಳು ಕೃಪೆಗೈಯ್ಯರಿ
ಗೋಪಾಲಕೃಷ್ಣವಿಠ್ಠಲ ತಾನು ಹೃದಯದಲಿ
ತೋರ್ಪಂತೆ ಕರುಣಿಸುತ ಈ ಪರಿಯಿಂ ಸಲಹಿರಿ ೫

## ೧೭೮

ತಂದೆ ಮುದ್ದುಮೋಹನ ದಾಸರಾಯರ ಪದವ
ಪೊಂದಿದವರಿಗೆ ಕಷ್ಟವೆ ಪ.

ಬಂಧನವ ಪರಿಹರಿಸಿ ಸಿಂಧುಶಯನನ ಮೂರ್ತಿ
ತಂದು ತೋರುವರು ಮನದಿ । ಮುದದಿ ಅ.ಪ.

ಅತಿಶಯದ ತಪದಿಂದ ಪತಿತ ಪಾವನನಂಘ್ರಿ
ಮತಿವಂತರಾಗಿ ಭಜಿಸಿ
ಪೃಥುವಿಯೊಳಗವತರಿಸಿ ಯತನವಿಲ್ಲದೆ ಕರ್ಮ
ಪಥವನ್ನೆ ಕೊನೆಗಾಣಿಸಿ
ಪತಿತರಿಗೆ ಅಂಕಿತವ ಹಿತದಿಂದ ಬೋಧಿಸಿ
ಅತಿ ಅದ್ಭುತವ ತೋರಿಸಿ
ಸುತರಂತೆ ಶಿಷ್ಯರನು ಹಿತದಿಂದನುಗ್ರಹಿಸಿ
ಗತಿಯ ಮಾರ್ಗವ ತೋರ್ವರು । ಇವರು ೧

ದೇವತೆಗಳೊಡೆಯರು ಪಾವಮಾನಿಗೆ ಪ್ರಿಯರು
ಭೂವಲಯದೊಳು ಮೆರೆವರು
ಆವಕಾಲದಲಿ ಸುಖಾನಂದಭೋಗಿಗಳು
ಪಾವನ ಸುಚರಿತ್ರರು
ದೇವ ನರಹರಿ ಕರುಣ ಪೂರ್ಣವಾಗಿ ಪಡೆದು
ಭಾವಶುದ್ಧಿಯಲಿಪ್ಪರು
ಈ ವಿಧದ ಇವರ ಚರ್ಯೆಯನರಿಯುವರನರಿಯೆ
ಕಾವ ಭಕ್ತರ ಕರುಣಿಯ । ದೊರೆಯ ೨

'ತ' ಎನಲು ತಪಸಿಯಹ 'ದೇ' ಎನಲು ದೇಹ ಶುದ್ಧಿ
'ಮು' ಎನಲು ಮುಕ್ತನಾಗ್ವ
'ದು' ಎನ್ನಲು ದುರ್ಜನರು ದೂರವಾಗಿರುತಿಹರು
'ಮೋ' ಎನಲು ಮೋಕ್ಷದಾರಿ

'ಹ' ಎನಲು ಹರಿಬಂದು 'ನ' ಎನಲು ನರ್ತಿಸುವ
'ದಾ' ಎನಲು ದಾರಿದ್ರನಾಶ
'ಸ' ಎನಲು ಸತ್ವಗುಣಿ 'ರಾಯ' ಎನೆ ಪದವಾಳ್ವ
'ರು' ಎನಲು ಋಜುಮಾರ್ಗಿಯು । ಸುಖಿಯು ೩

ಈ ರೀತಿಯಿಂ ತಂದೆ ಮುದ್ದುಮೋಹನದಾಸ ರಾ –
ಯರೆಂತೆಂದು ಜಪಿಸೆ
ಪಾರುಗಾಣಿಸಿ ಭವದ ಬಂಧನವ ಬಿಡಿಸುವರು
ದೇವಾಂಶ ಸಂಭೂತರು
ಕಾರುಣ್ಯ ನಿಧಿಗಳು ತೋರುವರು ಹರಿಮಾರ್ಗ
ಸಾರಿ ಭಜಿಪರಿಗೆ ಸತತ
ನಾರಸಿಂಹನ ಚರಣ ಸೇರಿಸಿ ಹೃದಯದಲಿ
ಸೂರೆಗೊಂಡಿಹರು ಮುಕ್ತಿ । ಸುಕೀರ್ತಿ ೪

ಅಪಾರ ಅದ್ಭುತದ ಕರ್ಮಗಳ ನಡೆಸಿಹರು
ಪಾಪಿ ಜನಗಳ ಪೊರೆವರು
ರೂಪ ರೂಪಾಂತರದಿ ತೋರ್ಪರು ಸುಜನರಿಗೆ
ಶ್ರೀಪತಿಯ ವರ ಭಕ್ತರು
ಕೋಪತಾಪಗಳಿಂದ ನಿರ್ಲೇಪರಾಗಿಹರು
ತಾಪತ್ರಯಗಳ ಕಡಿವರು
ಗೋಪಾಲಕೃಷ್ಣವಿಠ್ಠಲನ ಪದಧ್ಯಾನವನು
ಗೋಪ್ಯದಿಂದಲಿ ಇತ್ತರು । ಇವರು ೫

## ೧೭೮ (ಅ)

ತಂದೆ ಮುದ್ದುಮೋಹನ ದಾಸರೆನಿಸಿದ
ತಂದೆ ಶ್ರೀ ಗುರುವರ್ಯರೆ ಪ.

ತಂದಿರಿ ಜ್ಞಾನಾಂಬುಧಿ ಮಧ್ಯದೊಳಗೀಗ
ತಂದಿಹ ಎನ್ನ ದುಷ್ಕರ್ಮವ ತರಿಯುತ ಅ.ಪ.

ಬಂದೆನು ಭವದೊಳು ನಿಂದೆನು ತಾಪದಿ
ಮಂದಮತಿಯಿಂದ ಜಗದೊಳಗೆ
ಕುಂದುಗಳೆಣಿಸದೆ ಬಂದು ದರ್ಶನವಿತ್ತು
ಕಂದನಂದದಿ ದಯದಿಂದ ಪಾಲಿಸಿದಿರಿ ೧

ಯೋಗಿಗಳೆನಿಸಿದ ಭೋಗಿವರರೆ ಶಿರ
ಬಾಗಿ ನಮಿಸುವೆ ಈಗ ನಾನು
ನಾಗಶಯನನ ತೋರಿ ಬೇಗ ಪಾಲಿಸಿರಿ
ಪೋಗುತಿದೆ ದಿನ ಜಾಗು ಮಾಡದೆ ಮುನ್ನ ೨

ನರಸಿಂಹನನು ಹೃತ್ಸರಸಿಜದಲಿ ಕಾಂಬ
ಗುರುವರ ನಿಮ್ಮಂಘ್ರಿಗೆರಗುವೆನು
ಪರಿಪರಿ ತಾಪವ ಹರಿಸಿ ಎನ್ನ ಮನ
ಹರಿಗುರು ಚರಣದೊಳಿರುವಂತೆ ಕೃಪೆಗೈದೆ ೩

ಪರಮ ಗುರುಗಳಿಗೆ ಪ್ರಿಯರಾಗಿ ಇಳೆಯೊಳು
ಚರಿಸಿ ಸುಜನರ ಪಾವನಗೈದು
ಪರಮ ಗುಪ್ತದಿಂದ ಹರಿಯ ಧ್ಯಾನಿಸುತ್ತ
ಧರೆಯೊಳಗಿರುವ ಪಾಮರರ ಮೋಹಿಸುವಂಥ ೪

ಕಷ್ಟವ ಬಿಡಿಸಿರಿ ತುಷ್ಟರಾಗಿ ನೀವೆ
ಇಷ್ಟು ಪರಿಯಿಂದ ಬೇಡಿಕೊಂಬೆ
ಇಷ್ಟದೈವರು ನೀವೆ ಶ್ರೇಷ್ಠ ಶ್ರೀ ಗೋಪಾಲ
ಕೃಷ್ಣವಿಠ್ಠಲನ ಉತ್ಕೃಷ್ಟದಿ ತೋರಿರಿ ೫

## ೧೭೯

ತೆರಳಿ ಪೋದರು ದಿವ್ಯ ನರಹರಿಯ ಪುರಕೆ ಶ್ರೀ
ವರತಂದೆ ಮುದ್ದುಮೋಹನರೂ ಪ.

ಕರಿಗಿರಿ ಕ್ಷೇತ್ರದಲಿ ತೊರದು ಭೌತಿಕ ದೇಹ
ಪರಮ ಉಲ್ಲಾಸದಿಂದಾ ನಂದಾ ಅ.

ಪರಿಪರೀ ಪೂಜಿಸಿದ ಪರಮ ಭಕ್ತರಿಗೆ ತಾವ್
ತೆರಳುವ್ರೋಪರಿ ತಿಳಿಸದೇ
ಪರಮ ಕರುಣಾಳು ಹೆಂಗರುಳಿನಾ ಖಣಿ ಎಂಬ
ತೆರವೆಲ್ಲರಿಗೆ ಮರೆಸದೇ
ಪರಮಸುಜ್ಞಾನಿಯಾದಂಥ ಶಿಷ್ಯರಾ
ಕರೆಸಿ ಅಗಲಿಸಿಕೊಳ್ಳದೇ
ಪರಮ ಸಾಧ್ವೀಪತ್ನಿ ವರ ಪುತ್ರರಿರುತಿರಲು
ಕಿರಿಶಿಷ್ಯನೊಬ್ಬನೆದುರೊಳ್ । ಜವದೊಳ್ ೧

ಎಂಭತ್ತು ಮೇಲೆರಡು ವತ್ಸರವು ಧರಣಿಯೊಳು
ಸಂಭ್ರಮದಿ ಧೃಡ ಕಾಯದೀ
ತುಂಬಿ ತತ್ವಾಮೃತವು ಸುಜನರಾ ಹೃದಯದಲಿ
ಕುಂಭಿಣಿಯೋಳ್ ದಾಸತ್ವದೀ
ನಂಬಿಕೆಗಳಿತ್ತು ಸುಜ್ಞಾನಿಗಳಿಗಂಕಿತವು
ಅಂಬುಜಾಕ್ಷನ ನಾಮದೀ
ಒಂಭತ್ತು ವರ್ಷದಿಂ ಬೆಂಬಿಡದೆ ಕಾಯ್ದೆನ್ನ
ಕುಂಭಿನಿಯ ತೊರೆದು ಈಗಾ । ಬೇಗಾ ೨

ಶಾಲಿಶಕ ಸಾಹಸ್ರ ಅಷ್ಟ ಶತ ಅರವತ್ತು
ಮೇಲೆರಡು ವಿಕ್ರಮದಲೀ
ಕಾಲ ಮಧ್ಯಾಹ್ನ ಚೈತ್ರದ ಶುದ್ಧ ಶ್ರೀ ರಾಮ
ನವಮಿ ಭೌಮವಾಸರದಲಿ

ಆಲಿಸುತ ದಿವ್ಯ ಮಂತ್ರ ಶ್ರವಣ ಕೀರ್ತನವ
ಮೌನ ಮುಂದ್ರಾಂಕಿತದಲೀ
ಶೀಲ ಶ್ರೀ ಗೋಪಾಲಕೃಷ್ಣವಿಠಲನ ಮರಕೆ
ಆಯಾಸಗೊಳದೆ ಮುದದೀ ತ್ವರದೀ ೩

## ೧೮೦

ತೊರೆದು ಜೀವಿಸಬಹುದೆ ಗುರು ನಿಮ್ಮ ಚರಣವ ಪ.

ಬರಿಯ ಮಾತಲ್ಲವಿದು ಜರಿದು ನುಡಿವೆ
ಕರಕರೆಗೊಳಿಸದೆ ಕಾಯಬೇಕಿನ್ನು ಗುರು ಅ.ಪ.

ಅತಿಶಯ ಮಹಿಮೆಯ ಹಿತದಿಂದ ತೋರಿದ
ಪಿತನಂತೆ ಪೊರೆಯುವಚ್ಯುತ ದೂರ ಪದವೀವ
ಮತಿವಂತರೆ ನಿಮ್ಮ ಕ್ಷಿತಿಯೊಳಗಲಲಾರೆ ೧

ನೀತಿಯ ಬೋಧಿಪ ಖ್ಯಾತಿ ಶ್ರೀ ಗುರುಗಳೆ
ದೂತರಾದವರನು ಈ ತೆರ ಮಾಳ್ಪರೆ
ಪಾತಕರಹಿತರೆ ಪ್ರೀತಿಯ ತೋರಿರಿ ೨

ಬಂದಿರಿ ಮಮತೆಲಿ ಕಂದರಂದದಿ ತಿಳಿದು
ಇಂದಿರೇಶನ ತತ್ವಾವೃಂದಗಳರುಹುತ
ಮಂದಿಗಳಿಗೆ ಆನಂದವನೆ ತೋರ್ದಿರಿ ೩

ಎಲ್ಲಿ ಭಕ್ತರು ಕರಿಯೆ ಅಲ್ಲಿಗೆ ಬರುವ ಗುರುವೆ
ಇಲ್ಲಿ ನಿಮ್ಮ ಹೊರತು ಇಲ್ಲವು ಇನ್ನೊಂದು
ಒಲ್ಲೆನು ಈ ಜಗದ ನಿಲ್ಲದ ವಸ್ತುಗಳು ೪

ಗೋಪಾಲಕೃಷ್ಣವಿಠ್ಠಲ ತಾ ಪರಿಪರಿ ಲೀಲ
ವ್ಯಾಪ್ತ ಶ್ರೀ ಗುರು ಸಹ ಶ್ರೀಪತಿ ಹೃದಯದಿ
ತೋರ್ಪಂತೆ ಕೃಪೆ ಮಾಡಿ ಕಾಪಾಡಬೇಕೊ ದೊರಿ ೫

## ೧೮೧

ತೊರೆದು ಪೋಗುವುದುಚಿತವೇ । ಶ್ರೀ ಗುರುವರ
ಹರಣ ನೀಗುವುದುಚಿತವೇ ಪ.

ಪರಿಪರಿಯಿಂದಲಿ ಚರಣ ಕಮಲ ನಂಬಿ
ಇರುವಂಥ ತರಳೆಯ ಜರಿದು ಮೋಸದಿ ಇಂತು ಅ.ಪ.

ಆರನಾ ಪೂಜಿಸಲಿ । ಪರಿಪರಿಯಿಂದ
ಆರನಾ ಸ್ತುತಿಗೈಯ್ಯಲಿ । ಪೇಳೆನ್ನ ಗುರುವೆ
ತೋರದು ಮನಸಿಗೆ ಬೇರೊಂದು ಮತಿ ಇನ್ನು
ಕಾರುಣ್ಯಮೂರ್ತಿ ಮತ್ತಾರ ಸೇವಿಸಲಿನ್ನು
ಧಾರುಣಿಯೊಳ್ ನಿಮ್ಮ ಹೊರತಿ
ನ್ನಾರು ಕಾಯುವರಿಲ್ಲವೆಂದು
ಸೇರಿದವಳನು ಬಿಟ್ಟು ಶ್ರೀ ಗುರು
ಮಾರನಯ್ಯನ ಪುರಕೆ ಪೋಪರೆ ೧

ತುಪ್ಪ ಸಕ್ಕರೆ ಸವಿದಾ । ಶುಭತನುವಿನ್ನು
ಒಪ್ಪವಾಯಿತೆ ಶಿಖಿಗೆ । ಕ್ಷಣ ಮಾತ್ರದಲ್ಲಿ
ಅಪ್ಪಾವು ಅತಿರಸ ಮೆಲ್ಲುವ ಇಚ್ಛೆಯು
ತೃಪ್ತಿಯಾಯಿತೆ ಪೇಳಿ ಅಪ್ಪಯ್ಯ ನಿಮಗಿನ್ನು
ಅಪ್ಪ ಅಮ್ಮ ಸರ್ವಬಳಗವು
ತಪ್ಪದಲೆ ನೀವೆಂದು ನಂಬಿದೆ
ಒಪ್ಪಿಕೊಂಡೊಂಬತ್ತು ವರುಷವು
ಇಪ್ಪ ರೀತಿಯ ಬಯಲು ಮಾಡಿ ೨

ಕಡುಕೃಪೆಯಿಂದಲಿ । ಪೇಳಿದ ಗೋಪ್ಯ
ಒಡಲೊಳು ನೆನೆಯುತಲಿ । ಕುಣಿದಾಡುತಿದೆ ಒಡಲೊಳು
ದೃಢಭಕ್ತಿಯೊಳ್ ನಂಬಿ ಬಿಡದೆ ನಿಮ್ಮಡಿಗಳು
ನಡುವೆ ಬಂದೆಡರುಗಳ್ ಕಡೆಹಾಯ್ದು ಮಿಡುಕದೆ

ಅಡಿಗಡಿಗೆ ಬೆಂಬಿಡದೆ ಚರಣವ
ಪಿಡಿದು ಕೇಳಲು ಅಭಯವಿತ್ತ
ನುಡಿಗಳೆಲ್ಲವು ಎತ್ತ ಪೋಯಿತೊ
ಕಡಲಶಯನನ ಮಾಯವಕಟಾ ೩

ಹಿಂದೊಬ್ಬರನು ಕಾಣೆನೊ । ನಿಮ್ಮಂದದಿ
ಮುಂದೊಬ್ಬರನು ಕಾಣೆನೊ । ಈ ಕರುಣದವರ
ಒಂದೊಂದು ಗುಣ ಗಣ ಬಂದು ಸ್ಮರಣೆ ಮನಕೆ
ಕಂದಿ ಕುಂದಿಸುತಿದೆ ನೊಂದು ಬೆಂದು ಪೋದೆ
ಚಂದವೇ ಇದು ಪೋಪ ತೆರವು
ತಂದೆ ಸೈರಿಸಲಾರೆ ಗುರುವರ
ತಂದೆ ಮುದ್ದುಮೋಹನರೆನಿಸಿದ
ಸುಂದರಾತ್ಮಕ ಸುಗುಣಪೂರ್ಣ ೪

ಎನ್ನಂತೆ ಬಳಲುವರು । ನಿಮ್ಮಯ ಶಿಷ್ಯ
ರುನ್ನಂತೆ ಇರುತಿಹರೊ । ಬಹು ಭಕ್ತಿ ಉಳ್ಳವರು
ಮನ್ನಿಸುತವರ ಸಂಪನ್ನ ಸಲಹಬೇಕು
ಬಿನ್ನಪವಿದು ಕೇಳು ಮನ್ನಿಸು ಕೃಪಾಳು
ಇನ್ನು ಸೈರಿಸೆ ಸೈರಿಸೆನು ನಿಮ್ಮ
ಘನ್ನ ಮೂರ್ತಿಯ ಮನದಿ ತೋರ್ಯೆ
ಇನ್ನು ಗೋಪಾಲಕೃಷ್ಣವಿಠ್ಠಲನು
ಬನ್ನ ಬಡಿಸದೆ ಬಿಡಿಸಲೀ ಭವ ೫

## ೧೮೨

ತೋರೆನಗೆ ಶ್ರೀ ಕೃಷ್ಣ ತೋಯಜಾಂಬಕ ನಿನ್ನ
ಶ್ರೀ ರಮೇಶನೆ ನಾನಾ ಗುಣನಾಮ ಮಾಲೆ ಪ.

ವಾರಿಜಾಂಬಕನೆ ಶ್ರೀ ಗುರುಗಳ ರಚಿಸುತಲಿ
ಹಾರಹಾಕಿಹರೊ ನಿನಗೆ ಹರಿಯೆ ಅ.ಪ.

ಮುದ್ದು ಮೋಹನದಾಸರಿಂದಲಿ ತಂದೆ ಮುದ್ದು
ಮೋಹನವಿಠ್ಠಲನೆಂಬಾ
ಮುದ್ದಾದ ಅಂಕಿತವ ಶ್ರದ್ಧೆಯಿಂದ ಪಡೆದು
ಒದ್ದು ತಾಪತ್ರಯವನು
ಮಧ್ವಮತಸಾರಗಳ ಸಂಗ್ರಹಿಸಿ ಸುಜನರಿಗೆ
ತಿದ್ದಿ ತಿಳಿಸುತಲಿ ಜ್ಞಾನ
ಬದ್ಧ ಜೀವರ ಕರ್ಮ ಕಳೆಯುತಲಿ ನಿನ್ನ ನಾಮ
ತಿದ್ದಿ ತಿಳಿಸಿದ ಗುರುಗಳು ಇವರು ೧

ಸರ್ವೋತ್ತಮನೆ ನಾಗಶಯನ ಗಂಗಾಜನಕೆ
ಇಂದಿರಾಪತಿ ರಂಗನಾಥ
ಶರ್ವಾದಿವಂದ್ಯ ಕೃಪಾಸಾಂದ್ರ ದಶರಥರಾಮ
ರಘುರಾಮ ಇಂದಿರೇಶ
ಸರ್ವಾಧಿಪತಿಯೆ ಶ್ರೀ ಗೋಪಾಲಕೃಷ್ಣನೇ
ದಯಾಪೂರ್ಣ ಸೀತಾಪತೇ
ಸರ್ವೇಶ ಗುಣಭರಿತ ದಯಾಸಾಂದ್ರ ರಮಾಕಾಂತ
ವೇದೇಶ ಯಾದವೇಂದ್ರ ಸ್ವಾಮಿ ೨

ಸದಾನಂದ ಗುಣಭರಿತ ದಯಾ ಪಯೋನಿಧಿಯೆ
ಇಂದಿರಾರಮಣ ಜಯ ಗೋಪಾಲನೆ
ಚಿದಾನಂದ ಜಯರಾಮ ಶ್ರೀಪತಿ ಮೋಹನ
ವರದೇಶ ಪ್ರಾಣನಾಥಾ
ಭೂದೇವಿಪತಿ ಪದ್ಮನಾಭ ಆನಂದಪೂರ್ಣ
ಶ್ರೀನಾಥ ಜಗದೀಶನೆ
ಸುಧಾಪ್ರಿಯ ಸಿರಿರಾಮ ರಂಗೇಶ ಜಗದ್ಭರಿತ
ವರದ ಮೋಹನದೇವಾ ೩

ವರಗುರು ಗೋಪಾಲ ಪತಿತ ಪಾವನ ಸ್ವಾಮಿ
ಶ್ರೀಕಾಂತ ಪುರುಷೋತ್ತಮ

ಸಿರಿರಾಮಕೃಷ್ಣ ಹೃಷಿಕೇಶ ನಿತ್ಯಾನಂದ
ಪರಮಾನಂದ ಶ್ರೀ ಸುರೇಂದ್ರ
ಸಿರಿಗೋವಿಂದ ಮಧ್ವಮುನಿವರದ ಜಯಾರಮಣ
ಕರುಣಾಕರ ವೆಂಕಟ
ಕರುಣಾಕರ ರಾಮ ಜಯಾಪತಿಯೆ ಲಕ್ಷ್ಮೀರಮಣ
ದಯಾಮಯನೆ ಭವತಾರಕ ಹರಿಯೆ ೪

ಜ್ಞಾನಾನಂದ ಶುಭಗುಣಭರಿತ ಮೋಹನನೆ
ವಸುದೇವ ಪಾರ್ಥಸಾರಥಿಯೆ
ಪ್ರಾಣಪ್ರಿಯ ಪರಿಪೂರ್ಣ ಮಧ್ವವಲ್ಲಭಮುಕ್ತಿ
ದಾಯಕ ಸತ್ಯೇಶನೆ
ಜ್ಞಾನಪೂರ್ಣ ಕಾಮಿತಾರ್ಥ ರಘುನಂದನ
ಪರಮಪಾವನ ರಮೇಶ ಕರುಣಾನಿಧೆ
ಸಿರಿನಿಧಿ ಸುಖಪೂರ್ಣ ಲೋಕೇಶ ಶ್ರೀ ಲೋಲ
ರಮಾಧವನೆ ಪುಂಡರೀಕಾಕ್ಷ ಸ್ವಾಮಿ ೫

ಕಲ್ಯಾಣಗುಣಪೂರ್ಣ ಚಂದ್ರಹಾಸವರದ ಮಾಯಾಪತಿ
ಉಪೇಂದ್ರ ಚಕ್ರಪಾಣಿ
ನೀಲಾಪತಿಯೆ ದಯಾಕರನೆ ಗರುಡಧ್ವಜ ಧೃವವರದ
ಮುಕ್ತೇಶ ಬದರಿನಾಥಾ
ಬಾಲಕೃಷ್ಣನಂದ ಸುಖತೀರ್ಥವರದನೆ ನಿರ್ಮಲಾತ್ಮಕ
ಜಯಪ್ರದ ನಿರ್ಜರೇಶ
ಪ್ರಹ್ಲಾದವರದ ಮಧುರಾನಿಲಯ ರಾಧಾಪ್ರಿಯ
ಜಾನಕೀಪತಿ ವಿಶ್ವನಾಥಾ ಸ್ವಾಮಿ ೬

ಮುಕ್ತಾಶ್ರಯನೆ ಚಿನ್ಮಯ ಉರಗಾದ್ರಿವಾಸನೆ
ಭುವನೇಶ ಗಜರಾಜವರದ
ಭಕ್ತಪ್ರಿಯ ದಾಶರಥಿಯೆ ಸೀತಾಕಾಂತ ಶ್ರೀಧರ
ಜನಾರ್ಧನ ಮಧ್ವನಾಥ

ರುಕ್ಮಿಣೀಶ ಪುಂಡರೀನಾಥ ಕಮಲಾಕ್ಷ ಹಯಗ್ರೀವ
ಆನಂದ ಅರವಿಂದಾಕ್ಷ
ಲಕ್ಷ್ಮೀಕಾಂತ ಅಮರೇಶ ರಮಾಕಾಂತ ಸುರವರೇಶ
ಪುಂಡರೀಕವರದ ಶ್ರೀ ಕೃಷ್ಣಸ್ವಾಮಿ ೭

ಮಧ್ವೇಶ ಮಾಧವ ಗಾನಲೋಲ ಗಂಗಾಪಿತ
ಕಮಲಾನಾಥ ಕಮಲನಾಭ
ಮಧ್ವರಮಣ ಮುರಳಿಲೋಲ ಶೇಷಾದ್ರೀಶ
ಸದಮಲಾನಂದ ವೈಕುಂಠವಾಸ
ಮಧುರಾನಾಥ ರಮಾವಲ್ಲಭ ಮಾಯಾವರ
ಪದ್ಮೇಶ ಗುರು ಮಧ್ವೇಶ
ಪದ್ಮಾವತಿಪ್ರಿಯ ಲಕುಮಿಶ ಸತ್ಯೇಶ ಸಿರಿನಾಥ
ಇಂದಿರಾಪತಿ ರಮೇಶ ಶ್ರೀಶ ೮

ಸರಸಿಜಾಕ್ಷನೆ ನಿಗಮ ಗೋಚರ ರಮಾನಂದ
ಸಿರಿರಮಣ ಕಮಲಾಕಾಂತನೆ
ವರನಾಮರತ್ನಗಳ ಹುಡುಕಿ ವಿಠಲನೆ ನಿನಗೆ
ಸರವ ಪೋಣಿಸಿ ಹಾಕುತ
ಸುರಸಿ ಆನಂದಬಾಷ್ಪವ ಸುಖಪಡುತಿಹರು
ಪರಮ ಪ್ರಿಯ ಶ್ರೀ ಗುರುಗಳು
ಗುರುರಮಣ ಗೋಪಾಲಕೃಷ್ಣವಿಠಲ ಇನ್ನು ಅರಿಯೆನೊ
ಉಳಿದ ನಾಮಾ ಪೊರೆಯೋ ೯

## ೧೮೩

## ಉಗಾಭೋಗ

ದಾಸ ಭಾಗ್ಯವೆ ಭಾಗ್ಯ ಹರಿಕೊಟ್ಟ ಸೌಭಾಗ್ಯ
ದಾಸ ಭಾಗ್ಯಕ್ಕೆ ಜಗದಿ ಸರಿಮಿಗಿಲಿಲ್ಲವೆಂದು
ದಾಸತ್ವವೇ ಮಧ್ವಮತ ಸಾರತತ್ವವೆಂದು

ವ್ಯಾಸರಾಯರು ಜಗದಿ ದಾಸರ ನಿಲ್ಲಿಸಿದರು
ದಾಸರಿಗಂಕಿತ ಇರಲೇಬೇಕೆನುತಲಿ
ದಾಸ ಪುರಂದರವಿಠ್ಠಲನಿಗೆನಿಸಿದರು
ಈ ಸುಮಾರ್ಗವ ತಂದೆ ಮುದ್ದುಮೋಹನ ಗುರು
ಮಾಸದಂತೀಗ ಮತ್ತೆ ಬಿತ್ತಿ ಬೆಳೆಸಿದರು
ದಾಸ ಜನಪ್ರಿಯ ಗೋಪಾಲಕೃಷ್ಣವಿಠ್ಠಲ
ತಾ ಸುಮ್ಮನೀವ ತನ್ನ ನಿಜದಾಸರಿಗೆ ಮುಕ್ತಿ

## ೧೮೪

ದಾಸರಾಗಿರಿ ದಾಸರಾಗಿರಿ ದಾಸರಾಗಿರಿ ಬೇಗನೆ ಪ.

ದಾಸರಾಯರ ಪದವ ನಂಬಿ
ವಾಸುದೇವಗೆ ಬೇಗನೆ ಅ.ಪ

ದುಷ್ಟಮನ ಕಲ್ಮಷವ ಕಳದು
ಶಿಷ್ಟಜನರೊಳು ಕೂಡುತಾ
ಸೃಷ್ಟಿಕರ್ತನ ಭಜನೆ ಮಾಡುತ
ಕಷ್ಟಗಳನೀಡಾಡಿರಿ ೧

ತಂದೆ ಮುದ್ದುಮೋಹನರೆಂ-
ತೆಂದು ಮೆರೆಯುವ ಗುರುಗಳ
ದ್ವಂದ್ವ ಪಾದವ ಭಜಿಸಿ ಈ ಭವ
ಬಂಧನವನೀಗಾಡುತ ೨

ಜನನ ಮರಣ ನೀಗುವುದಕೆ
ಕೊನೆಯ ಮಾರ್ಗವು ದಾಸತ್ವ
ಘನಮನದಿ ಸ್ವೀಕಾರ ಮಾಡಿ
ವನಜ ನಯನನ ಪಾಡಿರಿ ೩

ಅಂಕಿತವ ಸ್ವೀಕಾರ ಮಾಡಿರಿ
ಶಂಕಿಸದೆ ಶ್ರೀಗುರುಗಳಿಂ
ಶಂಖ ಚಕ್ರಾಂಕಿತನ ಗುಣಮನ
ಪಂಕಜದೊಳು ಸ್ಮರಿಸಿರಿ ೪

ಆದಿಯಿಂದಲಿ ಇಹುದು ಜೀವಗೆ
ಶ್ರೀಧರನ ದಾಸತ್ವವು
ಈ ಧರ್ಮ ತಿಳಿಯದಲೆ ಗರ್ವದಿ
ಹಾದಿ ತಪ್ಪಲಿ ಬೇಡಿರಿ ೫

ಜಗದೊಡೆಯ ಶ್ರೀ ಹರಿಯು ಸರ್ವದ
ನಿಗಮಗಳಿಗಾಧಾರನು
ಬಗೆಬಗೆಯ ಜೀವರೊಳಗಿರುತಲಿ
ಸುಗುಣವಂತರ ಪೊರೆವನು ೬

ಈ ಪರಿಯ ದಾಸತ್ವ ಹೊಂದಿ ನಿ
ರ್ಲೇಪರಾಗಿರಿ ಕರ್ಮದಿಂ
ಗೋಪಾಲಕೃಷ್ಣವಿಠ್ಠಲನು
ರೂಪ ತೋರ್ವನು ಹೃದಯದಿ ೭

## ೧೮೫

ದಾಸರಾಯ ಪುರಂದರದಾಸರಾಯ ಪ.

ದಾಸರಾಯರೆ ನಿಮ್ಮ ಸ್ಮರಣೆಯ
ಘಾಸಿಗೊಳಿಸದೆ ಇತ್ತು ಕರುಣಿಸಿ
ವಾಸುಕಿಶಯನನ ತೋರಿಸಿ
ವಾಸುದೇವನ ಕೃಪೆಗೈಸಿರಿ ಅ.ಪ.

ದಾಸಕೂಟಕೆ ಮೊದಲನೆ ಗುರು
ದೋಷವರ್ಜಿತ ಭಕ್ತರೆನಿಸಿ
ಆಶಪಾಶವೆ ತೊರೆದು ಹರಿಯ
ದಾಸತನವನು ತೋಷದಲಿ ಕೊಂಡು
ಕೇಶವನು ಸರ್ವೋತ್ತಮನು ಎನ್ನುತ
ಶ್ರೀಶನ ಗುಣಗಳನೆ ಪೊಗಳುತ
ಭೂಸುರರ ರಕ್ಷಿಸುತ ಭಕ್ತರ
ಕ್ಲೇಶಗಳೆದಂಥ ಗುರುವರ ೧

ವೀಣೆ ಕರದಲಿ ಗಾನಮಾಡುತ
ಜಾಣತನದಲಿ ಕೃಷ್ಣನೊಲಿಸುತ
ಆನಂದದಲಿ ನರ್ತಿಸುತ್ತ
ಧ್ಯಾನದಲಿ ಶ್ರೀ ಹರಿಯ ನೋಡುತ
ಆನನವ ತೂಗುತ್ತ ವೇದ ವಿ–
ಧಾನದಲಿ ಪದಗಳನೆ ರಚಿಸುತ
ಮೌನಿವ್ಯಾಸರ ಶಿಕ್ಷೆಯಿಂದಲಿ
ದಾನವಾಂತಕ ಹರಿಯನೊಲಿಸಿದ ೨

ಪಾಪಿಗಳ ಪಾವನಗೈಸುತ
ಶ್ರೀ ಪತಿಯ ಅಂಕಿತವ ನೀಡುತ
ಈ ಪರಿಯಲಿ ಮೆರೆದ ಮಹಿಮೆಯ
ನಾ ಪೇಳಲಳವಲ್ಲವಿನ್ನು
ನಾ ಪಿರಿಯರಿಂ ಕೇಳಿದುದರಿಂ
ದೀಪರಿ ನುಡಿದಿರುವೆನಲ್ಲದೆ
ಗೋಪಾಲಕೃಷ್ಣವಿಠ್ಠಲನ
ರೂಪ ನೋಡುತ ಸುಖಿಸುವಂಥ ೩

## ೧೮೬

ದಾಸರೆಂದು ಕರೆದ ಮಾತ್ರದಿ । ಈಗ ಎಮ್ಮ
ದೋಷರಾಶಿ ನಾಶವಾಯಿತು ಪ.

ಶ್ರೀಶ ತಾನು ಗುರುಗಳಿಂದ
ಈ ಶರೀರಕೀ ಜನ್ಮದಲಿ
ದಾಸತನದ ಪೆಸರನಿಟ್ಟು
ವಾಸುದೇವ ಕಾಯ್ದ ಎನ್ನ ಅ.ಪ.

ಏಸು ಜನ್ಮ ಯತ್ನ ಗೈಯ್ಯಲು । ಭೃತ್ಯಭಾವ
ಪಾಶ ದುರ್ಲಭವು ಸುಜನಕೆ
ಶ್ರೀಶನನುಗ್ರಹದ ಬಲದಿ
ಈಸು ನಾಮ ದೊರೆಯಬೇಕು
ಆಶಪಾಶ ತೊಲಗಿ ಭವ
ಕ್ಲೇಶ ಕೊನೆಗಾಣಿಸುವುದು ೧

ಪಂಡಿತನೆಂದೆನಿಸಿ ಮೆರೆಯಲು । ಜಗದೊಳಗೆ
ಕಂಡಮಾತ್ರ ಗರ್ವ ಕಾರಣ
ಮಂಡೆಬಾಗಿ ಹರಿಗೆ ನಿನ್ನ
ತೊಂಡನೆಂದು ನಮಿಸೆ ನಲಿದು
ಪುಂಡರಿಕಾಕ್ಷ ತಾನು
ತಂಡ ತಂಡ ಪಾಪ ಕಳೆವ ೨

ಹರಿಯದಾಸರೆಂದು ಎನಿಸಲು । ಧರೆಯೊಳಗೆ
ಸುರರು ಬಯಸಿ ಬರುತಲಿಪ್ಪರು
ಸರ್ವದೇವತೆಗಳು ಬಂದು
ಹರಿಯದಾಸರೆನಿಸಿ ಮೆರೆದು
ಪರಿಪರಿಯ ತತ್ವ ತಿಳುಹಿ
ಹರಿಯು ಪುರಕೆ ತೆರಳಲಿಲ್ಲೆ ೩

ದಾಸತನಕೆ ಅಧಿಕವಿಲ್ಲವು । ಸಾಧನವು
ದಾಸತನವು ಗರ್ವವಳಿವಳಿವುದು
ದಾಸ ದಾಸ ದಾಸ ನಿನಗೆ
ವಾಸುದೇವ ಸಲಹೊ ಎನಲು
ದೋಷನಾಶಗೈಸಿ ಹರಿಯು
ದಾಸ ಜನರ ಕಾಯ್ದ ದಯದಿ ೪

ಅಷ್ಟು ಭಾಗ್ಯಕಧಿಕ ಲಾಭವು । ದಾಸತನವು
ಶ್ರೇಷ್ಠ ಗುರುಗಳಿಂದ ದೊರಕಿತು
ಇಷ್ಟವೆನಗೆ ದಾಸಪೆಸರು
ಶಿಷ್ಟರೆಲ್ಲ ಕರೆಯಲೀಗ
ತುಷ್ಟಿಪಡುವೆ ಶ್ರೀ ಗೋಪಾಲ–
ಕೃಷ್ಣವಿಠಲ ಸಲಹೊ ಎಂದು ೫

## ೧೮೭

ಧನ್ಯ ಧನ್ಯ ಧನ್ಯ ಧನ್ಯ ಗುರುವರಾ
ಧನ್ಯ ತಂದೆ ಮುದ್ದುಮೋಹನ್ನ ಗುರುವರಾ ಪ.

ಮಾನ್ಯ ವಿಭುದ ಮಾನ್ಯ ಜಗದ್ಮಾನ್ಯ ಗುರುವರಾ ಅ.ಪ.

ಪುಟ್ಟಿದಂದಿನಿಂದಿನ್ವರೆಗೆ ತೊಟ್ಟು ದಾಸತ್ವ ದೀಕ್ಷೆ
ನಿಷ್ಠೆ ನೇಮ ಧರ್ಮ ಕರ್ಮ ಜಪತಪಂಗಳಾ
ಕಷ್ಟ ಕರ್ಮ ಮಾಡಿ ಮುಗಿಸಿ ಶ್ರೇಷ್ಠ ಜ್ಞಾನ ಕವಚ ತೊಟ್ಟು
ದಿಟ್ಟತನದಿ ಮೆರೆದ ಗುರುವು ಮುಟ್ಟಿದರೀಗ ಹರಿಯ ಪುರವ ೧

ಭಕ್ತಿ ಭೂಷಣ ತೊಟ್ಟು ವಿರಕ್ತಿ ಖಡ್ಗ ವರೆಯಲ್ಲಿಟ್ಟು
ಮುಕ್ತಿ ಮಾರ್ಗಕೆಲ್ಲ ದೀಕ್ಷೆ ಇತ್ತು ಸುಜನಕೆ
ವ್ಯಕ್ತಾವ್ಯಕ್ತ ಮಹಿಮೆಯಿಂದ ವ್ಯಕ್ತಿತ್ವವನು ತೋರಿಕೊಳದೆ
ಉಕ್ತಿಗೊಶರಮಾಡಿಕೊಂಡ ಶಕ್ತಿ ಪೇಳಲಳವೆ ಎನಗೆ ೨

ಕರ್ಮಮಾರ್ಗ ಕಡಿದು ತತ್ವ ಮರ್ಮ ಕರ್ಮ ಕುರುಹನರುಹಿ
ನಮ್ಮ ಮಧ್ವಮತಕೆ ದಿವ್ಯ ಸಮ್ಮತವಾಗಿ
ಪಮ್ಮನದ ಸುಜ್ಞಾನ ಬೆಳಕು ತಮ್ಮ ನಂಬಿದರಿಗೆ ತೋರಿ
ಬೊಮ್ಮನೈಯ್ಯನ ಪುರಕೆ ಸಾರ್ದ ನಮ್ಮ ಗುರುವರಾ ೩

ದಾಸಕೂಟ ಸಭಾಸ್ಥಳದಿ ದಾಸ ಪ್ರಾಣರಾಯನ ನಿಲಿಸಿ
ದಾಸಜನಕೆ ಮುಕ್ತಿ ಸ್ಥಾನ ಕರಿಗಿರಿ ಎನಿಸಿ
ವ್ಯಾಸತೀರ್ಥರಿಂದ ಬಂದ ದಾಸಕೂಟ ನಿಜವೆಂದೆನಿಸಿ
ದಾಸಜನರ ಮೆರಸಿ ನೃಹರಿ ದಾಸಕೂಟ ಸಭಾಸ್ಥಾಪಕ ೪

ವ್ಯಾಳಶಯನನಾದ ಗೋಪಾಲಕೃಷ್ಣವಿಠ್ಠಲನ್ನ
ಲೀಲೆಯಿಂದ ಯನ್ನ ಹೃದಯದಲ್ಲಿ ನಿಲ್ಲಿಸೀ
ಮೇಲೆ ಸುಜ್ಞಾನ ಬೋಧೆ ಕಾಲ ಕಾಲಕ್ಕೆ ಇತ್ತು
ಪಾಲಿಸಿದಾ ಪರಮ ಪ್ರಿಯ ಕೃಪಾಳೂ ಗುರುವರಾ ೫

## ೧೮೮

ಧನ್ಯರಾದರು ಗುರುಗಳನು ಪೂಜಿಸುತ
ಇನ್ನಿವರ ಪಾತಕವು ತೊಲಗಿತು ಜಗದಿ ಪ.

ತಂದೆ ಮುದ್ದುಮೋಹನದಾಸ ರಾಯರನು
ಚಂದದಿಂ ಸತಿಸಹಿತ ಕರೆತಂದು ಮನೆಗೆ
ಮಂದರೋದ್ಧರನ ಪದಸೇವೆ ಇದು ಎಂದರಿತು
ಮಂದಹಾಸದಲಿ ನಸುನಗುತ ಸದ್ಭಕ್ತರು ೧

ಮಂಗಳೋದಕದಿಂದ ಮಜ್ಜನವಗೈಸುತಲಿ
ಅಂಗಗಳನೊರೆಸುತಲಿ ನಾಮಗಳನ್ಹಚ್ಚಿ
ರಂಗನಾಥನಿಗರ್ಪಿಸುತ ಪುಷ್ಪಹಾರವನ್ಹಾಕಿ
ಶೃಂಗಾರವನೆಗೈದು ಶ್ರೀ ಗುರುಗಳನ್ನು ೨

ಪಚ್ಚೆಕರ್ಪೂರ ಕೇಸರಿಯಿಂದ ಕೂಡಿದ
ಅಚ್ಚ ಗಂಧವನ್ನಚ್ಚಿ ಅಕ್ಷತೆಯನಿಟ್ಟು
ಮಚ್ಛರೂಪಿಯ ನೆನೆದು ಪಾದಕಮಲವ ತೊಳೆದು
ನಿಚ್ಚಳದ ಭಕ್ತಿಯಲಿ ನಿಜ ಭಕ್ತರೆಲ್ಲ ೩

ಸತಿಸಹಿತ ಕುಳ್ಳಿರಿಸಿ ಗುರುಗಳನು ಪೀಠದಲ್ಲಿ
ಅತಿಶಯದಿ ಕುಡಿಬಾಳೆ ಎಲೆಗಳನೆ ಹಾಕಿ
ಮತಿಯಿಂದ ರಂಗೋಲೆಗಳನ್ಹಾಕಿ ಲವಣ ಸ–
ಹಿತದಿಂದ ಘೃತದ ಪರಿಯಂತ ಬಡಿಸುತಲಿ ೪

ಅನ್ನಾದಿ ಸಕಲ ಷಡ್ರಸಗಳನೆ ಬಡಿಸುತ್ತ
ಘನ್ನ ಮಹಿಮರಿಗೆ ಭಕ್ಷಾದಿಗಳ ಬಡಿಸಿ
ಸನ್ನುತಿಸುತಲಿ ತೀರ್ಥ ಆಪೋಷನವನ್ಹಾಕಿ
ಪನ್ನಗಶಯನನಿಗೆ ಅರ್ಪಿಸುತ ಮುದದಿ ೫

ಘೃತಶರ್ಕರಾದಿಗಳನಡಿಗಡಿಗೆ ಬಡಿಸುತಲಿ
ನುತಿಸಿ ಗಾನಗಳಿಂದ ಗುರುಮಹಿಮೆಯ
ಅತಿಶಯದಿ ದಧಿ ಕ್ಷೀರದನ್ನಗಳನುಣಿಸುತಲಿ
ಘೃತ ಕ್ಷೀರದಿಂದ ಕೈ ತೊಳೆದು ಸಂಭ್ರಮದಿ ೬

ಯಾಲಕ್ಕಿ ಕರ್ಪೂರ ಮಿಳಿತ ವೀಳೆಯವನಿತ್ತು
ವೇಳೆವೇಳೆಗೆ ತಪ್ಪು ಕ್ಷಮೆಯ ಬೇಡುತಲಿ
ವ್ಯಾಳಶಯನಗರ್ಪಿಸುತ ಉಡಿಗೆ ತೊಡಿಗೆಗಳನಿತ್ತು
ಮಾಲೆಹಾಕುತ ಆರತಿಯನೆತ್ತಿ ಮುದದಿ ೭

ಹರಿಪ್ರೀತನಾಗುವನು ಗುರು ಹೃದಯದಲಿ ನಿಂತು
ಪರಿಹಾರವಾಗುವುದು ಕರ್ಮ ತೊಡಕುಗಳು
ಸರಸಿಜಾಕ್ಷನು ತಾನು ಹರುಷಪಡುವನು ದಯದಿ
ಕರಕರೆಯ ಸಂಸಾರ ಕಡಿದು ಗತಿ ಈವ ೮

ಗುರುದ್ವಾರ ಒಲಿಯುವನು ಹರಿಯು ಮೋಕ್ಷಾರ್ಥಿಗಳ
ಅರಘಳಿಗೆಯಗಲದಲೆ ಕಾಯುವನು ಸತತ
ಗುರು ಅಂತರ್ಯಾಮಿ ಶ್ರೀ ಗೋಪಾಲಕೃಷ್ಣವಿಠ್ಠಲ
ತ್ವರಿತದಿಂ ಹೃದಯದಲಿ ತೋರ್ವನು ತನ್ನ ೬

## ೧೮೯

ನಗಬೇಡಿ ನಗಬೇಡಿ ನೀವ್
ನಗಬೇಡಿ ನಗಬೇಡಿ ಪ.

ನಿಗಮನುತನ ಭಜಿಸುವ ನಿಜದಾಸರ
ಬಗೆಯರಿಯದೆ ಬಿನ್ನಾಣದಿಂದ ನೀವ್ ಅ.ಪ.

ಹರಿಸರ್ವೋತ್ತಮ ಹೌದ್ಹೌದೆಂಬುವ
ಹರಿದಾಸರ ಲಕ್ಷಣಗಳ ತಿಳಿಯದೆ ೧

ಸ್ಥಿರವಲ್ಲದ ತನುಭ್ರಾಂತಿಯ ಪೊಂದುತ
ಗುರುಚರಣ ನಂಬಿದ ದಾಸರ ಕಂಡು ೨

ಲಜ್ಜೆಯ ತೊರೆಯುತ ಮೂರ್ಜಗದೊಡೆಯನ
ಘರ್ಜಿಸಿ ಪಾಡುವ ಸಜ್ಜನರನೆ ಕಂಡು ೩

ಲೋಕವಿಲಕ್ಷಣ ಚರ್ಯೆಯ ಧರಿಸುತ
ಶ್ರೀ ಕಾಂತನ ಧ್ಯಾನಿಪರಿವರನರಿಯದೆ ೪

ಗೋಪಾಲಕೃಷ್ಣವಿಠ್ಠಲನಂಘ್ರಿಗಳನು
ಭೋಪರಿ ನಂಬಿದ ನಿಜದಾಸರ ಕಂಡು ೫

## ೧೯೦

ಪರಮ ಕರುಣಾಳುಗಳು ಈ ಗುರುಗಳು ಶ್ರೀ
ವರತಂದೆ ಮುದ್ದುಮೋಹನವಿಠಲಾಖ್ಯರು ಪ.

ಶಾಂತರು ದಾಂತರು ಸಂತೋಷ ಸುಖಿಗಳು
ಅಂತರಂಗದಿ ಹರಿಯ ಧ್ಯಾನಿಸುವರು
ಕಂತುಜನಕನ ಧ್ಯಾನ ಸತ್ಪಾಂಥರಿಗೆ ಬೀರುತಲಿ
ಎಂತೆಂತೊ ಸುಜನರಿಂ ಸ್ತುತಿಸಿಕೊಳುತಿಹರು ೧

ನಿರಪೇಕ್ಷೆಯಿಂದಲಿ ಪರರಿಗುಪಕಾರವನು
ತೆರವಿಲ್ಲದೆಲೆ ಸತತ ಮಾಡುತಿಹರು
ಅರಿಯೆನಿವರಾ ಮಹಿಮೆ ಪರದೇಶಿ ನಾನಿನ್ನು
ಕರುಣೆಯಿಂದೆನಗೆ ಹರಿ ಅಂಕಿತವನಿತ್ತರು ೨

ಸುಪ್ರೀತರಾಗಿನ್ನು ಈ ಶರೀರದ ಒಳಗೆ
ಶ್ರೀಪತೀ ತೈಜಸನ ವ್ಯಾಪಾರದಿ
ಶ್ರೀ ಪರಮ ಗುರುಗಳೆಂದ್ಧರಿಯ ನಿರ್ಮಾಲ್ಯವನು
ಕೃಪಾತಿಶಯದಿ ಕೊಡಿಸಿ ಎನ್ನನುದ್ಧರಿಸಿದರು ೩

ಎಲ್ಲರೂ ದೇವಾಂಶರೆನ್ನುವುದು ಕೇಳುತಲಿ
ನಿಲ್ಲದೇ ಮನಸು ಬಹು ತಲ್ಲಣಿಸುತಿರಲು
ಪಲ್ಲವಿಸಿ ಎನ್ನ ಮನ ಮಂದಿರದಿ ಅನುಗಾಲ
ಪುಲ್ಲಾಕ್ಷನನು ತೋರಿ ಉಲ್ಲಾಸಕೊಡುತಿಹರು ೪

ಶ್ರೇಷ್ಠಗುರುಗಳು ಇವರು ಸೃಷ್ಟಿಯೊಳಗೆನಗಿನ್ನು
ಎಷ್ಟು ಯೋಚಿಸೆ ಮನವು ಮಹಿಮೆಯರಿಯೆ
ವೃಷ್ಣಿವಂಶಜ ರುಕ್ಮಿಣೀರಮಣ ಗೋಪಾಲ-
ಕೃಷ್ಣವಿಠಲನ ಬಹು ದಿಟ್ಟಾಗಿ ತೋರುವರು ೫

## ೧೯೧

ಪರಮ ಕಾರುಣ್ಯ ಗುರು ಕರುಣಿಸೆನಗ್ಹರಿ ಪದವ
ಶರಣೆಂದು ನಮಿಪೆ ನಿಮಗೆ ಪ.

ಹರಿಯ ದಾಸತ್ವದಲಿ ವರದೀಕ್ಷೆಯನೆ ಕೊಟ್ಟು
ಕರುಣಿಸಿ ಕೃಪೆಗೈದಿರಿ ಗುರುವೆ ಅ.ಪ.

ಅಂಕಿತವ ಮೊದಲಿತ್ತು ಹೃದಯಾಂಕದಲಿ ನಿಲಸಿ
ಮಂಕುಬುದ್ಧಿಯ ತೊಲಗಿಸಿ
ಶಂಖ ಚಕ್ರಾಂಕಿತನ ಪದಕಮಲವನು ಮನ
ಪಂಕಜದೊಳಗೆ ತೋರಿ
ಶಂಕರಾರ್ಚಿತನ ಕೃಪೆ ಎನ್ನೊಳಾಗಲಿ ಎಂದು
ಶಂಕಿಸದೆ ವರವಿತ್ತಿರಿ ಗುರುವೆ ೧

ಶ್ರೀನಿವಾಸನು ನಿಮ್ಮೊಳ್ ಸಾನುರಾಗದಿ ನೆಲಸಿ
ತಾನಿತ್ತ ದಾಸತ್ವವ
ಏನೆಂಬೆ ಈಗಭಿಮಾನವ ತೊರೆ ಎನುತ
ತಾ ನುಡಿಸುತಿಹನು ನಿಮ್ಮೊಳ್
ಮಾನಾಭಿಮಾನ ಹರಿ ಗುರುವಶವಾಗಿರಲು
ನಾನಳುಕಲಿದಕೇತಕೆ ಗುರುವೆ ೨

ಸ್ವಪ್ನದಲಿ ದಾಸತ್ವ ಸಿದ್ಧಿಸಲಿ ಎಂದೆನುವ
ಅಪ್ರತಿಮ ನುಡಿ ಕೇಳಿದೆ
ಕ್ಷಿಪ್ರದಿಂದಲಿ ಕರುಣಿಸಿದಿರೆನಗಾಗಿದನಿನ್ನು
ತಪ್ತವಾಯಿತು ಭವದ ದುರಿತ
ಆಪ್ತಗುರು ನಿಮ್ಮಂಥ ಮಹಿಮರನು ನಾ ಕಾಣೆ
ಗುಪ್ತದಲಿ ಜಗದಿ ಮೆರೆವ ಗುರುವೆ ೩

ಇತ್ತಿರೆನಗೊಂದೊಂದೆ ದಾಸತ್ವ ಸಾಮಗ್ರಿ
ಅತ್ಯಧಿಕ ಕರುಣೆಯಿಂದ
ನಿತ್ಯವಾಗಿರಲಿ ಹರಿದಾಸತ್ವ ಇಹ ಪರದಿ
ಸತ್ಯವಂತರ ಕೃಪೆಯಲಿ
ನಿತ್ಯದಲಿ ನೀತ ಗುರು ನಿಮ್ಮಿಂದ ನಿಜ ರೂಪ
ವ್ಯಕ್ತವಾಗಲಿ ಜ್ಞಾನದೀ ಗುರುವೆ ೪

ಸಿರಿ ತಂದೆ ಮುದ್ದುಮೋಹನದಾಸರಾಯ
ಗುರುವೆ ನಿಮ್ಮ ಕರುಣದಿ
ಹರಿದುಹೋಯಿತು ಎನ್ನ ಪರಿ ಪರಿ ಭವಪಾಶ
ದುರಿತಗಳು ದೂರಾದವು
ಪರಮ ಸಾತ್ವಿಕರೆ ಸಿರಿವರನ ಪದ ಭಜಿಪಂಥ
ವರದೇವತಾಂಶರೆನಿಪ ಗುರುವೆ ೫

ಮಂದರಿಗೆ ಬಹು ಮಲಿನರಂದದಲಿ ತೋರುತ
ಕಂದರ್ಪಪಿತನ ಸ್ಮರಿಪ
ಒಂದೊಂದು ವ್ಯಾಪಾರ ಅರಿಯಲಳವಲ್ಲಿನ್ನು
ಮಂದಮತಿಯಾದ ಎನಗೆ
ಬಂದು ಭೂಲೋಕದಲಿ ಸಜ್ಜನರನುದ್ಧರಿಪ
ತಂದೆ ನಿಮ್ಮರಿವರ್ಯಾರೊ ಗುರುವೆ ೬

ಅರಿಯೆ ಅನ್ಯರನಿನ್ನು ಶ್ರೀ ಗುರುವೆ ಕರುಣಿಸಿರಿ
ವರಜ್ಞಾನ ಸುಧೆಯನಿತ್ತು
ವರಶೇಷಶಯನನ ನಿರುತ ಸೇವಿಸುವಂಥ
ಪರಮಭಾಗ್ಯವ ಕರುಣಿಸಿ
ಸಿರಿವರ ಗೋಪಾಲಕೃಷ್ಣವಿಠ್ಠಲನ ರೂಪ
ತ್ವರಿತದಿಂ ತೋರಿ ಪೊರೆಯೊ ಗುರುವೆ ೭

## ೧೯೨

ಪರಮ ಗುರುವೆ ನಿನ್ನ ಪರಿಪರಿ ಮುನ್ನ
ಅರಿತಷ್ಟು ವರ್ಣಿಸುವೆ ಕೊಡು ದೃಢ ಜ್ಞಾನ ಪ.

ಪರಮ ವೈರಾಗ್ಯಶಾಲಿ ಪರಿಪರಿ ಲೀಲೆ
ತೋರಿದ್ಯೋ ಜಗದಲಿ ಕಾರುಣ್ಯಶಾಲಿ ೧

ಗುರುಗಳ ಕರುಣದಿ ಒಲಿದ್ಯೊ ಸ್ವಪ್ನದಿ
ಪರಮಾತ್ಮನಾ ಹಾದಿ ತೋರೆನಗೆ ಮೋದಿ ೨

ಕರ್ಮಜ ನೀನೆಂದು ನುಡಿವರೊ ಇಂದು
ಮರ್ಮ ಮನದಿ ನಿಂದು ತೋರೋ ದಯಾಸಿಂಧು ೩

ಅಗ್ರಜ ಬಳ್ಳಾಪುರದಿ ಉಗ್ರತಾಪದಿ
ವಿಗ್ರಹ ರಚಿಸಿದೆ ಶ್ರೀಘ್ರದೊಳ್ ದಯದಿ ೪

ಪ್ರೀತಿಯಿಂ ಯತಿಶೀಲಾ ನೀತಿಯ ಪಾಲನ
ನೀ ತೋರೋ ಗೋಪಾಲಕೃಷ್ಣವಿಠಲನ ೫

## ೧೯೩

ಪರಮ ಪಾವನಕಾಯ ಗುರುರಾಯ ಜೀಯ
ವರ ಭಾಗವತರ ಪ್ರಿಯ ಸುರರ ಸಹಾಯ ಪ.

ಶ್ರೀ ತಂದೆ ಮುದ್ದುಮೋಹನ ದಾಸರೆಂದೆನಿಸಿ
ವಾತ ಜನಕನ ಒಲಿಸಿ ವೈರಾಗ್ಯ ಧರಿಸಿ
ಖ್ಯಾತಿಯನು ಪಡೆದ ಅನಾಥ ರಕ್ಷಕ ಸ್ವಾಮಿ
ನೀತ ಗುರು ನಿಮ್ಮ ಪದಕೆ ನಾ ತುತಿಸಿ ನಮಿಪೆ ೧

ಘನ ಅಂಶದಲಿ ನೆಲಸಿ ಅನವರತ ಸಲಹುವೊ
ಮನವ ಮಾಡಿರಬಲೆ ಅಂಜಿ ಬೆದರೆ
ಘನ ಜ್ಯೋತಿ ಸ್ವೀಕರಿಸಿ ತನುವಿಗಭಯ ತೋರಿ
ಮನದಿ ಪದವನೆ ನಂಬೆ ರಕ್ಷಿಸಿದ ಗುರುವೆ ೨

ಅಪಮೃತ್ಯು ಬಂದು ಬಹು ಅಪರಿಮಿತ ಭಯಪಡಿಸಿ
ಸುಪಥ ಕಾಣದೆ ನಿಮ್ಮ ಪದವ ನಂಬಿರಲು
ಸ್ವಪ್ನದಲಿ ನಿಜರೂಪ ಗುಪ್ತದಿಂದಲಿ ತೋರಿ
ಆಪತ್ತು ಪರಿಹರಿಪೆನೆಂದಭಯವಿತ್ತ ೩

ಪರಿಪರಿ ಅಪಮೃತ್ಯು ಪರಿಹಾರವನೆಗೈದು
ಪರಮ ಹರುಷದಿ ಕಾಯ್ದು ಆಯುವನೆ ಇತ್ತು
ಕರಕರೆಯ ಬಿಡಿಸಿ ಕಾಯ್ದಂಥ ಘನ ಚರಿತೆಯನು
ಅರಿತು ವರ್ಣಿಸಲರಿಯೆ ಪರಮ ಪ್ರಿಯ ದೊರೆಯೆ ೪

ಈ ಪರಿಯ ಮಹಿಮರೆ ಆಪನ್ನ ರಕ್ಷಕರೆ
ಶ್ರೀ ಪತಿಯ ತೋರುವ ಘನಶಕ್ತರೆ
ಕಾಪಾಡುವ್ರೋ ಕರ್ತರೆಂದು ನಾ ನಂಬಿರುವೆ
ಗೋಪಾಲಕೃಷ್ಣವಿಠ್ಠಲನ ನಿಜ ಪ್ರಿಯರೆ ೫

## ೧೯೪

ಪರಮಪ್ರಿಯರೆಂದೆಂಬ ಕರುಣ ಜಲಧಿ । ನಿಮ್ಮ
ಮೊರೆಹೊಕ್ಕವರ ಕಾಯ್ದು ಪೊರೆಯುವಿರಿ ದಯದಿ ಪ.

ಅರಿಯರು ಜಗದೊಳಗೆ ನರರು ನಿಮ್ಮ ಮಹಿಮೆ
ಕರಕರೆಪಡುತಿಹರು ಭವದೊಳಗೆ
ಪರಮ ನಮ್ರತೆಯಿಂದ ಚರಣಕೆರಗಲು ಬಂದು
ಉರುತರದ ಕಾರುಣ್ಯದಿಂದ ಪೊರೆಯುವಿರಿ ೧

ಇಲ್ಲವೊ ಆಸೆ ಆಡಂಬರದ ದ್ರಾವ್ಯದಲಿ
ಎಲ್ಲೆಲ್ಲಿ ನೋಡಲು ತತ್ವಬೋಧೆ
ಉಲ್ಲಾಸದಿಂದ ಸಜ್ಜನರಿಗರುಹುತ ಮೋದ
ಎಲ್ಲೆ ಕಾಣಿಸದಂಥ ಆನಂದವೀವ ಗುರು ೧

ತಂದೆ ಮುದ್ದುಮೋಹನವಿಠ್ಠಲನೆಂದೆಂಬ ಬಹು
ಚಂದದ ಅಂಕಿತದಿ ಜಗದಿ ಉದಿಸಿ
ಮಂದರಿಗೆ ಸುಜ್ಞಾನ ತಂದು ರಕ್ಷಿಸುವಂಥ
ಒಂದೊಂದು ಮಹಿಮೆಗಳ ಪೇಳಲೆನ್ನೊಶವೆ ೨

ಅನಾದಿಯಿಂದಲಿ ಹೀನ ದೆಸೆಯೊಳಗಿದ್ದು
ನಾನಾ ಜನ್ಮದಿ ಬಂದು ಕರ್ಮದಲಿ ತೊಳಲಿ
ದೀನತ್ವವೈದುವ ಮಾನವನ ಕರುಣಿಸಿ
ಸಾನುರಾಗದಿ ಹರಿಯ ಪದಕೆ ಸೇರಿಸುವಂಥ ೩

ಸೃಷ್ಟಿ ಸ್ಥಿತಿ ಲಯಗಳಿಗೆ ಕರ್ತ ಹರಿ ಎಂತೆಂದು
ಶ್ರೇಷ್ಠ ಕನಿಷ್ಠದ ಅರ್ಥ ತತ್ವ ತಿಳಿಸಿ
ಕಷ್ಟ ಬಿಡಿಸುವ ಜಗತ್ಕರ್ತ ಒಬ್ಬನೆ ಹರಿಯು
ಶ್ರೇಷ್ಠ ಶ್ರೀ ಗೋಪಾಲಕೃಷ್ಣವಿಠ್ಠಲನೆನುವ ೪

## ೧೯೫

## ಉಗಾಭೋಗ

ಪರಿಪರಿ ದೇಹ ಧರಿಸಿ ನರ ಜನ್ಮದಲಿ ಬಂದು
ಕರಕರೆ ಪಡುತಲಿ ಇರುವ ಮಾನವರೊಳು
ಅರಿತು ಸಾತ್ವಿಕರನು ಕರದು ಬುದ್ಧಿಯ ಪೇಳೆ
ಹರಿಯ ಪಾದವ ತೋರ್ವ ಗುರುವು ಒಬ್ಬರು ಬೇಕು
ಪರಮಪ್ರಿಯರು ಇವರು ಅರಿವರು ಸಾತ್ವಿಕರ
ಕರದು ಉಪದೇಶವಿತ್ತು ಉದ್ಧಾರ ಮಾಡುವರು

ಚರಿತೆಯ ವರ್ಣಿಸಲು ನರರಿಗೆ ಸಾಧ್ಯವಲ್ಲ
ನರಹರಿಯೆ ಬಲ್ಲ ಉರಗಾಖ್ಯರ ಮಹಿಮೆ
ವರಭಕ್ತರಾಗಿ ಹರಿಗೆ ಶರಣು ಹೊಕ್ಕವರನು
ಕರುಣೆಯಿಂ ಸ್ವರೂಪವರಿತು ಉದ್ಧರಿಪರು
ಪರತರ ಗೋಪಾಲಕೃಷ್ಣವಿಠ್ಠಲನ
ಚರಣವ ತೋರುವರು
ವರ ತಂದೆ ಮುದ್ದುಮೋಹನರು

## ೧೯೬

ಬಡಿ ಜಾಗಟೆ ಹೊಡಿ ನಗಾರಿ ಪಿಡಿ ತುತ್ತೂರಿಯನು
ನಡಿ ಮುಂದೆ ಅಡಿ ಇಡು ಹೆದರದೆ ನುಡಿ ಹರಿಯನಾಮ ಪ.

ಬಿಗಿ ನಡುವನು ಮುಗಿ ಕೈಯ್ಯನು ಒಗಿ ದುರಭಿಮಾನ
ಚಿಗಿ ಭಕ್ತಿರಸ ಮುಖದಲಿ ನಗಿ ತೋರು ನಯದಿ ೧

ಸರಿ ಇಲ್ಲವೀ ಪರಿ ದಾಸ ಕೂಟ ಪರಿ ಎನ್ನುವ ಜನರ
ಕರಿ ಕುಣಿಸು ಕಾಲ್ಕಿರಿ ಗೆಜ್ಜೆ ಭರ ಧರಿಯಲ್ಲಿ ಮೆಟ್ಟೆ ೨

ಗಟ್ಟಿ ಮಾಡಿ ಮನ ತಟ್ಟಿ ಚಪ್ಪಾಳೆ ಮೆಟ್ಟಿ ಖಳರ ಎದೆಯ
ಶ್ರೇಷ್ಠ ಮಧ್ವಮತ ಗುಟ್ಟು ದಾಸತ್ವವು ದುಷ್ಟರರಿಯರೆಂದು ೩

ಶುದ್ಧ ಗುರುವು ತಂದೆ ಮುದ್ದುಮೋಹನರು ಉದ್ಧಾರವನೆ ಮಾಡಿ
ವಿದ್ಯಾನಾಮ ಅನಿರುದ್ಧಾನಂಕಿತಗಳ ಬದ್ಧಾಗೀವರೆಂದು ೪

ಶ್ರೇಷ್ಠ ಗೋಪಾಲಕೃಷ್ಣವಿಠ್ಠಲನ ಮುಟ್ಟಿ ಮನದಿ ಭಜಿಸೆ
ಕೆಟ್ಟ ಕರ್ಮಗಳ ಕಟ್ಟು ಹರಿದು ಮುಕ್ತಿ ಕೊಟ್ಟು ಪೊರೆವನೆಂದು ೫

## ೧೯೭

ಬಂದನಿಂದು ರಾಘವೇಂದ್ರನು ಆನಂದದಿಂದಲಿ
ಬಂದನಿಂದು ರಾಘವೇಂದ್ರನು ಪ.

ಕಂದರಾದ ಭಕ್ತ ಜನರ
ಚಂದದಿಂದ ಪೊರೆವೆನೆಂದು ಅ.ಪ.

ಪರಿಪರಿಯ ವೈಭವವನು ಪಡಲಿಬೇಕೆಂದು
ಕರದು ತರಲು ಕರಕರಿಯ
ಕರದು ಮನವ ನೋಡಬೇಕೆಂದು ೧

ಕರುಣಾನಿಧಿ ಎಂದೆನಿಸಿ ನಿನಗೆ ಥರವೆ ಇದು ಎಂದು
ಪರಿಪರಿಯಲಿ ಸ್ತುತಿಸುತಿರಲು
ಸ್ಥಿರವಾರದಿ ಹರುಷ ತೋರಲು ೨

ಬಂದ ಬುಧರಿಂದ ಪೂಜೆನಂದಗೈಸ ಬೇ
ಕೆಂದು ತುಂಗಜಲವ ತರುತಿರೆ
ಬಂದ ಮಾಯದಿಂದ ಹರಿಯು ೩

ದ್ವಿಜರ ಹಸ್ತಜಲವ ಶ್ರೀನಿವಾಸ ಬೇಡಲು
ದ್ವಿಜರು ಕೊಡಲು ಗುರುಗಳನ್ನು
ಪೂಜೆಗೈದೆನೆಂದು ನುಡಿದ ೪

ಈ ತೆರದ ಕೌತುಕವ ಶ್ರೀನಾಥ ತೋರುತ
ಆ ತಕ್ಷಣದಿ ಮಾಯವಾಗೆ
ರೀತಿಯಿಂದ ಪೂಜೆಗೈಯ್ಯಲು ೫

ಮಂತ್ರಾಲಯದ ಮಂದಿರನಿಗೆ ಪಂಚಾ
ಮೃತದಿಂದ ಸಂತೋಷದಲಿ ಪೂಜೆ
ಗೈದು ಪಂಚಮೃಷ್ಟಾನ್ನ ಬಡಿಸೆ ೬

ಶ್ರೀನಿವಾಸ ಸಹಿತ ಶ್ರೀ ರಾಘವೇಂದ್ರರು
ಸಾನುರಾಗದಿ ಸೇವೆಕೊಂಡು
ನಾನಾ ವಿಧದ ಹರುಷಪಡಿಸೆ ೭

ಎನ್ನ ಮನಕೆ ಹರುಷಕೊಡಲು ನಿನ್ನ ಭಜಿಸುವೆ
ನಿನ್ನ ಮನಕೆ ಬಾರದಿರ್ದೊಡೆ
ಮುನ್ನೆ ಪೋಗಿ ಬಾರೆಂದೆನಲು ೮

ತುಂಗಮಹಿಮ ರಾಘವೇಂದ್ರರ ಮಂಗಳದ ಪುತ್ರ
ಕಂಗಳೀಗೆ ತೋರಿ ಅಂತ
ರಂಗದಲ್ಲಿ ಹರುಷವಿತ್ತು ೯

ಶ್ರೀ ಗುರುಗಳ ಕರುಣದಿಂದ ರಾಘವೇಂದ್ರನು
ಭಾಗವತರ ಪೊರೆವೆನೆಂದು
ಯೋಗಿ ಶೇಷಾಂಶ ಸಹಿತ ೧೦

ಇಂತು ರಾಘವೇಂದ್ರ ಗುರು ತಾ ಶಾಂತನಾಗುತ
ಶಾಂತ ಗೋಪಾಲಕೃಷ್ಣವಿಠ್ಠಲನ
ಅಂತರಂಗದಿ ತೋರ್ವನೆಂದು ೧೧

## ೧೯೮

ಬಿನ್ನೈಸಲೇನಿನ್ನು ಎನ್ನ ಗುರುವೇ ನಿ
ಮ್ಮ ನಿತ್ಯಾನಂದನಿರುವ ಬಗೆಯನ್ನ ಪ.

ತನ್ನ ಕಾರ್ಯಗಳನ್ನು ನಿಮ್ಮ ಮೇಲೊರಗಿಸಿ
ಬೆನ್ನಿನಂದದಿ ನಿಮ್ಮ ಕಾಡುತಿಹನು
ತನ್ನಿಂದಲಾಗದ ಕಾರ್ಯಗಳು ಇನ್ನುಂಟೆ
ತನ್ನನೆ ತಾನು ಮರೆತಂತೆ ಇರುತಿಹನು ೧

ತನ್ನ ಮಾರ್ಗಕೆ ಬರುವ ಜೀವರುಗಳೆಲ್ಲರನು
ನಿಮ್ಮ ವಶಕೊಪ್ಪಿಸಿ ಒರೆಯಾಗಿಹನು
ತಾನೊಬ್ಬ ನಿಮ್ಮಿಂದ ತೇರ್ಗಡೆಯಾದಮೇಲ್
ತನ್ನವರ ತಾನು ಸಲಹದಲೆ ಇರುತಿಹರೆ ೨

ಬನ್ನಬಡುತಲಿ ಇರುವ ಘನ್ನ ಜೀವರುಗಳನು
ಮನ್ನಿಸಿ ಕರೆದು ಅಂಕಿತವಿತ್ತಿರಿ
ಇನ್ನಾದರೂ ತಾನು ನಿಮ್ಮ ಕಾರ್ಯಕೆ ನಿಂತು
ನಿಮ್ಮ ಸೇವೆಯನು ಮಾಡದಲೆ ಇರುತಿಹನು ೩

ಒಂದೊಂದು ಸೇವೆಗೆ ಒಬ್ಬೊಬ್ಬರಿಹರೆಂದು
ಮುಂದೆ ತನಗಾವುದೂ ತಿಳಿಯದೆಂದು
ಇಂದು ಈ ಪರಿಯಿಂದ ಇರುತಿಹುದು ನ್ಯಾಯವೆ
ತಂದೆ ಮುದ್ದು ಮೋಹನಗುರುವೆ ನೀವ್ ಪೇಳಿ ೪

ಸಾಕು ನಿಮ್ಮಯ ಶ್ರಮವ ನೋಡಲಾರೆ ನಾನು
ಈ ಕಂದನಿಗೆ ಇನ್ನು ವರವ ಕೊಟ್ಟು
ಲೋಕಕಾರ್ಯವ ನಡೆಸಿ ನೋಡಿ ಸಂತಸಪಡಿರಿ
ಲೋಕೇಶ ಗೋಪಾಲಕೃಷ್ಣವಿಠ್ಠಲ ಪ್ರಿಯರೆ ೫

## ೧೯೯

ಬೇಗನೆ ಬಾರೊ ಶ್ರೀ ಹರಿಯನೆ ತೊರೋ
ಶ್ರೀ ಗುರುವೇ ದಯದಿ ಪ.

ಬೇಗನೆ ಬಾರೊ ಯೊಗಿಗಳೊಡೆಯ
ನಾಗಶಯನ ಪ್ರೀತ ತ್ವರಿತದಿ ಅ.ಪ.

ಭಕ್ತರೆಲ್ಲರು ನಿಮ್ಮ ದಾರಿಯನೆ ನೋಡುತಾ–
ಸಕ್ತಿಯಿಂದಿರುತಿಹರೊ

ಮುಕ್ತಿ ಮಾರ್ಗ ತೋರ್ವ ಮೋದ ಗುರುವೆ ನಿಮ್ಮ
ಶಕ್ತಿಗೆ ಎದುರ್ಯಾರೊ ಧರೆಯೊಳು ೧

ಕಾಣದೆ ಕಂಗಳು ಕಾತರಗೊಳ್ಳುತ
ತ್ರಾಣಗೆಡುತಲಿಹವೊ
ಪ್ರಾಣವ ರಕ್ಷಿಪ ಪ್ರಾಣಪತಿಯ ಪ್ರಿಯ
ಕಾಣೆ ನಾನನ್ಯರನಾ ಜಗದೊಳು ೨

ಪರಮಪ್ರಿಯರು ಎಂದು ಪರಮ ಬಿರುದು ಪೊಂದಿ
ಪರಮಾತ್ಮನನು ಕಂಡು
ಪರಮಾತ್ಮ ತತ್ವ ಪರಮಯೋಗ್ಯರಿಗರುಹಿ
ಪರಿಹರಿಸುವಿ ದುರಿತ ತ್ವರಿತದಿ ೩

ಕಮಲಾಕ್ಷನನು ಹೃತ್ಕಮಲದಲಿ ಕಾಂಬ
ಕಮಲಾಪ್ತ ಅತಿ ಪ್ರೀತ
ಕಮಲಸಂಭವಪಿತ ಕಮಲಾಕ್ಷ ಹರಿಯ ಹೃ
ತ್ಕಮಲದಲಿ ತೋರೋ ಗುರುವರ ೪

ಗೋಪಾಲಕೃಷ್ಣವಿಠ್ಠಲನ ಸೌಂದರ್ಯದ
ರೂಪವೆನಗೆ ತೋರೊ
ತಾಪವ ಹರಿಸುತ ಕಾಪಾಡಬೇಕೆಂದು
ನಾ ಪ್ರಾರ್ಥಿಸುವೆ ಗುರುವೆ ತ್ವರಿತದಿ ೫

## ೨೦೦

ಭಕ್ತರುದ್ಧಾರಕ ದಾಸರಾಯರಿವರ್ಯಾರೇ ಪೇಳಕ್ಕ ಪ.

ಮುಕ್ತಿಗೊಡೆಯನ ಮಾರ್ಗತೋರಿ ಭವ
ಮುಕ್ತಿಗೊಳಿಪ ಶ್ರೀ ಗುರುವೆಲೆ ತಂಗಿ ಅ.ಪ.

ಕಂದರಂದದಿ ಪೊಂದಿದವರ ಪೊರೆಯುವರ್ಯಾರೇ ಪೇಳಕ್ಕಯ್ಯ
ನಂದಕಂದನ ಅಂಕಿತ ಕೊಡುವವರ್ಯಾರೇ ಪೇಳಕ್ಕಯ್ಯ
ಸಿಂಧುಶಯನನ ತೋರುವೆನೆಂಬುವರ್ಯಾರೇ ಪೇಳಕ್ಕಯ್ಯ
ತಂದೆ ಮುದ್ದುಮೋಹನರೆನಿಸುತ ಬಂಧನ
ಬಿಡಿಸುವ ದಾಸೋತ್ತಮರೆಲೆ ತಂಗಿ ೧

ಭಾವಜನಯ್ಯನ ಭಾವಿಸಿ ಭಜಿಸುವರ್ಯಾರೇ ಪೇಳಕ್ಕಯ್ಯ
ಸಾವಕಾಶವಿಲ್ಲದೆ ತತ್ವವನೊರೆಯುವರ್ಯಾರೇ ಪೇಳಕ್ಕಯ್ಯ
ಪಾವನಮಾನಿಗತಿ ಪ್ರಿಯರೆಂದೆನಿಸುವರ್ಯಾರೇ ಪೇಳಕ್ಕಯ್ಯ
ಪಾವನಾತ್ಮರಾಗಿ ಜಗದಲಿ ಮೆರೆಯುವ ಪಾವಿನ
ನಾಮಾತ್ಮಕರಲೆ ತಂಗಿ ೨

ಮಂದಮತಿಗಳ ಬಂದು ಕಾಯ್ವರಿವರ್ಯಾರೇ ಪೇಳಕ್ಕಯ್ಯ
ಗಂಧಾಕ್ಷತೆ ಪದ್ಮಾಕ್ಷಿಯ ಧರಿಸಿಹರ್ಯಾರೇ ಪೇಳಕ್ಕಯ್ಯ
ಬಂದು ಸ್ವಪ್ನದಿ ಅಭಯ ಕೊಡುವರಿವರ್ಯಾರೇ ಪೇಳಕ್ಕಯ್ಯ
ಹಿಂದೆ ತ್ರೇತೆಯಲಿ ರಘುವರನಂಘ್ರಿಯ
ಪೊಂದಿ ಭಜಿಸಿದ ಮಹಿಮರೆ ತಂಗಿ ೩

ಕಷ್ಟವ ಬಿಡಿಸಿ ಉತ್ಕೃಷ್ಟವ ತೋರಿದರ್ಯಾರೇ ಪೇಳಕ್ಕಯ್ಯ
ಸೃಷ್ಟೀಶ ನಿತ್ಯಾನಂದನ ತೋರಿದರ್ಯಾರೇ ಪೇಳಕ್ಕಯ್ಯ
ತುಷ್ಟಿಬಡಿಸಿ ವಚನಾಮೃತ ಕರೆಯುವರ್ಯಾರೇ ಪೇಳಕ್ಕಯ್ಯ
ಶ್ರೇಷ್ಠ ದಾಸರೆಂದೆನಿಸಿ ಗೋಪಾಲಕೃಷ್ಣವಿಠಲಗತಿ ಪ್ರಿಯರೆ ತಂಗಿ ೪

## ೨೦೧

ಮಂಗಳಂ ಶ್ರೀ ಗುರುವರ್ಯರಿಗೆ । ಮಂಗಳಾಂಗರಿಗೆ
ಮಂಗಳಂ ಶ್ರೀ ಗುರುವರ್ಯರಿಗೆ ಪ.

ರಂಗನಾಥನ ಪದ ಸರೋಜಕೆ
ಭೃಂಗರೆನಿಸಿ ಮೆರೆಯುವರಿಗೆ ಅ.ಪ.

ತಂದೆ ಮುದ್ದುಮೋಹನರೆಂ
ತೆಂದು ಮೆರೆಯುತ
ಮಂದಮತಿಯ ಬಿಡಿಸಿ ಎನ್ನ
ತಂದೆಯಂತೆ ಪೊರೆಯುವರಿಗೆ ೧

ನಾಗಶಯನ ಹರಿಯ ಭಜಿಪ
ಭೋಗಿವರರಿಗೆ
ಭಾಗವತರ ಸಂಘದೊಳಗೆ
ಯೋಗಿಯಾಗಿ ಚರಿಸುವರಿಗೆ ೨

ಪರಮಪ್ರಿಯರಾಗಿ ಹರಿಗೆ
ಪರಮಪ್ರಿಯರೆಂದು
ಕರೆಸಿಕೊಳುತ ನರಹರಿಯ
ಚರಣ ಮನದಿ ಸ್ಮರಿಸುವರಿಗೆ ೩

ಕರ್ಮಗಳನೆ ಕಡಿದು ಜ್ಞಾನ
ಧರ್ಮಮಾರ್ಗದಿ
ಧರ್ಮತತ್ವ ಬೋಧಿಸಿ ಅ-
ಧರ್ಮಗಳನೆ ಬಿಡಿಸುವರಿಗೆ ೪

ಗೋಪಾಲಕೃಷ್ಣವಿಠ್ಠಲನ
ರೂಪ ತೋರುತ
ಪಾಪಗಳನೆ ತರಿದು ಭವ
ಕೂಪದಿಂದ ಪೊರೆಯುವರಿಗೆ ೫

## ೨೦೨

ಮಾಯವಾಯಿತು ರತುನ । ಮರೆ ಮೋಸಮಾಡಿ ಪ.

ಮಾಯವಾಯಿತು ಎನ್ನ ಮೋಹದ
ಮಮ ಗುರುವೆಂತೆಂಬ ರತುನ

ನೋಯಲೇಕಿದಕಿನ್ನು ನೃಹರಿ ಉ–
ಪಾಯದಿಂದಪಹರಿಸಿವ್ಯೆದನು ಅ.ಪ.

ಕರಗತವಾಗಿ ಇತ್ತು । ಪ್ರಕಾಶವು
ಧರಣಿಯಲ್ಲಿ ವ್ಯಾಪಿಸಿತ್ತು
ಪರಿಪರಿ ಸಜ್ಜನಕೆ ತತ್ವದ
ವರ ಸುಧೆಯನುಣಿಸುತ್ತಲಿತ್ತು
ಕರಕರದು ಅಂಕಿತವ ಕೊಡುತಲಿ
ಪರಮ ಸಾಧನಗೈಸುತಿತ್ತು ೧

ಸುಂದರವಾಗಿ ಇತ್ತು । ದುರ್ಜನರಿಗದ
ರಂದ ತೋರದಲೆ ಇತ್ತು
ಒಂದೊಂದೂ ಗುಣ ವರ್ಣಿಸಲು ಈ
ಮಂದ ಮತಿಗಳವಲ್ಲವಿನ್ನು
ತಂದೆ ಮುದ್ದುಮೋಹನಾರೆಂ–
ತೆಂದು ಜಗದಲಿ ಮೆರೆಯುತಿತ್ತು ೨

ಮಾಸಿ ಪೋದಂಥ ಹರಿ । ದಾಸಕೂಟ
ತಾ ಸ್ಥಾಪಿಸುತ ಈ ಪರಿ
ವಾಸುದೇವನ ಗುಣಮಣಿಗಳ
ರಾಶಿಭೂತದಿ ಅರುಹಿ ಶಿಷ್ಯರ
ಸಾಸಿರಾನೂರ್ಮೇಲೆ ಹೆಚ್ಚಿಸಿ
ತಾ ಸೂರೆಗೊಂಡಾನಂದವನು ೩

ಗತಶಾಲಿ ಸಾಹಸ್ರವು । ಮೇಲೆಂಟು ಶತವು
ಮತ್ತರವತ್ತೆರಸುವು
ವತ್ಸವಿಕ್ರಮ ಪ್ರಥಮ ಮಾಸವು
ಪ್ರಥಮ ಪಕ್ಷದ ರಾಮನವಮಿ
ಹಿತದಿ ಮಂಗಳವಾರ ಸೂರ್ಯನ
ಗತಿಯು ನೆತ್ತಿಯೊಳೋರೆ ೪

ಎಷ್ಟು ಪೊಗಳಲಳವು । ಆನಂದ ರತ್ನದ
ಗುಟ್ಟರಿಯದು ಜಗವು
ಶ್ರೇಷ್ಠ ಗೋಪಾಲಕೃಷ್ಣವಿಠಲನು
ಕೊಟ್ಟು ಕಳುಹಿಸಿ ಧರೆಯೊಳ್ಮೆರಸಿ
ಥಟ್ಟನೇ ತಾ ಕರೆಸಿಕೊಂಡು
ಶ್ರೇಷ್ಠ ಶಯ್ಯೆಯ ಮಾಡಿಕೊಂಡನು ೫

## ೨೦೩

ಮುದ್ದು ಮೋಹನದಾಸರೆ । ಎನ್ನನು ಬೇಗ
ಉದ್ಧರಿಸಿರಿ ಪ್ರೀತರೆ ಪ.

ಬಿದ್ದಿಹೆ ದುರ್ವಿಷಯಾಂಧ ಕೂಪದೊಳೀಗ
ಶುದ್ಧ ಜ್ಞಾನವನಿತ್ತು ಪದ್ಮನಾಭನ ತೋರಿ ಅ.ಪ.

ಪರಮಯತಿಚರ್ಯರೆ । ಈ ಜಗದೊಳು
ವರ ಭಕ್ತಿವೆಗ್ಗಳರೆ
ತರಳತನದಲಿ ಪಾದಚಾರಿಗಳಾಗಿ
ಧರೆಯ ಕ್ಷೇತ್ರವನೆಲ್ಲ ಚರಿಸಿರ್ಪ ವಶಗೈದು
ಹರಿಯ ಮೆಚ್ಚಿಸಿ ದಾಸಭಾವದಿ
ಪರಿಪರಿಯ ಅಂಕಿತದಿ ಶಿಷ್ಯರ
ಪರಮ ಸಂಭ್ರಮಗೊಳಿಸಿ ಮೆರೆಯುತ
ಸಿರಿವರನ ಪದಸಾರಿದಂಥ ೧

ಶೀಲವಂತರೆ ನಿಮ್ಮನು । ಕೊಂಡಾಡೆ ಈ
ಸ್ಥೂಲಮತಿಗೆ ಸಾಧ್ಯವೆ
ಕಾಲಕಾಲದಿ ಹರಿಲೀಲೆಯ ಪಾಡುತ
ನೀಲವರ್ಣನ ಹೃದಯಾಲಯದಿ ಕಂಡು
ಮೂಲರೂಪಿಯ ಪಾದಕಮಲದಿ
ಲೋಲುಪಡುತಲಿ ಓಲ್ಯಾಡಿದ ಬಹು

ಶೀಲಗುಣಗಣಪಾಲರೆ ಎನ್ನ
ಪಾಲಿಸಿರಿ ಸಿರಿಲೋಲನ ತೋರಿ ೨

ಸಂದೇಹವಿನ್ಯಾತಕೆ । ಮಂತ್ರದ ಮನೆ
ಮಂದಿರದೊಳಗಿರೆ
ಬಂದಿರಿ ದಾಸತ್ವದಿಂದ ಧರೆಯೊಳು
ನಂದಕಂದನ ಲೀಲೆ ಅಂದ ಪಾಡುತಲಿ
ಅಂದು ಗ್ರಂಥಗಳನೋದಿ ಪದವನು
ಒಂದು ರಚಿಸಿ ಸಾಲದೆ ಮು–
ಕುಂದನಾ ಗುಣವೃಂದ ಪೊಗಳಲು
ಚಂದದಿಂದ ವಸುಂಧರೆಯೊಳು ೩

ವರತತ್ವ ಅಂಶದಲಿ । ಶ್ರೀ ಗುರುವಿಗೆ
ತಾರಕರೆನಿಸಿದಿರಿ
ಸಾರಿರೆ ನಿಮ್ಮ ಪದ ಸ್ವಪ್ನದೊಳು ತೋರಿ
ತೀರುಥವನೆ ಕೊಟ್ಟು ಸುಮ್ಮನಿರಲು ಗುರು
ಸಾರಿ ಬಂದು ಬದಿಯಲಿ ನಿಂದು
ಭೂರಿ ಕರುಣವ ಮಾಡಬೇಕೆಂದು
ತೋರಿ ಪೇಳಲು ಹರಿ ನಿರ್ಮಾಲ್ಯ
ಅಪಾರ ಕರುಣದಿ ಕೊಟ್ಟು ಪೊರೆದಿರಿ ೪

ಸ್ತುತಿಸಲಳವೆ ನಿಮ್ಮನು । ಈ ಜಡಮತಿ
ಕೃತಕವಲ್ಲವು ಇದಿನ್ನು
ಅತಿಪ್ರೇಮ ಗುರುಗಳ ಹಿತದಿಂದ ನುಡಿದುದು
ಚ್ಯುತದೂರ ಗೋಪಾಲಕೃಷ್ಣವಿಠ್ಠಲನ
ಸತತ ಸ್ತುತಿಸುವ ಮತಿಯ ಪಾಲಿಸಿ
ಪಥವ ತೋರಿರಿ ಕರ್ಮಜರೆ ಬೇಗ
ಸತತ ಶ್ರೀ ಗುರು ವ್ರತವ ಪಾಲಿಪ
ಮತಿಯ ದೃಢದಲಿ ಹಿತದಿ ಕರುಣಿಸಿ ೫

## ೨೦೪

ಮೋದದಲಿರಬೇಕಮ್ಮ । ಸುಮ್ಮನೆ ನೀನು
ಮೋದದಲಿರಬೇಕಮ್ಮ ಪ.

ಮೋದ ಶ್ರೀ ಗುರುಗಳ ಚರಣ ಕಮಲವನ್ನು
ಮೋದದಿಂದಾಶ್ರಯಿಸಿ ಸುಖದಲಿರಲಿಬೇಕು
ಲೋಕದ ಜನಗಳ ನುಡಿಗಳ ಲೆಕ್ಕಿಸದೆ
ಲೋಕವಂದ್ಯನ ಚರಣ ಕಮಲವ ಸ್ಮರಿಸುತ ಅ.ಪ.

ಪರಮಾತ್ಮನ ಕೃಪೆಗೆ ಕಾರಣವಿದು
ಗುರುಕರುಣದ ಬಲವು
ಅರಿಯದ ಮನುಜರ ಬಿರುನುಡಿಗೆ ಮನ
ಕೊರಗಿಸದಂದದಿ ಹರುಷಪಡಲಿಬೇಕು ೧

ಎಚ್ಚತ್ತು ನಡಿಯಬೇಕು । ಶ್ರೀ ಗುರುಸೇವೆ
ಇಚ್ಛೆಯಿಂ ಮಾಡಬೇಕು
ತುಚ್ಛ ಮಾತುಗಳಿಗೆ ಮನಕೊಡದೆ ಹರಿ
ಮೆಚ್ಚುವಂದದಿ ಗುರು ಇಚ್ಛೆಯನರಿತು ನಡೆದು ೨

ವಂದನೆ ನಿಂದ್ಯಗಳ । ಮೋಕ್ಷಾರ್ಥಿಯು
ಒಂದಾಗಿ ಭಾವಿಸುತ
ಮಂದರೋದ್ಧರನ ಮಾಯಕೆ ಮನದಿ ಮೋದಿಸುತ
ಮಂದರಂದದಿ ಮನುಜರಿಗೆ ತೋರುತಲಿದ್ದು ೩

ಸಾಧನಲೋಕವಮ್ಮ । ಮಾನವ ಜನ್ಮ
ಸಾಧನ ಜನ್ಮವಮ್ಮ
ಸಾಧಾರಣವಲ್ಲ ಸಾಧು ಸಜ್ಜನಸಂಗ
ಸಾಧಿಸಿ ದುಷ್ಕರ್ಮ ಛೇದಿಸಬೇಕಮ್ಮ ೪

ಚಿಂತೆಯನಳಿಯಬೇಕು । ಶ್ರೀ ಗುರು ಕರುಣ
ಅಂತರ ತಿಳಿಯಬೇಕು
ಸಂತತ ಗೋಪಾಲಕೃಷ್ಣವಿಠ್ಠಲನ
ಅಂತರಂಗದಿ ಭಜಿಸಿ ಮುಕ್ತಿ ಸಾಧಿಸಬೇಕು ೫

## ೨೦೫

ವರ್ಣಿಸಲಳವೆ ಕರುಣಾಳು ಗುರುವರ ನಿಮ್ಮ
ವರ್ಣವರ್ಣದ ಚರಿತೆ ಗುಣಗಣಗಳ ಪ.

ವರ್ಣಪ್ರತಿಪಾದ್ಯ ದೇವತೆಗಳಿಗೆ ಅಳವಲ್ಲ
ಇನ್ನಿದನು ಪಾಮರರು ಅರಿಯುವರೆ ಜಗದಿ ಅ.ಪ.

ಪ್ರತಿಪ್ರತಿ ಕಲ್ಪದಲಿ ಅತಿಶಯದ ತಪಚರಿಸಿ
ಪತಿತಪಾವನ ಹರಿಯ ಮನ ಮೆಚ್ಚಿಸಿ
ಕ್ಷಿತಿಯೊಳಗೆ ಅವತರಿಸಿ ದೇವಾಂಶರೆಂದೆನಿಸಿ
ಪತಿತರನು ಪಾವನವಗೊಳಿಪ ಘನಮಹಿಮ ೧

ಭಕ್ತರು ಕರೆದಲ್ಲಿ ಆಸಕ್ತಿಯಿಂ ಬಂದು
ಯುಕ್ತಯುಕ್ತಗಳಿಂದ ತತ್ವಗಳನರುಹಿ
ಮುಕ್ತಿಗೊಡೆಯನ ಮಾರ್ಗ ಮುಕ್ತಾರ್ಥ ಜನಕರುಹಿ
ಮುಕ್ತಿಪಥ ಸವಿತೋರ್ವ ಶಕ್ತಿ ಮಹಿಮೆಗಳ ೨

ಪದ್ಮನಾಭನ ಪಾದ ಪದ್ಮಸುತ ತಂದೆ
ಮುದ್ದು ಮೋಹನದಾಸರಾಯರೆಂದೆನಿಸಿ
ಮಧ್ವಮತಸಾರಗಳ ಹೀರಿ ಮಕರಂದವನು
ಸಿದ್ಧಿಗೊಳಿಸಿ ಸುಜನಕೀವ ಶ್ರೀ ಗುರುವೆ ೩

ಕರಿಗಿರಿ ನರಹರಿಯ ಚರಣಕಮಲ ಧ್ಯಾನ
ಅರಘಳಿಗೆ ಬಿಡದೆ ಮನಮಂದಿರದಿ ಸ್ಮರಿಪ
ಕರುಣಜಲನಿಧಿಯೆ ನಿಮ್ಮ ಮೊರೆಹೊಕ್ಕವರ ಕಾಯ್ವ
ಪರಮಪ್ರಿಯರೆಂತೆಂಬ ಬಿರುದುಳ್ಳ ಗುರುವೇ ೪

ಕಮಲಾಂತ ಪ್ರೀತ ಶ್ರೀ ಕಮಲನಾಭನ ಪಾದ
ಕಮಲ ಮನದಲಿ ಸ್ಮರಿಪ ಕಮನೀಯ ಗಾತ್ರ
ಕಮಲಾಕ್ಷ ಗೋಪಾಲಕೃಷ್ಣವಿಠ್ಠಲನ ಪದ
ಕಮಲ ಮನದಲಿ ತೋರಿ ಕೃಪೆಯಗೈಯ್ಯುವುದು ೫

## ೨೦೬

## ಉಗಾಭೋಗ

ವಿಕ್ರಮ ಸಂವತ್ಸರದಲ್ಲಿ ನಿನ್ನ ನಿಜ ದಾಸಕೂಟ ಜನಕೆ ಪ–
ರಾಕ್ರಮ ಹೆಚ್ಚಲಿ ಅಚ್ಚುತಾನಂತ ಕೃಷ್ಣ
ಶಕ್ರಾನುಜನೆ ನಿನ್ನ ದೂತ ಹನುಮನ ಸೇವೆ
ವಕ್ರವಿಲ್ಲದೆ ನಡೆದು ನಿನ್ನ ಕೃಪೆಯಾಗಲಿ
ಅಕ್ರೂರವರದ ತಂದೆ ಮುದ್ದುಮೋಹನ್ನರ
ವಿಕ್ರಮೌದಾರ್ಯ ದಶ ದಿಕ್ಕುಗಳ ಬೆಳಗಲಿ
ಶಕ್ರಾನುಜನೆ ಉದರ ಬಗೆದು ತರಳನ ಕಾಯ್ದ
ವಕ್ರನಖನೆ ನಮ್ಮ ನೀತ ಶ್ರೀ ಗುರುಗಳಿಗೆ
ವಿಕ್ರಮ ಶಾಂತಿ ಆಯುರಾರೋಗ್ಯ ಭಾಗ್ಯವಿತ್ತು
ಚಕ್ರಧರನೆ ನಿನ್ನ ಸೇವೆ ಕೈಕೊಂಡೆಮ್ಮ ಭವ–
ಚಕ್ರ ತೊಡಕು ಬಿಡಿಸಿ ದಾಸ ಜನರ ಕಾಯೋ ಉ–
ರು ಕ್ರಮದೇವ ಜಗಚ್ಚಕ್ರವರ್ತಿಯೆ ನಮೋ
ಶಕ್ರಾದ್ಯಮರ ನುತ ಗೋಪಾಲಕೃಷ್ಣವಿಠಲಾ

## ೨೦೭

ವಿಜಯ ಗುರು ತವಪಾದರಜವ ಕರುಣಿಸಿ ಎನಗೆ
ಭುಜಗಶಯನನ ಧ್ಯಾನ ಭಜನೆ ನೀಡುವುದು ಪ.

ತವ ಶಿಷ್ಯವಂಶ ಸಂಜಾತಳೆನ್ನುತಲಿ ಬಹು
ತವಕದಲಿ ಕರುಣಾರ್ದ್ರ ದೃಷ್ಟಿಯಿಂದ
ತವ ಸೇವೆ ಎನಗಿತ್ತು ತವ ಕೀರ್ತನೆಯ ನುಡಿಸಿ
ತವ ಮೂರ್ತಿ ತೋರೆನ್ನ ಭವತಾಪ ಹರಿಸಯ್ಯ ೧

ನಿನ್ನ ಮಹಿಮೆಯ ಗುಟ್ಟು ವರ್ಣಿಪರು ಯಾರಿನ್ನು
ನಿನ್ನ ಚರ್ಯೆಯ ಚರಿತೆ ಬರೆದವರ‍್ಯಾರೊ
ನಿನ್ನ ನಿಜ ಸಂಕಲ್ಪ ಇನ್ನು ಅರಿಯುವರುಂಟೆ
ನಿನ್ನ ಸ್ಮರಿಸುವ ನರಗೆ ಬನ್ನ ಭವ ಉಂಟೆ ೨

ಆ ದೇವಮುನಿ ಆಜ್ಞೆ ಮೋದದಲಿ ಸ್ವೀಕರಿಸಿ
ಪಾದನ್ಯೂನತೆ ಕವನ ಪೂರ್ಣಗೊಳಿಸಿ
ವೇದಶಾಸ್ತ್ರಗಳರ್ಥ ಸುಲಭದಲಿ ತಿಳಿಸುತಲಿ
ಹಾದಿ ತೋರಿದೆ ಶಿಷ್ಯರಾದ ಸುಜನರಿಗೆ ೩

ಸತ್ಕರ್ಮ ಫಲಗಳನು ನಿತ್ಯದೊಳಗರ್ಪಿಸಲು
ಉತ್ತಮನು ಆರೆಂಬ ಚಿತ್ತದಳಲ
ಮುಕ್ತಿಯೋಗ್ಯರಿಗೆ ಬಹು ಯುಕ್ತಿಯಿಂದಲಿ ತೋರಿ
ಉತ್ತಮನು ಹರಿಯೆಂದು ಶಕ್ತಿಯಿಂ ಸ್ಥಾಪಿಸಿದ ೪

ವೈಕುಂಠಪುರದೊಳಗೆ ಶ್ರೀ ಕರನ ವಕ್ಷಕ್ಕೆ
ಸೋಕಿಸಿದೆ ಚರಣವನು ಜೋಕೆಯಿಂದ
ಈ ಕಾರ್ಯಕಾರಣವ ನಾ ಕೇಳಿ ನುಡಿವಂಥ
ವಾಕು ಲಾಲಿಸುತ ವಿವೇಕ ಮತಿ ಕರುಣಿಪುದು ೫

ಆ ಕಮಲನಾಭನಾ ಹೃದಯ ಕರುಣಾಮೃತವು
ಸೋಕಿ ತುಂಬಿಹುದು ತವ ಚರಣ ಕಮಲದಲಿ
ನಾ ಕೇಳ ಬಂದೆನಾ ಕರುಣಾಮೃತದ ಕಣವ
ಯಾಕೆ ಮರೆಮುಚ್ಚಿನ್ನು ನೀ ಕೊಡೈ ತವಕದಲಿ ೬

ತಾಡಿಸಲು ತವ ಪಾದ ರೂಢಿಗೊಡೆಯಗೆ ಲಕುಮಿ
ಓಡಿದಳು ಕರವೀರಪುರಕೆ ಸ್ವಾಮಿ
ಬೇಡಾಗೆ ವೈಕುಂಠ ನೋಡಿ ಆನಂದಾದ್ರಿ
ಮಾಡಿದನು ಮಂದಿರವ ಕೂಡಿ ಪದ್ಮಿನಿಯ ೭

ನೋಡಿ ವೈಕುಂಠದೊಳು ನಾಡಿಗೊಡೆಯನ ಚರ್ಯ
ರೂಢಿಯೊಳು ಜನಿಸಿ ಭೂಸುರವಂಶದಿ
ಕಾಡುವೊ ದುರಿತ ಈಡಾಡಿ ಹರಿದಾಸ್ಯವನು
ಬೇಡಿ ಬಯಸುತ ಪೊಂದಿ ನಾಡಿನೊಳು ಮೆರೆದೆ ೮

ಪ್ರತಿವರ್ಷ ಬಿಡದೆ ತಿರುಪತಿ ಯಾತ್ರೆ ಭಕ್ತಿಯಲಿ
ಪತಿತಪಾವನನ ಓಲೈಸಿ ಮೆರೆದೆ
ಕ್ಷಿತಿಯಕ್ಷೇತ್ರ ಅಪ್ರತಿಮಹಿಮ ಸಂಚರಿಸಿ
ಕ್ಷಿತಿಗೆ ತೋರಿದೆ ನಿನ್ನ ಮಹಿಮೆ ಜಾಲಗಳ ೯

ಅಂಕಿತವದಲ್ಲದೆ ದಾಸತ್ವ ಸಿದ್ಧಿಸದು
ಕಿಂಕರಗೆ ಅಂಕಿತವೆ ಕುರುಹು ಎಂದು
ಅಂಕಿತವ ಪಡೆದು ಚಕ್ರಾಂಕಿತನ ಗುಣ ಮಹಿಮೆ
ಶಂಕಿಸದೆ ಪೇಳ್ದೆ ತವ ಕಿಂಕರೋದ್ಧಾರಕನೆ ೧೦

ನಿನ್ನ ಮಹಿಮಾದಿಗಳ ವರ್ಣಿಸಲು ಎನ್ನಳವೆ
ಚನ್ನ ಗುರು ವಿಜಯವಿಠ್ಠಲನ ಪದಕಮಲ
ಚನ್ನಾಗಿ ಕಂಡು ಹೃನ್ಮಂದಿರದಿ ಸತತದಲಿ
ತನ್ಮಂತ್ರ ಕಿರಣವೆಮ್ಮಲ್ಲಿ ಬೀರಿದ ಕರುಣಿ ೧೧

ವಿಕ್ರಮ ಕಾರ್ತೀಕ ಶುದ್ಧ ದಶಮೀ ದಿವ್ಯ
ಶುಕ್ರ ನಾಮರು ವಾರ ಶುಭದಿನದಿ ಇಂದು
ಅಕ್ಕರದಿ ಕರಸಿಲ್ಲಿ ಉಕ್ಕಿಸಿದೆ ತವ ಸ್ತೋತ್ರ
ಮಕ್ಕಳಂದದಿ ಪೊರೆವ ಅಕ್ಕರೆಯು ಉಂಟೊ ೧೨

ಮಧ್ವರಾಯರ ಕುಲದಿ ಉದ್ಭವಿಸಿದಂಥ ಈ
ಶುದ್ಧ ವೈಷ್ಣವ ಕುಲದಿ ಜನಿಸಿ ಬಂದೆ
ಶುದ್ಧ ದಾಸತ್ವದ ಮುದ್ರಾಂಕಿತದ ರತ್ನ
ಮದ್ಗುರುಗಳಿಂ ಕೊಂಡು ತವ ಪಾದ ಕಂಡೆ ೧೩

ಪಾಪಿ ಜನರುದ್ಧರಿಪ ಪಾವನಗಾತ್ರನೆ
ಆ ಪಯೋಜಾಸನರ ತರತಮ್ಯವ
ಸ್ಥಾಪಿಸಿದ ಮಹಿಮನೆ ಸದ್ಗುಣಾಂಬುಧಿ ನಿಲಯ
ಗೋಪಾಲಕೃಷ್ಣವಿಠ್ಠಲನ ಪದಭೃಂಗ ೧೪

## ೨೦೮

ವಿಜಯಗುರು ನಿನ್ನಡಿಯ ಭಜಿಸುವೆನೋ ಸತತದಲಿ
ವಿಜಯ ಕೊಡು ದಾಸತ್ವದಿ ಪ.

ಭುಜಗಶಯನನ ಪಾದ ಭಜನೆಯ ಮಾಳ್ಪಂಥ ಮತಿ
ರುಜು ಮಾರ್ಗ ತೋರಿ ಸಲಹೋ ದಯದಿ ಅ.ಪ.

ಉದಿಸಿ ಭೂಸುರ ಕುಲದಿ ವಿಧಿ ವಶದಿ ಘನ ಕಷ್ಟ
ಒದಗುತಿರೆ ಚರಿಸಿ ಯಾತ್ರೆ
ಪದುಮನಾಭನ ದಯದಿ ಕಾಶಿಕ್ಷೇತ್ರದಲಿರುವ
ಅದೆ ಕಾಲದಲಿ ಸ್ವಪ್ನದಿ
ವಿಧಿಸುತಾಂಶರು ಪುರಂದರದಾಸರಿತ್ತಂಥ
ಅದುಭುತದ ಉಪದೇಶದಿ
ಉದಿತವಾಗಲು ಜ್ಞಾನ ಒದೆದು ದುಷ್ಕರ್ಮಗಳ
ಪದುಮೇಶ ದಾಸನಾದಿ ಮುದದಿ ೧

ಪರಮ ವೈರಾಗ್ಯದಲಿ ಚರಿಸಿ ತೀರ್ಥಕ್ಷೇತ್ರ
ತರುಣಿ ಶಿಷ್ಯರ ಸಹಿತದಿ
ಪರಿಪರಿಯ ಮಹಿಮೆಗಳವರ ಭಕ್ತಿಗೆ ತೋರಿ
ಕರುಣಾಳುವೆನಿಸಿ ಮೆರೆದಿ
ಪುರಂದರ ಗುರು ಆಜ್ಞೆ ತೆರದಂತೆ ಪದಲಕ್ಷ
ವಿರಚಿಸಿದೆ ಪದ ಸುಳಾದಿ
ನರವರರಿಗನ್ನದಾನಗಳನು ಮದುವೆ ಮುಂಜಿ
ತೆರವಿಲ್ಲದೆಲೆ ಚರಿಸಿದಿ ದಯದಿ ೨

ನಿನ್ನ ಕರುಣವು ದಾಸಕುಲದವರ ಮೇಲೆ ಬಹು
ಉನ್ನತವಾಗಿಹುದು
ಘನ್ನ ಗುರು ವಿಜಯವಿಠ್ಠಲದಾಸರೆಂತೆಂದು
ನಿನ್ನ ಸ್ಮರಿಸಲು ಕಾವುದು
ಎನ್ನ ಗುರು ತಂದೆ ಮುದ್ದುಮೋಹನರ ದಯದಿ
ನಿನ್ನ ಸ್ಮರಿಸಲು ಬಾಹುದು
ಘನ್ನ ಶ್ರೀ ಗೋಪಾಲಕೃಷ್ಣವಿಠ್ಠಲನ ದಯದಿ
ಉನ್ನತ ಜಯವೀವುದು ೩

## ೨೦೯

ವಿಜಯರಾಯರ ದಿನದಿ ವಿಜಯ ಪಯಣವ ಮಾಳ್ದೆ
ನಿಜದಾಸಕೂಟ ಪಥದಿ ಪ.

ವಿಜಯಸಖಪ್ರಿಯ ತಂದೆ ಮುದ್ದುಮೋಹನ ಗುರು
ವಿಜಯವಿತ್ತುದ್ಧರಿಸಲಿ ದಯದಿ ಅ.ಪ.

ಧರೆಯಲ್ಲಿ ಪುಟ್ಟಿ ಮುವ್ವತ್ತಾರು ವತ್ಸರವು
ಸರಿದುದೀ ಬಹುಧಾನ್ಯಕೆ
ವರಗುರು ಉಪದೇಶ ಅಂಕಿತವು ಲಭಿಸಿ ಎಂ
ಟೊರುಷವಾಗಲಿಂದಿಗೆ

ಪರಮಕೃಪೆಯಿಂದ ದಾಸತ್ವ ಸಿದ್ಧಿಸಲೆಂಬ
ವರವಿತ್ತ ಕಾಲ ಒದಗೆ
ನರಹರಿಯೆ ನಿನ್ನ ಚರಣವೆ ಎನಗೆ ಗತಿ ಎಂದು
ನೆರೆ ನಂಬಿ ಪೊರಟೆನೀಗ ಬೇಗ ೧

ಸರುವ ವಸ್ತುಗಳಲ್ಲಿ ಇರುವ ಅಭಿಮಾನ ಶ್ರೀ
ಹರಿ ನಿನ್ನ ಪದದಲಿರಿಸು
ವರ ಗುರು ಚರಣದಲಿ ಸದ್ಭಕ್ತಿ ಸರ್ವದಾ
ಸ್ಥಿರವಾಗಿ ನೆಲೆಯಗೊಳಿಸು
ಹೊರಗೊಳಗೆ ಹಿಂದುಮುಂದರಘಳಿಗೆ ಬಿಡದೆ ನೀ
ನಿರುತದಲಿ ಸಂರಕ್ಷಿಸು
ಹರಿದಾಸ ಮಾರ್ಗದಲಿ ಹರುಷದಲಿ ನಲಿವಂತೆ
ವರಮತಿಯ ದಯಪಾಲಿಸು ಹರಿಯೆ ೨

ಗುರುಕರುಣ ಕವಚ ತೊಟ್ಟಿರುವ ಎನಗಿನ್ನಾವ
ಪರಿಯ ಭಯವಿಲ್ಲವೆಂದು
ಸ್ಥಿರವಾಗಿ ನಂಬಿ ಪೊರಮಡುವೆನೀ ಶುಭದಿನದಿ
ಗುರುವಾರ ಗುರು ಕೃಪೆಯಲಿ
ಪರಿಪರಿಯ ದುಷ್ಕರ್ಮ ಪರಿಹರಿಸಿ ಕಾಯುವೊ
ಗುರುಚರಣ ಧ್ಯಾನಬಲದಿ
ಮರುತಾಂತರ್ಯಾಮಿ ಶ್ರೀ ಗೋಪಾಲಕೃಷ್ಣವಿಠ್ಠಲ
ಕರುಣದಲಿ ಒಲಿದು ಪೊರೆಯೊ ಹರಿಯೆ ೩

## ೨೧೦

ಶ್ರೀ ಗುರುವರ್ಯರಿಗೆ ಜಯಮಂಗಳ ನಿತ್ಯ
ಭೋಗಿಶಯನಪ್ರಿಯಗೆ ಶುಭಮಂಗಳ ಪ.

ಆನಂದರತ್ನರು ಜ್ಞಾನಪ್ರಕಾಶ ಎಂದು
ನಾನಾ ವಿಧದಿ ಬಿರುದು ಪೊತ್ತವಗೆ

ಶ್ರೀನಿವಾಸನನು ಧ್ಯಾನವ ಮಾಳ್ಪಂಥ
ಜ್ಞಾನಪೂರ್ಣರಾದ ಗುರುಗಳಿಗೆ ೧

ಪರಮಪ್ರಿಯರು ಪರಿಮಳರೆಂದೆನಿಸುತ
ಪರಿ ಪರಿ ನಾಮವ ಧರಿಸಿಹಗೆ
ನರಸಿಂಹನನು ಹೃತ್ಸರಸಿಜದಲಿ ಕಂಡು
ಹರುಷವ ಪಡುವಂಥ ಗುರುಗಳಿಗೆ ೨

ತಂದೆ ಮುದ್ದುಮೋಹನವಿಠ್ಠಲನೆಂಬಂಕಿತ
ಚಂದದಿಂದ ಗುರುಗಳಿಂ ಪಡೆದವಗೆ
ಬಂದ ಭಕ್ತರಿಗೆಲ್ಲ ಅಂಕಿತಕೊಟ್ಟು ಭವ
ಬಂಧನವ ಬಿಡಿಸುವ ಗುರುಗಳಿಗೆ ೩

ಚಂದ್ರನ ತೆರದಿ ಪರಮಾರ್ಥ
ಚಂದ್ರೋದಯವ ನಿರ್ಮಿಸುವರಿಗೆ
ಚಂದದಿಂದ ಪರತತ್ವ ಪೇಳುವ
ಸುಂದರ ಮೂರುತಿ ಗುರುಗಳಿಗೆ ೪

ಅಪಾರ ಕರುಣಾಜಲಧಿ ಎಂದೆನಿಪರಿಗೆ
ಶ್ರೀಪತಿ ಪಾದವ ತೋರ್ವರಿಗೆ
ಗೋಪಾಲಕೃಷ್ಣವಿಠ್ಠಲನ ಧ್ಯಾನವನಿತ್ತು
ಕಾಪಾಡುವಂಥ ಶ್ರೀ ಗುರುಗಳಿಗೆ ೫

## ೨೧೧

ಹೊಟ್ಟೆಪಾಡಿನ ಕೃತ್ಯವಲ್ಲವಿದು ವಿಠ್ಠಲನ ಸೇವೆ ಪ.

ಶ್ರೇಷ್ಠ ಗುರುಗಳ ಆಜ್ಞೆಯಿಂದ ಮನ
ಮುಟ್ಟಿ ನಡೆಸುವ ದಾಸವೃತ್ತಿಯು ಅ.ಪ.

ವಂದನೆ ನಿಂದ್ಯಗಳನ್ನು ಗಮನಿಸದೆ
ಇಂದಿರೇಶನ ಪದಕರ್ಪಿಸುತ
ಮಂದಭಾಗ್ಯರ ಮಾತನೆ ಗಣಿಸದೆ
ಬಂದ ಭಯಗಳ ದೂರೋಡಿಸುತಲಿ ೧

ಆಶಪಾಶಗಳ ನಾಶಗೈಸಿ ಮನ
ಕ್ಲೇಶಪಡದೆ ಸಂತೋಷಿಸುತ
ವಾಸುದೇವ ಆನಂದಪೂರ್ಣ ಸ
ರ್ವೇಶ ನಿನಗೆ ನಾ ದಾಸನೆಂತೆಂಬುದು ೨

ಗೆಜ್ಜೆ ಕಾಲಿಗೆ ಕಟ್ಟಿ ತಾಳವ
ಲಜ್ಜೆಯ ತೊರೆದು ಬಾರಿಸುತ
ಮೂರ್ಜಗದೊಡೆಯ ಜಗಜ್ಜನ್ಮಾಧಿಕಾರಣನೆಂದು
ಘರ್ಜಿಸುತಲಿ ಸಂಚಾರಮಾಳ್ಪುದೆ ೩

ಇಂದು ನಾಳೆಗೆಂಬೋ ಮಂದಬುದ್ಧಿಯ ಬಿಟ್ಟು
ಬಂದದರಿಂದಾನಂದಿಸುತ
ತಂದೆ ಮುದ್ದುಮೋಹನದಾಸರ ಪದ
ದ್ವಂದ್ವವ ಭಜಿಸುತ ಮುಂದೆ ಸಾಗುವುದು ೪

ಗುರುಗಳ ಕರುಣದಿ ಅಂಕಿತ ಪಡೆಯಲು
ದೊರೆವುದು ದಾಸತ್ವದ ಸಿದ್ಧಿ
ಅರಿಯದೆ ವೇಷವ ಧರಿಸಿ ಮೆರೆದರೆ
ಸಿರಿವರ ಮೆಚ್ಚನು ಗುರುವು ಒಲಿಯನು ೫

ಉಚಿತ ಧರ್ಮಕರ್ಮಗಳನೆ ಮಾಡುತ
ಖಚಿತ ಜ್ಞಾನ ಮನದಲಿ ತಿಳಿದು
ವಚನದಿ ಹರಿನಾಮಗಳನೆ ನುಡಿಯುತ
ಶುಚಿರ್ಭೂತರಾಗಿ ಆನಂದಪಡುವುದು ೬

ದುಷ್ಟರ ತೊರೆದು ಶಿಷ್ಟರೊಳಾಡುತ
ಶ್ರೇಷ್ಠವಾದ ದಾಸತ್ವದಲಿ
ಬಿಟ್ಟು ಪ್ರಪಂಚವ ಸೃಷ್ಟೀಶ ಗೋಪಾಲ
ಕೃಷ್ಣವಿಠಲನು ಶ್ರೇಷ್ಠದಿ ಭಜಿಪುದು ೭

## ಆತ್ಮಶೋಧನೆ

## ೨೧೨

ಅಭಯ ಪ್ರಧಾನ ಮಾಡೂ ಇಭಗಿರಿವಾಸ ಪ.

ಮಂಗಳ ಮಹಿಮನೇ ರಂಗನಾಥನೆ ಕೃಷ್ಣಾ
ತುಂಗ ವಿಕ್ರಮ ನರಸಿಂಗ ಲಕ್ಷ್ಮೀಕಾಂತ ೧

ಮೃತ್ಯು ಬೆನ್ಹತ್ತಿರೆ ಕತ್ತರಿಸುವ ಮಹ
ಶಕ್ತ ನೀನಿರುತಿರೆ ಮತ್ತಾರ ಬೇಡಲಿ ೨

ನಿನ್ನ ಕಿಂಕರಳಾಗಿ ನಿನ್ನ ಸೇವೆಯ ಮಾಳ್ಪ
ಉನ್ನಂತ ಅಭಿಲಾಷೆಯನ್ನು ಸಲ್ಲಿಸು ದೇವ ೩

ಹಿಂದಿನ ಎಡರುಗಳೊಂದೊಂದರಲಿ ಕಾಯ್ದೆ
ಇಂದು ಮುಂದೂ ಕಾಯೋ ಮಂದಹಾಸನೆ ಸ್ವಾಮಿ ೪

ಹರಿಗುರು ಕಾರ್ಯಕಲ್ಲವೆ ಎನ್ನ ಈ ದೇಹಾ
ಸಿರಿವರ ಗೋಪಾಲಕೃಷ್ಣವಿಠ್ಠಲ ಸ್ವಾಮಿ ೫

## ೨೧೩

ಈಗಲೂ ನೀ ಕಾಯ ಬೇಕೋ ಇಂದಿರೆ ರಮಣ
ಆಗಲೂ ನೀ ಕಾಯಬೇಕೋ ಅರವಿಂದ ನಯನ ಪ.

ಈಗ ಈ ಜನ್ಮದಲ್ಲಿ
ಆಗ ಭವ ದಾಟುವಲ್ಲಿ ಅ.ಪ.

ನಾನಾ ಜನ್ಮದಲಿ ತಿರುಗಿ ಮಾನವ ನಾನಾಗಿ ಪುಟ್ಟಿ
ಶ್ವಾನ ಸೂಕರನಂತೆ ಕಾಲ ಕಳೆದು
ದೀನನಾಗೀಗ ಇನ್ನು ನೀನೆ ಗತಿಯೋ ಎನಲು
ಶ್ರೀನಾಥ ನಿನ್ನ ನಾಮ ಎನ್ನ ನಾಲಗೆಯಲಿ ನುಡಿಸಿ ೧

ಮಾಯಾಪತಿಯೆ ಕೇಳೋ ಆ ಯಮಭಟರು ಎಳೆದು
ನೋಯಿಸುತ್ತಿರಲು ಎನ್ನ ಬಾಯಬಿಡುತಲಿ
ತೋಯಜಾಂಬಕನೆ ಎನ್ನ ಕಾಯೋ ಎಂದೆನುತ ಒದರೆ
ಆ ಯಮಬಾಧೆ ಬಿಡಿಸಿ ಸಾಯದಾ ಸೌಖ್ಯವನಿತ್ತು ೨

ವೈಷ್ಣವ ಜನ್ಮವ ನೀನು ಇತ್ತುದು ಪಿರಿಯದಲ್ಲೊ
ವೈಷ್ಣವ ಜ್ಞಾನವ ನೀಡೊ ಸುಭಕ್ತಿ ಸಹಿತ
ಕೃಷ್ಣಮೂರುತಿಯೆ ನೀನು ಅಷ್ಟದಳ ಪದ್ಮದಲಿ ನಿಂತು
ಉಷ್ಣ ಶೀತ ದ್ವಂದ್ವ ಸಹಿಷ್ಣುತೆ ವಿರಕ್ತಿಯೊಡನೆ ೩

ತ್ರಿಗುಣದಿಂದ ಬದ್ಧವಾದ ವಿಗಡದೇಹ ತೊಲಗುವಂತೆ
ಬಗೆಬಗೆಯ ನಿನ್ನ ಲೀಲೆ ಅಂತರದಿ ತಿಳಿಸಿ
ಜಗದಾವರಣ ತೊಲಗುವಾಗ ಬಗೆಬಗೆಯ ಲಯದ ಚಿಂತೆ
ತಗಲಿ ಮನಕೆ ನಿನ್ನ ಮಹಿಮೆ ಆನಂದವಾಗುವಂತೆ ೪

ಗೋಪಾಲಕೃಷ್ಣವಿಠಲ ನೀ ಪರದೈವನೆನಿಸಿ
ಆಪಾದಮೌಳಿ ನಿನ್ನ ರೂಪವ ತೋರಿ
ಅಪವರ್ಗದಲಿ ಎನಗೆ ಶ್ರೀಪಾದಾಸ್ಥಾನವಿತ್ತು
ಈ ಪರಿಯಿಂದ ಉಭಯ ವ್ಯಾಪಾರದಲ್ಲಿ ಪರಿಯೆ ೫

## ೨೧೪

ಎಲ್ಲಿರುವೆಯೊ ಎಂದು । ತಲ್ಲಣಗೊಳುತ್ತಿದ್ದೆ
ಇಲ್ಲೆ ಬಂದೆಯೊ ದೇವನೆ ಪ.

ಫುಲ್ಲಲೋಚನ ಎನ್ನ ಉಲ್ಲಾಸಗೊಳಿಸುತ
ನಿಲ್ಲೊ ಹೃತ್ಕಮಲದಿ ನೀ ಬಹು ಮುದದಿ ಅ.ಪ.

ಕಪಟನಾಟಕ ದೇವ । ಅಪರಿಮಿತ ಮಹಿಮ
ಗುಪಿತರೂಪನೆ ನಿನ್ನನು
ವಿಪುಲಮತಿಯಿಂದ ವರ್ಣಿಸಲಾಪೆನೆ
ಸಪುತ ಸಪುತ ಭುವನೇಶ ಕೃಪೆಮಾಡೊ
ಕೃಪಣವತ್ಸಲ ನಿನ್ನ ಕಾಣದೆ
ಅಪರಿಮಿತವಾಗಿ ನೊಂದೆನಯ್ಯ
ತಪಿಸುವುದು ನಿನಗುಚಿತವೆ ಹರಿ
ಕೃಪೆ ಮಾಡೊ ಬೇಗ ಶ್ರೀನಿವಾಸ ೧

ಹರಿ ನಿನ್ನ ಪಾದವ । ನಿರುತದಿ ಧ್ಯಾನಿಪ
ವರಮತಿ ಎನಗೆ ನೀಡೊ
ಗರುವಿಕೆಯನೆ ಬಿಡಿಸು ಶರಣರ ಪೋಷಿಸು
ಸುರವರ ನಿನ್ನಂಘ್ರಿಗೆರಗಿ ಬಿನ್ನೈಸುವೆ
ಕರೆಕರೆಗೊಳಿಸುವುದುಚಿತವೆ
ತೊರೆದರೆ ಎನ್ನ ಪೊರೆವರ್ಯಾರೊ
ಥರವಲ್ಲ ನಿನಗಿನ್ನು ಕೇಳಿದು
ಪೊರೆಯದಿದ್ದರೆ ನಗರೆ ಭಕ್ತರು ೨

ಮಂದಮತಿಯಿವಳೆಂದು । ಹಿಂದು ಮಾಡಿದರೆನ್ನ
ಕುಂದು ನಿನಗೆ ತಪ್ಪದೊ
ಬಂಧನ ಬಿಡಿಸು ನೀ ಬಂಧನದೊಳಗಿಡು
ಮಂದಿರ ಹೃದಯದಿ ಎಂದೆಂದಿಗಗಲದೆ
ಮಂದರೋದ್ಧರ ಕೇಳಿಸಿತೆ ಈ
ಮಂದಭಾಗ್ಯೆಯ ಮಾತು ಕಿವಿಗೆ
ಮಂದಗಮನೆಯ ಮಧ್ಯೆ ಇರುವಗೆ
ಮಂದಹಾಸ ಮುಖೇಂದು ವದನನೆ ೩

ಅಜಸುರ ವಂದ್ಯನೆ । ಭಜಿಸಲಾಪೆನೆ ನಿನ್ನ
ತ್ರಿಜಗದೊಡೆಯ ಹರಿಯೆ
ವಿಜಯಸಾರಥಿ ಎನ್ನ ರಜತಮವನೆ ಕಳೆದು
ಕುಜನರೊಳಿಡದಲೆ ನಿಜಗತಿ ಪಾಲಿಸೊ
ಗಜವರದ ಗಂಭೀರ ದೇವನೆ
ಧ್ವಜವಜ್ರಾಂಕುಶ ಪಾದಕಮಲನೆ
ಭಜಿಸಿದವರಿಗೊಲಿವ ದೇವನೆ
ಭುಜಗಭೂಷಣನಿಂದ ವಂದ್ಯನೆ ೪

ಸೃಷ್ಟ್ಯಾದಿ ಕರ್ತನೆ । ಎಷ್ಟು ಬೇಡಲೊ ನಾನು
ಇಷ್ಟ ದೈವವೆ ಕೇಳಲೊ
ಭ್ರಷ್ಟತನವನೆಣಿಸದೆ
ದೃಷ್ಟಿಯಿಂದಲಿ ನೋಡಿ
ಕಷ್ಟಬಿಡಿಸಿದರೆ ಮುಟ್ಟಿಪೂಜಿಸುವೆನೊ
ದಿಟ್ಟ ಗೋಪಾಲಕೃಷ್ಣವಿಠ್ಠಲ
ಇಷ್ಟು ಬಿನ್ನಪ ನಷ್ಟ ಮಾಡದೆ
ಕೊಟ್ಟು ಧೈರ್ಯವ ಮೆಟ್ಟಿ ಪಾಪವ
ಸುಟ್ಟು ಕರ್ಮವ ಕೃಷ್ಣ ಸಲಹೊ ೫

## ೨೧೫

ಎಷ್ಟು ದಿವಸ ಹೀಗೆ ಕಳೆಯಲೊ ಗೋಪಾಲಕೃಷ್ಣ
ಎಷ್ಟು ದಿವಸ ಹೀಗೆ ಕಳೆಯಲೊ ಪ.

ಎಷ್ಟು ದಿವಸ ಹೀಗೆ ಎನ್ನ ಸೃಷ್ಟಿಗೊಡೆಯ ಬಳಲಿಸುವೆಯೊ
ಕಷ್ಟಪಡಲಾರೆ ಭವದಿ ದೃಷ್ಟಿಯಿಂದ ನೋಡಿ ಸಲಹೋ ಅ.ಪ.

ನಾನಾ ಜನ್ಮದಿ ತೊಳಲಿಸಿ ಎನ್ನನು
ನೀನೆ ತಂದೆಯೊ ಮಾನವತ್ವದಿ
ನಾನು ಎಂಬುದು ಬಿಡಿಸಿ ಈಗ
ನೀನೆ ಕರ್ತನೆನಿಸಿ ಕಾಯೋ ೧

ದೇಹಸ್ಥನೆಂದೆನಿಸಿ ಎನ್ನ
ದೇಹ ಮಧ್ಯದಿ ಕಾಣದಿಹರೆ
ದೇಹಗಳನು ಧರಿಸಲಾರೆ
ದೇಹ ಮೋಹ ಬಿಡಿಸದಿಪ್ಪರೆ ೨

ಭೃತ್ಯವತ್ಸಲನೆಂದು ನಿನ್ನ
ಭಕ್ತರೆಲ್ಲರು ಕರೆಯುತಿಹರೊ
ಪೊತ್ತ ಬಿರುದು ಬಿಡುವರೇನೊ
ಭೃತ್ಯಳೆಂದು ಎನ್ನ ಸಲಹೊ ೩

ಪೋಗುತಿದೆ ದಿವಸ ನೋಡು
ಬೇಗ ಬೇಗನೆ ದಯವ ಮಾಡು
ಭೋಗದಲಿ ವೈರಾಗ್ಯ ನೀಡು
ಭಾಗವತರ ಸಂಗ ಕೊಡು ೪

ಕರ್ಮದಲ್ಲಿ ಶ್ರದ್ಧೆಯಿಲ್ಲ
ಧರ್ಮದಲ್ಲಿ ಬುದ್ಧಿಯಿಲ್ಲ

ನಿರ್ಮಲದ ಜ್ಞಾನವಿಲ್ಲ
ನಿರ್ಮಲಾತ್ಮ ಬಲ್ಲೆಯಲ್ಲ ೫

ಅಂಧಕಾರದಿ ಎನ್ನನಿರಿಸಿ
ಚಂದವೇನೋ ಹೀಗೆ ಮಾಳ್ಪದು
ದ್ವಂದ್ವ ಕರ್ಮ ಸ್ವೀಕರಿಸಿ
ಮುಂದೆ ಕರ್ಮವಿಡದೆ ಸಲಹೋ ೬

ಅಪಾರ ಜನುಮದಲ್ಲಿನ
ಪಾಪ ಸಮೂಹಗಳ ತರಿದು
ಶ್ರೀಪಾದ ಸ್ಮರಣೆ ನೀಡೋ
ಗೋಪಾಲಕೃಷ್ಣವಿಠಲ ೭

## ೨೧೬

## ಉಗಾಭೋಗ

ಐದೊಂದು ಅರಿಯ ಬಿಡಿಸೊ
ಐದೆರೆಡು ಹೊದಿಕೆ ಹರಿಸೊ
ಐದು ಮೂರು ಕಡಿಸೊ ಐದು ನಾಲ್ಕು ಕೊಡಿಸೊ
ಐದು ಐದು ಒಂದು ನಿನ್ನ ಪಾದದೊಳಿಡಿಸೊ
ಐದರಿಂದಾದ ದೇಹ ಎನ್ನದಲ್ಲವೆನಿಸೊ
ಐದು ಐದು ಅಧಿಪತಿಗಳ ಎನಗೊಲಿಸೊ
ಐದೊಂದು ವನಜಗಳ ತತ್ವಗಳನೆ ತಿಳಿಸೊ
ಐದು ಮೂರುದಳ ಪದ್ಮದಿ ಕಾಣಿಸೊ
ಐದೇಳು ದಳ ಪದ್ಮ ಹಾದಿಯ ತೋರಿಸೊ
ಐದು ಜನರ ಕಾಯ್ದ ಗೋಪಾಲಕೃಷ್ಣವಿಠ್ಠಲ
ಐದಿಸೊ ಮನವ ನಿನ್ನ ಪಾದ ಧ್ಯಾನದಿ ನಿರುತಾ

## ೨೧೭

ಚಿಂತಾರಹಿತ ಮೂರ್ತಿ ಚಿನ್ಮಯಾತ್ಮಕ ರೂಪ
ಸಂತತದಿ ನೆನೆವವರ ಸಲಹೊ ಕರುಣಿ ಪ.

ಚಿಂತೆಯಲಿ ಜಗವೆಲ್ಲ ತಾ ತುಂಬಿ ಇರುತಿಹುದು
ಎಂತು ನಿನ್ನಾಟ ಪೇಳ್ ನಿಗಮವೇದ್ಯ
ಚಿಂತೆ ಎನಗೊಂದಿಲ್ಲ ಅಂತರಂಗದಿ ನೆಲೆಸಿ
ಸಂತತದಿ ನಿನ ಧ್ಯಾನ ನೀಡೆಂಬೆನೊ ೧

ದೇಶಾಧಿಪತಿಗಳಿಗೆ ಕೋಶ ತುಂಬದ ಚಿಂತೆ
ದೇಶ ತಿರುಗುವನಿಗೆ ಹಣದ ಚಿಂತೆ
ದೇಶಸ್ಥನಾದವಗೆ ರಾಜಭಟರಾ ಚಿಂತೆ
ಕಾಶಿಯಲ್ಲಿರುವವಗೆ ಮನೆಯ ಚಿಂತೆ ೨

ಜಾರಿಣಿಗೆ ವಿಟನೊಬ್ಬ ಬಾರದಿರುವ ಚಿಂತೆ
ಚೋರನಿಗೆ ರವಿ ಮುಳುಗದಿರುವ ಚಿಂತೆ
ಮಾರನಿಗೆ ಯೋಗಿಗಳ ಹೃದಯ ಭೇದಿಪ ಚಿಂತೆ
ನಾರಿಗೆ ಪತಿ ಒಲುಮೆ ಪಡೆವ ಚಿಂತೆ ೩

ಕರ್ಮತತ್ಪರರಿಗೆ ಹರಿಮರ್ಮವರಿಯದ ಚಿಂತೆ
ಧರ್ಮಪುರುಷಗೆ ಕಲಿಬಾಧೆಯ ಚಿಂತೆ
ವೇದಶಾಸ್ತ್ರಜ್ಞನಿಗೆ ವಾದಿಯ ಭಯ ಚಿಂತೆ
ಹಾದಿ ನಡೆವಗೆ ದುಷ್ಟ ಜನರ ಚಿಂತೆ ೪

ಸಾಧು ಸಜ್ಜನರಿಗೆ ಬಾಧೆ ಕೊಡುವರ ಚಿಂತೆ
ಹಾದಿ ತಪ್ಪಿದ ಪಾಪಿಗೆ ಯಮನ ಚಿಂತೆ
ವಾಣಿಜ್ಯತನದವಗೆ ಹಣವು ಗಳಿಸುವ ಚಿಂತೆ
ಮಾನವಂತರಿಗೂನ ನುಡಿಯ ಚಿಂತೆ ೫

ಇಂತೆಲ್ಲರಾ ಚಿಂತೆ ಇರಲಿ ಕೇಳ್ ಹರಿಯೆ
ಚಿಂತೆ ಬಿಡಿಸೆನಗೆ ನೀನೊಲಿದು ದೊರೆಯೆ
ಚಿಂತನೆಗೆ ಸಿಗದಿಹುದು ನಿನಗೆ ಸರಿಯೆ
ಚಿಂತಿಪರಿಗೊಲಿವಂಥ ಸಿರಿಕಾಂತ ಹರಿಯೆ ೬

ಶಾಂತ ಮೂರುತಿ ಪರಮ ಕರುಣಾಳುವೆನ್ನುತಲಿ
ಎಂತೆಂತೂ ಸಜ್ಜನರು ಸ್ತುತಿಪುದನು ಕೇಳುತಲಿ
ಇಂತು ನಿನ ಪದವನಾಸ್ವಾರೈಸಿ ಬಂದರೂ
ನಿಂತರೂ ಎದುರಲ್ಲಿ ನೀನೊಲಿಯಲಿಲ್ಲ ೭

ಕರಮುಗಿದು ಎರಗಿದರೂ ಶಿರಬಾಗಿ ನಮಿಸಿದರೂ
ಚರಣದಲಿ ತನುಮನ ಒಪ್ಪಿಸಿದರೂ
ಕರಗಲಿಲವು ಮನಸು ಕರುಣಪುಟ್ಟಲು ಕಾಣೆ
ಭರವಸೆಯು ನಿನ್ನಲ್ಲಿ ಮೂಡಲಿಲ್ಲ ೮

ಶಿರದಿ ಕರವಿಡಲಿಲ್ಲ ತೊರೆದೆಯೊ ಜರಿದೆಯೊ
ವರಭಕ್ತಿ ಸಾಲದೊ ಗುರುವಿಕೆಯೊ ದೊರೆತನವೊ
ಅರಹೊಟ್ಟೆ ಜೀವಿಸುತ ಅರಿಯದೆ ಮತ್ತೊಂದು
ಇರುಳು ಹಗಲಾಲ್ಪರಿವ ತೆರವು ತೋರದೊ ಮನಕೆ ೯

ಸರಿಯಲ್ಲ ಸರಿಯಲ್ಲ ಕರುಣಾಳುವೆಂಬುವೋ
ಬಿರುದುಳಿವ ತೆರವಿಲ್ಲ ಬಿಂಕಪಟ್ಟರೆ ಈಗ
ಕರೆದು ಮನ್ನಿಸೊ ಪಾಂಡುರಂಗವಿಠ್ಠಲ ದೇವ
ವರ ಪುಂಡಲೀಕಗೆ ಒಲಿದದ್ದು ನಿಜವಾಗೆ ೧೦

ಪರಿಪರಿಯ ಭಕ್ತರನು ಪೊರೆದದ್ದು ನಿಜವಾಗೆ
ಹರಿದಾಸ ಸಂತತಿಗೆ ಮನೆದೈವ ನಿಜವಾಗೆ
ಸರಿಯಿಲ್ಲದಾ ದೈವ ನೀನೆಂದು ನಿಜವಾಗೆ
ಹೊರವೊಳಗೆ ಒಂದಾಗಿ ಕರಪಿಡಿದು ಸಲಹಿನ್ನು ೧೧

ಗುರುಕೊಟ್ಟ ವರಬಲದಿ ಶರಣು ಪೊಂದಿದೆ ನಿನಗೆ
ಚರಣದಲಿ ಬಿದ್ದಿರುವೆ ಪರಮ ಪುರುಷನೆ ದೇವ
ಸ್ಮರಪಿತನೆ ಗೋಪಾಲಕೃಷ್ಣವಿಠ್ಠಲ ನಿನ್ನ
ಸ್ಮರಣೆ ಮಾಡಿದ ಮೇಲೆ ಭವದ ಭಯ ಉಂಟೆ ೧೨

## ೨೧೮

ನಾನೇ ಭ್ರಮಿಸಿದೆನೋ ವಿಷಯ ಸಂಗ
ನೀನೇ ನಲಿದಿತ್ತೆಯೋ ಪ.

ಗಾನಲೋಲನೆ ಕೃಷ್ಣ ಏನೆಂಬುದರಿಯೆನೊ
ಮೌನಿ ಜನಪ್ರಿಯ ಧ್ಯಾನಗಮ್ಯನೆ ರಂಗ ಅ.ಪ.

ಲೋಕ ದೃಷ್ಟಿಯ ಸುಖ ಹೀನತೆಯಿಂದೆ
ನೂಕುತ ದಿನ ಕಳೆದೆ
ಕಾಕು ಯುಕುತಿಯಲ್ಲಿ ವ್ಯಾಕುಲ ಮನಕಿಲ್ಲ
ಶ್ರೀಕಾಂತ ನಿನ್ನಿಚ್ಛೆ ಸುಖದುಃಖ ನಿಕರವ ೧

ಆಟ ಪಾಟ ನೋಟವೂ ಊಟ ಕೂಟ
ಕಾಟ ಕರ್ಮಗಳೆಲ್ಲವೂ
ಹಾಟಕಾಂಬರ ನಿನ್ನಾಟವೆನ್ನಲುಭವ
ದಾಟಿಸುವವೊ ತೆರೆ ಏಟಿಗೆ ಕೊಡುವುವೋ ೨

ನರಕಕೆ ಕಾರಣವೋ ಹೇ ಶ್ರೀನರ
ಹರಿ ನಿನ್ನ ಪ್ರೀತಿ ಕರವೋ
ಪರಿಪರಿ ಜನ್ಮ ಸಂಚಿತ ಕರ್ಮ ಹರಿಸುತ
ವರ ಸುಖ ಪಾಲಿಪ ಗುರುತಿನ ಪರಿಯೋ ೩

ದೇಹಕ್ಕೆ ಹಿತಕರವೋ ಇಲ್ಲವೆ ಮನ
ದಾಹಕ್ಕೆ ಮೃತ ಕರವೋ

ದೇಹ ಮೋಹಾದಿಗಳಳಿದು ನಿಶ್ಚಲ ತತ್ವ
ಶ್ರೀಹರಿ ತೋರುವ ತೆರವೊ ಒಂದರಿಯೆ ೪

ಪಾಪಕ್ಕೆ ಹಿತಕರವೋ ಇಲ್ಲವೆ ಮನ
ದಾಹಕ್ಕೆ ಮೃತ ಕರವೋ
ದೇಹ ಮೋಹಾದಿಗಳಳಿದು ನಿಶ್ಚಲ ತತ್ವ
ಶ್ರೀಹರಿ ತೋರುವ ತೆರವೊ ಒಂದರಿಯೆ ೫

ಪಾಪಕ್ಕೆ ಕಾರಣವೋ ಈ ಕರ್ಮಗಳ
ಳಾಪದುದ್ಧಾರಕವೋ
ಗೋಪಾಲಕೃಷ್ಣವಿಠ್ಠಲನೆ ಮದ್ಗುರು ಬಿಂಬ
ವ್ಯಾಪಾರದ್ವಯ ನಿಂದು ನೀ ಪ್ರೀತನಾಗಲೊ ೬

## ೨೧೯

ನಿನ್ನ ಚಿತ್ತ ನಿನ್ನ ಚಿತ್ತ ನಿನ್ನ ಚಿತ್ತವೋ ಪ.

ನಿನ್ನ ಚಿತ್ತಕಿನ್ನು ತಂದು ಬನ್ನ ಬಡಿಸಬೇಡವಿನ್ನು
ಭಯವ ಬಿಡಿಸಿ ಕಾಯೊ ಎನ್ನ ಅ.ಪ.

ಘನ್ನ ಮನಸು ಮಾಡಿ ಈಗ
ಎನ್ನ ಸಲಹಿದರೆ ಜಗದಿ
ನಿನ್ನ ಕೀರ್ತಿಯು ಉನ್ನತದಲಿ ಮೆರೆವುದಿದೆಕೊ
ಬನ್ನ ಬಡಿಸಬೇಡವಿನ್ನು
ಘನ್ನಮಹಿಮ ಕೇಳು ಸೊಲ್ಲ
ಇನ್ನು ಸುಮ್ಮನಿರಲು ಸಲ್ಲ ಘನಮಹಿಮನೆ ೧

ಬುದ್ಧಿ ಭ್ರಮೆಯಿಂದ ನಾನು
ಪೊದ್ದಿರುವ ಭಯವ ಬಿಡಿಸಿ
ನಿದ್ದೆಯಲಿ ತಿಳಿಸಿದ್ವಾರ್ತೆ ಶುದ್ಧಗೊಳಿಸುತ

ಮುದ್ದುಕೃಷ್ಣ ಅಭಯ ತೋರಿ
ಉದ್ಧರಿಸಿದರೆ ಎನ್ನ
ಶ್ರದ್ಧೆಯಿಂದ ನಿನ್ನ ಕೀರ್ತಿ ಮಧ್ವಮತದಿ ಸಾರುವೆನು ೨

ಬೆದರಿಸುವ ಪರಿಯದೇನು
ಬದಿಗನಾಗಿ ಅರಿಯದೇನು
ಹೃದಯದಲ್ಲಿ ನಿಂತ ಮೇಲೆ ಎನ್ನದಿನ್ನೇನು
ಪದುಮನಾಭ ನಿನ್ನ ನಂಬಿ
ಪದೋಪದಿಗೆ ನೆನೆಸುತಿರಲು
ವಿಧ ವಿಧದಿ ಪರಿಕಿಸುವ ವಿಧವನರಿಯೆ ಪದುಮೆಯರಸ ೩

ಉಡಲು ಉಣಲು ಆಸೆಯಿಲ್ಲ
ತೊಡಲು ಇಡಲು ಮಮತೆಯಿಲ್ಲ
ಎಡದ ಬಲದ ನೆಂಟರಭಿಮಾನವಿಲ್ಲವು
ಎಡರು ಬರಲು ಭಯವು ಇಲ್ಲ
ಬಿಡಲು ದೇಹ ಅಂಜಿಕಿಲ್ಲ
ನಡುವೆ ಕರೆವುದುಚಿತವಲ್ಲ ಮೃಡನ ಸಖನೆ ಕೇಳೊ ಸೊಲ್ಲ ೪

ನಿರ್ದಯವನು ಮಾಡಲಿಕ್ಕೆ
ಮಧ್ಯಮಧಮಳಲ್ಲವಿನ್ನು
ಮಧ್ವಮುನಿಯ ಮತದಿ ಜನಿಸಿ ಶುದ್ಧ ಭಾವದಿ
ಶುದ್ಧ ಸಾತ್ವಿಕರು ತಂದೆ
ಮುದ್ದುಮೋಹನ ಗುರುಗಳಿಂದ
ಪೊದ್ದಿ ದಾಸ್ಯರೀಗ ಜಗದಿ ಬದ್ಧ ಕಂಕಣಧರಿಸಿ ಮೆರೆವೆ ೫

ಒಡೆಯ ನೀನು ಎನ್ನ ಧರೆಗೆ
ಬಿಡದೆ ತಂದು ಜನ್ಮವಿತ್ತು
ಬಿಡದೆ ಕಾಯ್ವ ಗುರುಗಳನ್ನು ಅಗಲಿಸುತ್ತಲಿ
ಅಡಿಗಡಿಗಭಯವ ತೋರಿ

ಪಿಡಿದು ಕೈಯ್ಯ ಸಲಹದಿರಲು
ಅಡಿಗಳಾರದಿನ್ನು ನಾನು ಪಿಡಿಯೆ ಕಡಲಶಯನ ೬

ನಾಥರಾರು ಎನಗೆ ಇಲ್ಲ ೧ಅ–
ನಾಥಗಳನ್ನು ಮಾಡಿ ನಿನ್ನ
ಮೂತಿ ತಿರುಹಿ ಸಲಹದಿರಲು ಪಾತಕಲ್ಲವೆ
ಪಾತಕಾದಿ ದೂರನೆಂಬೊ
ಖ್ಯಾತಿ ಸಟೆಯದಾಯ್ತು ಈಗ
ನೀತಿಯರಿತು ಪೊರೆಯದಿರಲು ಜಾತರಹಿತ ಜಗದಿ ಸಲಹು ೭

ದಾಸತನದಿ ಮೆರೆವೊದೊಂದು
ಆಸೆಯಿಲ್ಲದಿನ್ನು ಬೇರೆ
ಆಸೆಯೊಂದು ಇಲ್ಲ ಕೇಳು ನಾಶರಹಿತನೆ
ಪಾಶಕರ್ಮ ಹರಿಸಿ ನಿನ್ನ
ದಾಸಳೆಂದು ಮೆರೆಸೆ ಜಗಕೆ
ಈಶನೆಂದು ನಿನ್ನ ಮೆರೆಸಿ ಆಸೆ ಪೂರೈಸಿಕೊಂಬೆ ೮

ಮೃತ್ಯುವಿಗೆ ಮೃತ್ಯುವಾಗಿ
ತುತ್ತುಮಾಡಿ ಜಗವ ನುಂಗಿ
ಮತ್ತೆ ಬ್ರಹ್ಮಾಂಡ ಸೃಜಿಸಿ ಪೆತ್ತು ಜೀವರ
ಭಕ್ತ ಜನಕೆ ಬಂದ ಎಡರು
ಮೃತ್ಯುಗಳನು ಕಾಯ್ದ ದೇವ
ಮೃತ್ಯು ಮೃತ್ಯು ಶರಣು ನೃಹರಿ ಮೃತ್ಯು ಹರಿಸಿ ಕಾಯೊ ಶೌರಿ ೯

ಬಿಡಲಿಬೇಡ ಕೈಯ್ಯ ಇನ್ನು
ಬಿಡದೆ ಕಾಯೊ ಶರಣು ಶರಣು
ಒಡೆಯ ಶ್ರೀ ಗೋಪಾಲಕೃಷ್ಣವಿಠ್ಠಲಾತ್ಮಕ
ಕಡೆಗೆ ನಿನ್ನ ಪಾದಸೇವೆ ಬಿಡದೆ
ಕೊಡುವ ದೃಢವ ಬಲ್ಲೆ
ಕಡಲಶಯನ ಗುರುಗಳೊಡೆಯ ಕಡುಕೃಪಾಳು ಕರವ ಪಿಡಿಯೊ ೧೦

## ೨೨೦

ನಿನ್ನವಳೆನಿಸೊ ಎನ್ನ ಘನ್ನ ಗೋಪಾಲ
ನಿನ್ನವಳೆನಿಸೊ ಎನ್ನ ಪ.

ಅನ್ಯರೊಬ್ಬರ ಕಾಣೆ ಮನ್ನಿಸುವರ ಜಗದಿ
ನಿನ್ನ ಹೊರತು ಇಲ್ಲ ಪನ್ನಗಾದ್ರಿವಾಸ ಅ.ಪ.

ಜನನ ಮರಣ ಕಷ್ಟ ಘನಭವ ಜಲಧಿಯೊಳ್
ಮುಣಗಿ ಮುಣಗಿ ದಡವನು ಕಾಣದಿರುವೆನೊ ೧

ದುಷ್ಟ ವಿಷಯಗಳ ಅಟ್ಟಿ ದೂರದಿ ನಿನ್ನ
ಶ್ರೇಷ್ಠ ನಾಮಾಮೃತ ಕೊಟ್ಟು ಪುಷ್ಟಿಯನಿತ್ತು ೨

ಭಕ್ತಿ ಜ್ಞಾನವು ನಿನ್ನ ಭಕ್ತ ಸಂಗವು ವಿ-
ರಕ್ತಿ ಪಥವ ತೋರಿ ಮುಕ್ತಿಯ ಪಾಲಿಸಿ ೩

ಶ್ರೀನಿಕೇತನ ನಿನ್ನ ಧ್ಯಾನವ ಮಾಳ್ಪಂಥ
ಗಾನಾನಂದವನಿತ್ತು ದೀನ ಬಂಧುವೆ ನಿತ್ಯ ೪

ಮಧ್ವಮತದ ಸಾರ ಉದ್ಘೋಷಿಸುವಂತೆ
ಬುದ್ಧಿಪ್ರೇರಕನಾಗಿ ಶುದ್ಧ ಜ್ಞಾನವನಿತ್ತು ೫

ನಿನ್ನ ಪದುಮ ಪಾದವನು ನಂಬಿದ ಎನ್ನ
ನಿನ್ನ ದಾಸಳೆನಿಸಿ ಘನ್ನ ಮಾರ್ಗವ ತೋರಿ ೬

ಅಂತರಂಗದ ಧ್ಯಾನ ನಿಂತು ನೀ ನಡಿಸುತ
ಅಂತರಂಗದಿ ನಿನ್ನ ಶಾಂತರೂಪವ ತೋರಿ ೭

ತಂದೆ ಮುದ್ದುಮೋಹನ ಗುರುಹೃದಯ
ಮಂದಿರ ನಿವಾಸ ಎಂದೆಂದಿಗಗಲದೆ ೮

ಗೋಪಾಲಕೃಷ್ಣವಿಠ್ಠಲದೇವ ಸರ್ವೇಶ
ಆಪನ್ನಿವಾರಕ ಆಪದ್ಬಾಂದವನಾಗಿ ೯

## ೨೨೧

ನೀರಿನೊಳು ಮುಳುಗುತಿರೆ ತೋರದಲಿ ಪೋಗುವರೆ
ಯಾರು ಕರ ಪಿಡಿವರೈ ತೋರು ಶೌರೇ
ವಾರಿಜಾನಾಭ ಭಯ ತೋರುವರೆ ಕರುಣಾಳು
ಬಾರದಿರುವಂಥ ಅಪರಾಧವೇನೆಲೊ ಹರೀ ಪ.

ಕನಸಿನೊಳಗೊಂದು ಪರಿ ಮನಸಿನೊಳಗೊಂದು ಪರಿ
ವನಜನಯನನೆ ಭಯವ ತೋರಿ ತೋರೀ
ಚಿನುಮಯಾತ್ಮಕ ಎನ್ನ ಪರಿಕಿಸುವ ಪರಿ ಏನೋ
ಬಿನಗುದೈವರ ಗಂಡ ಪರಿಹರಿಸು ಗಂಡಾ ೧

ಕರಿಯ ನೀರೊಳು ಕಾಯ್ದೆ ಪೊರೆದೆ ನೀರೊಳು ಮನುವ
ಧರಣಿ ಪ್ರಹ್ಲಾದರನು ಜಲದಿ ಸಲಹೀ
ಬಿರುದು ಪೊತ್ತವ ಎನ್ನ ಪರಿಯನರಿಯೆಯೆ ದೇವ
ಪೊರೆವರಿನ್ನಾರು ಹೇ ಕರುಣಾಳು ಶರಣೂ ೨

ಮುಳುಗಿಹೆನು ಸಂಸಾರ ಗಣಿಸಲಾಗದ ಕರ್ಮ
ಫಣಿಶಾಯಿ ಕಡೆಮಾಡಿ ಕರವ ಪಿಡಿದೂ
ಧಣಿಸು ನಿನ ದಾಸತ್ವ ಧರೆಯೆ ಮೇಲ್ ಡಂಗುರದೀ
ಫಣಿಶಾಯಿ ಗೋಪಾಲಕೃಷ್ಣವಿಠಲ ಕೈಪಿಡಿದು ೩

## ೨೨೨

ಯಾಕೆನಗೆ ವೈರಾಗ್ಯ ಪುಟ್ಟಲಿಲ್ಲವೊ ದೇವ
ಏನು ಪಾಪಿಯೊ ಜಗದಲಿ ಪ.

ಸಾಕು ಸಾಕೀ ವಿಷಯ ಚಿಂತನೆಯ ಬಿಡಿಸಿನ್ನು
ಲೋಕನಾಯಕನೆ ಸ್ವಾಮಿ ಅ.ಪ.

ಅಸನವಸನಗಳಿಗೆ ಅಲ್ಪರಿದು ಅನ್ಯರಿಗೆ
ಬಿಸಜನಯನನೆ ಕಾಲಹರಣೆಯನೆಗೈದೆ
ವಸುದೇವಸುತ ನಿನ್ನ ಅರಘಳಿಗೆ ನೆನೆಯದಲೆ
ಹಸಿವು ತೃಷೆಯಿಂ ಬಳಲಿ ಬೆಂಡಾದೆನಯ್ಯಾ ೧

ಇಂದ್ರಿಯಗಳೆಲ್ಲವನು ಬಂಧನದೊಳಗೆ ಇರಿಸಿ
ಇಂದಿರೇಶನೆ ನಿನ್ನ ಧ್ಯಾನಿಸದಲೆ
ಮಂದಮತಿಯಿಂದ ನಾ ಮಮಕಾರದಲಿ ಬಿದ್ದು
ಮಂದ ಜನರೊಡನಾಡಿ ಮಾಯಕೊಳಗಾದೆ ೨

ಭಕ್ತಿಮಾರ್ಗವ ಕಾಣೆ ಜ್ಞಾನ ಮೊದಲೆ ಅರಿಯೆ
ಮುಕ್ತಿಗೊಡೆಯನೆ ಎನ್ನ ಮುದದಿಂದ ಸಲಹೊ
ಯುಕ್ತಯುಕ್ತಿಗಳರಿಯೆ ಸುತ್ತುತಿಪ್ಪೆನೊ ಭವದಿ
ಶಕ್ತ ನೀ ಒಳಗಿದ್ದು ಎನ್ನ ಕಾಡುವರೆ ೩

ಕರ್ಮಮಾರ್ಗವ ತೊರೆದು ನಿರ್ಮಲದಲಿ ನಿನ್ನ
ಒಮ್ಮೆಗಾದರೂ ಮನದಿ ನೆನೆಯಲಿಲ್ಲ
ರಮೆಯರಸನೆ ಶ್ರೀ ಗುರುಗಳಂತರ್ಯಾಮಿ
ಕರ್ಮತ್ರಯಗಳ ಕಡಿದು ಕರುಣದಲಿ ಕಾಯೊ ೪

ಪಾಪರಹಿತನೆ ಎನ್ನ ಪಾಪ ಕರ್ಮಗಳೆಲ್ಲ
ಈ ಪರಿ ನುಡಿದೆ ನೀ ಪರಿಹರಿಸಿ ಕಾಯೋ
ಗೋಪಾಲಕೃಷ್ಣವಿಠ್ಠಲನೆ ನೀನಲ್ಲದಲೆ
ಈ ಪಾಪಿಯನು ಕಾಯ್ವರಾರೊ ಶ್ರೀ ಹರಿಯೆ ೫

## ೨೨೩

ಯಾಕೆನ್ನನಿಲ್ಲಿಗೆ ಎಳೆ ತಂದ್ಯೊ ಹರಿ ತಪ್ಪೇನನೆಸಿಗಿದೆನೊ ಪ.

ಜೋಕೆಯಿಂದಲಿ ಎನ್ನ ಕಾಯಬೇಕಲ್ಲದೆ
ನೂಕಿದರೆನ್ನನು ಸಾಕುವರ್ಯಾರೊ ದೊರಿ ಅ.ಪ.

ಯಾರಿಗೇನೆಸಗಿದೆ ಆರ ನಾ ದೂಷಿಸಿದೆ
ಆರ ನಾ ನಿಂದಿಸಿದೆನೊ
ಆರ ನಾ ವಂಚಿಸಿದೆ ಆರನು ನಾನಹಂ
ಕಾರದಿ ನೋಡಿದೆನೊ ಈ ರೀತಿ ನೊಂದೆನು ೧

ಪದದಿಂದ ಚ್ಯುತಿಪೊಂದಿ ವಿಧಿ ಬರಹದೊಳಿನ್ನು
ವಿಧಿಪಿತ ನಿನ್ನ ಕಾಣಲಿಲ್ಲ
ಮದಗರ್ವ ಬಿಡಿಸೆನ್ನ ಸದಮಲ ಹೃದಯದಿ
ಪದ ಪದುಮವ ತೋರಿ ಉದ್ಧರಿಸೆನ್ನನು ೨

ಸೃಷ್ಟಿಕರ್ತನೆ ಕೇಳೊ ಕಷ್ಟವಪಡಲಾರೆ
ದೃಷ್ಟಿಲಿ ನೋಡಿ ಕಾಯೊ
ಎಷ್ಟು ಬೇಡಲೊ ನಾನು ಬೆಟ್ಟದೊಡೆಯ ಹರಿ
ವೃಷ್ಣೀಶ ಗೋಪಾಲಕೃಷ್ಣವಿಠ್ಠಲ ದೊರಿ ೩

## ೨೨೪

ಹ್ಯಾಗೆ ಉದ್ಧಾರ ಮಾಡುವನೋ ಹರಿ
ಹೀಗೆ ದಿನಗಳ ಕಳೆಯುವರ ಪ.

ಆದಿಮೂರುತಿ ಶ್ರೀ ದೇವ ಪದುಮನಾಭ
ವೇದ ಉದ್ಧಾರನೆಂದನಲಿಲ್ಲ
ಸಾದರದಲಿ ಹರಿ ಸಕಲರಿಗೊಡೆಯನೆಂ
ದಾದರದಲಿ ನಾ ಪಾಡಲಿಲ್ಲ ೧

ಮೃಚ್ಛಕೂರ್ಮಹರಿ ಸ್ವಚ್ಛವರಹನೆಂದು
ಉಚ್ಚಧ್ವನಿಯಿಂದ ಕೂಗಲಿಲ್ಲ
ತುಚ್ಛಕನ ಕೊಂದು ಅಚ್ಚ ಭಾಗವತಗೆ
ಮೆಚ್ಚಿ ರಕ್ಷಿಸಿದನೆಂದೆನಲಿಲ್ಲ ೨

ಚಲುವ ವಾಮನನಾಗಿ ಬಲಿಯ ದಾನವ ಬೇಡಿ
ಮಲವನಳಿವ ಗಂಗೆ ಪಡೆದನೆಂದು
ಕುಲವಳಿದು ಭೂಲಲನೆಯ ವಿಪ್ರರಿ
ಗೊಲಿದು ಇತ್ತನೆಂದು ನೆನೆಯಲಿಲ್ಲ ೩

ಸೀತೆಗಾಗಿ ಪಡೆಸವರುತ ಹರುಷದಿ
ವಾತತನಯಗಜಪದವಿತ್ತನ
ಈತನೆ ಪರದೈವನಾಥನು ಪರಕೆಂದು
ಪ್ರೀತಿ ಭಕ್ತಿಯಲಿ ಮೈಮರೆಯಲಿಲ್ಲ ೪

ಗೋಪಿಯರ ಕೂಡಿ ಗೋಪನ ಮನೆಯಲಿ
ಶ್ರೀಪತಿ ಲೀಲೆಯ ತೋರ್ದನೆಂದು
ಪಾಪದ ಕಾಷ್ಠಕೆ ಪಾವಕನಾಗಿಹ
ತಾಪಹರನ ನಾ ನೆನೆಯಲಿಲ್ಲ ೫

ಲಲನೇರ ವ್ರತವಳಿದು ಚಲುವ ಕುದುರೆ ಏರಿ
ಕಲಿಮುಖರನು ಸದೆಬಡಿದನೆಂದು
ಚಲುವ ಗೋಪಾಲನೆ ನೀನೇ ಗತಿ ಎಂದು
ಹಲವು ಬಗೆಯಿಂದ ಪೊಗಳಲಿಲ್ಲ ೬

ಗುರುಗಳು ಪೇಳಿದ ಪರಮ ರಹಸ್ಯವು
ಅರಿವಾದರೂ ಅನುಭವ ಇಲ್ಲ
ಪರಿಪರಿ ಮಹಿಮೆಯ ಉದಯಸ್ತ ಪರಿಯಂತ
ಅರಿವು ಮನಕೆ ಎನಗಾಗಲಿಲ್ಲ ೭

ದೇಹಸ್ತ ಹರಿ ಎಂದು ದೇಹವ್ಯಾಪ್ತನು ಎಂದು
ದೇಹ ಗೇಹ ಜೀವ ಭಿನ್ನವೆಂದು
ಶ್ರೀ ಹರಿ ಜೀವಾಂತರ್ಯಾಮಿಯಾಗಿಹನೆಂದು
ಮೋಹವಳಿದು ಜ್ಞಾನ ಪುಟ್ಟಲಿಲ್ಲ ೮

ತತ್ವಾಧಿಪತಿ ಹರಿ ತತ್ವಾಭಿಮಾನಿಗಳು
ನಿತ್ಯ ಹರಿಮಾರ್ಗ ತೋರ್ವರೆಂದು
ಸತ್ಯವಚನವನು ವಾಯು ಮತದಿ ನಂಬಿ
ಭೃತ್ಯ ಭಾವವ ನಾ ವಹಿಸಲಿಲ್ಲ ೯

ಎಷ್ಟು ಹೇಳಲಿ ಎನ್ನ ಅವಗುಣಗಳನೆಲ್ಲ
ದೃಷ್ಟಿಯಿಂದಲಿ ನೋಡಿ ನೀನೆ ಸಲಹೋ
ಬೆಟ್ಟದೊಡೆಯನಾಗಿ ಎಲ್ಲರ ಸಲಹುವ
ಅಷ್ಟಭುಜ ಗೋಪಾಲಕೃಷ್ಣವಿಠಲ ೧೦

## ಲೋಕನೀತಿ

### ೨೨೫

ಇತ್ತಿತ್ತ ಬಾರೆಂದು ಕರೆಯುವವರಿಲ್ಲದಿರೆ
ವ್ಯರ್ಥವಲ್ಲವೆ ಜನ್ಮವು ಪ.

ಅತ್ತತ್ತ ಹೋಗೆಂಬ ನುಡಿ ಕೇಳಿ ಜಗದೊಳಗೆ
ಮತ್ತೆ ಇರಬಹುದೆ ಹರಿಯೆ ಅ.ಪ.

ಆರಿಗಾರಾಗುವರೊ ಪ್ರಾರಬ್ಧ ನೀಗದಲೆ
ಶೌರಿ ದಾರಿಯ ತೋರನು
ಈ ರೀತಿಯರಿತು ಹೇ ದುರ್ಮನವೆ ನರಹರಿಯ
ಆರಾಧನೆಯನೆ ಮಾಡೊ ೧

ಏಕಾದಶೇಂದ್ರಿಯವ ಶ್ರೀ ಕಳತ್ರನೊಳಿಟ್ಟು
ಏಕ ಮನದಲ್ಲಿ ಭಜಿಸು
ಏಕೆ ತಲ್ಲಣಿಸುವೆ ಶೋಕಕ್ಕೆ ಒಳಗಾಗಿ
ನೂಕು ಭವತಾಪ ಜಗದಿ ೨

ಗೋಪಾಲಕೃಷ್ಣವಿಠ್ಠಲನೆ ಗತಿ ಎಂತೆಂದು
ಈ ಪರಿಯಿಂದ ಭಜಿಸು
ಶ್ರೀ ಪರಮ ಕಾರುಣ್ಯ ಗುರುಗಳಂತರ್ಯಾಮಿ
ತಾಪ ಹರಿಸುವನು ಭವದಿ ೩

## ೨೨೬

ಎಲ್ಲಾ ಶಾಸ್ತ್ರದ ಸಾರದ ತಿಳಲ್ಮನ
ದಲ್ಲಿ ಹರಿಯನು ಕಾಂಬುದಕೆ ಪ.

ಮನದಲಿ ಹರಿಯನು ಕಾಂಬುವ ಸೊಬಗು
ಬಲ್ಲಿದ ವೈಕುಂಠಕೋಡ್ವದಕೆ ಅ.

ವಿಧಿನೀಷೇಧಗಳಾಚರಿಸುವುದು
ವಿಧ ವಿಧ ಜೀವರ ಸಾಧನಕೆ
ವಿಧ ವಿಧ ಸಾಧನ ನಂತರ ತಿಳಿವುದು
ವಿಧಿ ಜನಕನ ಪದಪಿಡಿವುದಕೆ ೧

ಸ್ನಾನಜಪಾಹ್ನೀಕಗಳೆಲ್ಲವು ತನ್ನ
ಧ್ಯಾನಕೆ ಶ್ರೀಹರಿ ನಿಲ್ವುದಕೆ
ಧ್ಯಾನಕೆ ಶ್ರೀಹರಿ ನಿಂತ ಮೇಲೆ ಸು
ಜ್ಞಾನದಿಂದ ತನ್ನರಿವುದಕೆ ೨

ನೆಲೆ ಇಲ್ಲದ ಕರ್ಮಾಳಿಗಳ್ ದೇಹದ
ಮಲಿನ ತೊಳೆದು ಶುದ್ಧಿಗೈವುದಕೆ
ಮಲಿನ ತೊಳೆದು ಮನಶುದ್ಧದಿ ಹೃದಯದಿ
ಇಳೆಯರಸನ ನೆಲೆ ಅರಿವುದಕೆ ೩

ಅಗ್ನಿ ಹೋತ್ರಯಜ್ಞಾದಿ ಕಾರ್ಯಗಳ್
ಶೀಘ್ರದಿ ಹರಿಯನು ಕಾಂಬುದಕೆ
ಶೀಘ್ರದಿ ಹರಿಯನು ಕಂಡ ಮ್ಯಾಲೆ ಇವು
ಅಗ್ರಜವಲ್ಲೆಂದರಿವುದಕೆ ೪

ರಂಗನ ಮೂರ್ತಿಯನಿಟ್ಟು ಪೂಜಿಸುವುದು
ಅಂಗದಲ್ಲಿ ತಾನು ಕಾಂಬುದಕೆ

ಅಂಗದಲ್ಲಿ ತಾನು ಕಂಡ ಮೇಲೆ ಇವು
ಅಂಗಡಿ ಎಂತೆಂದರಿವುದಕೆ ೫

ನಿತ್ಯ ನೈಮಿತ್ತಿಕ ಕರ್ಮಗಳೆಲ್ಲವು
ಚಿತ್ತದಿ ಹರಿಯನು ತೋರ್ಪುದಕೆ
ಚಿತ್ತದಿ ಹರಿಯನು ಕಂಡ ಮೇಲೆ ಇವು
ಮರ್ತ್ಯರಿಗೆಸಗಿ ಮೌನಾಗ್ವುದಕೆ ೬

ಚಾಂದ್ರಾಯಣ ವ್ರತ ಉಪವಾಸಗಳು
ಇಂದ್ರಿಯ ನಿಗ್ರಹ ಮಾಡ್ವದಕೆ
ಇಂದ್ರಿಯ ಚಲಿಸದೆ ಮನ ಧೃಡವಾಗಲು
ಹಿಂದಿನ ಹಂಬಲ ತ್ಯಜಿಪುದಕೆ ೭

ಮಧ್ವಶಾಸ್ತ್ರದ ಸಾರತತ್ವ ಮನ
ಶುದ್ಧಿಯಗೈಸುತ ಸುಖಿಪುದಕೆ
ಶುದ್ಧರಾದ ಶ್ರೀ ಗುರು ಕರುಣವು ಅನಿ–
ರುದ್ಧನ ಹೃದಯದಿ ತೋರ್ವದಕೆ ೮

ನೇಮದಿ ದ್ವಾದಶ ನಾಮಧಾರಣೆ ಹರಿ
ಧಾಮದ ದೇಹ ಬೆಳಗ್ವದಕೆ
ಕಾಮಕ್ರೋಧವ ಬಿಡುವುದು ವಳಗಿನ
ಶ್ರೀ ಮನೋಹರನನು ಕಾಂಬುದಕೆ ೯

ಹೊರಗಿನ ವಸ್ತು ದೃಷ್ಟಿಸುವುದು ಶ್ರೀ ಹರಿ
ವರ ವಿಶ್ವರೂಪವ ತಿಳಿವುದಕೆ
ವರ ವಿಶ್ವರೂಪಧ್ಯಾನದಿಂದ ತನ್ನ
ವರ ಬಿಂಬನ ಕಂಡು ನಲಿವುದಕೆ ೧೦

ಅರಗಣ್ಣ ಮುಚ್ಚುವ ಅಭ್ಯಾಸಗಳೆಲ್ಲ
ಸ್ಥಿರಮನವಾಗುವ ಕಾರಣಕೆ

ಸ್ಥಿರಮನ ಶ್ರೀ ಹರಿ ದಯ ಮಾಡಲು ನೇತ್ರ
ತೆರೆಯದೆ ಬಿಂಬನ ಕಾಂಬುದಕೆ ೧೧

ಶಾಸ್ತ್ರದಿ ಪೇಳುವ ಧ್ಯಾನ ಪ್ರಕರಣವು
ಶ್ರೋತ್ರದಿ ಕೇಳುತ ತಿಳಿವುದಕೆ
ಗಾತ್ರದಿ ಶ್ರೀ ಗುರು ಕೃಪೆ ಮಾಡಲು ವಳ
ನೇತ್ರದಿ ಸರ್ವವು ಕಾಂಬುದಕೆ ೧೨

ಪಕ್ಷಮಾಸ ವ್ರತ ಪಾರಾಯಣ ಅಪ–
ರೋಕ್ಷ ಪುಟ್ಟಲು ದಾರಿ ತೋರ್ವದಕೆ
ಶಿಕ್ಷ ರಕ್ಷಕರಾದ ಗುರುಕರುಣವು ಅಪ–
ರೋಕ್ಷ ಪುಟ್ಟಿಸಿ ನಿಜವರಿವುದಕೆ ೧೩

ಪರಿ ಪರಿ ಜನರನು ಸೇವಿಸುವುದು ತನ್ನ
ಪರಮಾರ್ಥತೆ ದೂರಾಗ್ವದಕೆ
ಗುರುಚರಣವ ಸೇವಿಸುವುದು ಶ್ರೀ ಹರಿ
ಅರಘಳಿಗಗಲದೆ ಪೊರೆವುದಕೆ ೧೪

ಡಾಂಭಿಕ ಸಾಧನವೆಲ್ಲವು ಶ್ರೀ ಹರಿ
ಡಿಂಬದೊಳಗೆ ಮರೆಯಾಗ್ವದಕೆ
ನಂಬಿ ಶ್ರೀ ಹರಿ ಗುರು ಚರಣವ ಪೊಗಳ್ವದು
ಡಿಂಬದೊಳಗೆ ಹರಿ ಕಾಂಬುದಕೆ ೧೫

ಕಷ್ಟದ ಕರ್ಮ ವೈರಾಗ್ಯಗಳೆಲ್ಲವು
ಪುಟ್ಟಿಸಲೂ ಭಕ್ತಿ ಜ್ಞಾನಕ್ಕೆ
ಪುಟ್ಟಲು ಭಕ್ತಿ ಜ್ಞಾನ ಪಾಂಡುರಂಗ
ವಿಠ್ಠಲನೊಬ್ಬನ ಪಿಡಿವುದಕೆ ೧೬

ಯಾತ್ರೆ ತೀರ್ಥ ಚರಿಪುದು ಶ್ರೀ ಹರಿ ತನ್ನ
ಗಾತ್ರದಲ್ಲಿರುವನೆಂದರಿವುದಕೆ

ಗಾತ್ರವೆ ಕ್ಷೇತ್ರವೆಂದರಿತ ಮೇಲೆ ಸ
ರ್ವತ್ರದಿ ವಿಠಲನ ಕಾಂಬುದಕೆ ೧೭

ಎಂತೆಂತೋ ಮಾರ್ಗಗಳರಸುವುದು
ಚಿಂತನೆಗೆ ಹರಿ ನಿಲ್ವುದಕೆ
ಚಿಂತನೆಗೆ ಹರಿ ನಿಂತ ಮೇಲೆ ತಾನು
ಶಾಂತನಾಗಿ ಜಡನಾಗ್ವದಕೆ ೧೮

ಹೊರಗಿನ ಸಂಸ್ಕಾರಗಳೆಲ್ಲವು ತನ್ನ
ವಳಗಿನ ಸಂಸ್ಕಾರ ತೆರೆವುದಕೆ
ವಳಗಿನ ಸಂಸ್ಕಾರ ತೆರೆದಮ್ಯಾಲೆ ತನ್ನ
ಇರವರಿತು ಸುಖ ಸುರಿವುದಕೆ ೧೯

ಸಾಸಿರ ಜನ್ಮದ ಸಾಧನಗಳು ಹರಿ
ದಾಸನಾಗಿ ತಾನು ಮೆರೆವುದಕೆ
ದಾಸನಾದ ಮೇಲೆ ಕ್ಲೇಶಕೆ ಸಿಲುಕದೆ
ಶ್ರೀಶನ ಹೃದಯದಿ ಕಾಂಬುದಕೆ ೨೦

ಸಾರತತ್ವವನು ಅರಿವುದು ಗುರು ಮಧ್ವ–
ಚಾರ್ಯರ ಮಾರ್ಗವ ಪಿಡಿವುದಕೆ
ಪ್ರೇರಕ ಗೋಪಾಲಕೃಷ್ಣವಿಠಲ ಮನ
ಸೇರಲು ಕಂಡು ತಾ ನಲಿವುದಕೆ ೨೧

## ೨೨೭

ಕೃಷ್ಣಚಿತ್ತ ಕೃಷ್ಣಚಿತ್ತ ಕೃಷ್ಣಚಿತ್ತ ಎನ್ನಿರೊ ಪ.

ಕೃಷ್ಣಧ್ಯಾನದಿಂದ ಪರಮ ತುಷ್ಟರಾಗಿ ಸುಖದುಃಖ
ಕಷ್ಟ ಕರ್ಮಂಗಳು ಎಲ್ಲ ಅಷ್ಟು ಹರಿಯಾಧೀನವೆಂದು ಅ.ಪ.

ಜನನವಾದ ಕಾಲದಿಂದ
ಇನಿತು ಪರ್ಯಂಕಾರದಲ್ಲಿ
ಅನುಭವಿಸಿದಂಥ ಕರ್ಮ
ಗುಣನಿಧಿಯಾಧೀನವೆಂದು ೧

ಕಷ್ಟದಲ್ಲಿ ಕಳೆದ ಕಾಲ
ಅಷ್ಟರಲ್ಲೆ ಪಟ್ಟ ಸುಖ
ಕೊಟ್ಟ ಹರಿಯು ಎನಗೆ ಎನುತ
ಕೆಟ್ಟ ವಿಷಯ ಮನಕೆ ತರದೆ ೨

ಕಾಮ ಕ್ರೋಧ ಲೋಭ ಮೋಹ
ಆ ಮಹಾ ಮದ ಮತ್ಸರಗಳು
ಕಾಮಿಸಿ ಮನ ಕೆಡಿಸುತಿರಲು
ಶ್ರೀ ಮನೋಹರನಾಟವೆಂದು ೩

ಪೊಂದಿದಂಥ ಮನುಜರಿಂದ
ಕುಂದು ನಿಂದೆ ಒದಗುತಿರಲು
ಇಂದಿರೇಶನ ಕರುಣವೆಂದು
ಒಂದು ಮನಕೆ ತಾರದಂತೆ ೪

ಮಾನ ಅಪಮಾನಗಳು
ದೀನನಾಥನಧೀನವೆಂದು
ಜ್ಞಾನಿಗಳ ವಾಕ್ಯ ನೆನೆದು
ಮಾನಸದ ದುಃಖ ಕಳೆದು ೫

ಹೊಟ್ಟೆ ಬಟ್ಟೆಗೊದಗುವಂಥ
ಅಷ್ಟು ಕಷ್ಟ ಸುಖಗಳೆಲ್ಲ
ವಿಷ್ಣುಮೂರ್ತಿ ಕೊಟ್ಟನೆಂದು
ಮುಟ್ಟಿ ಮನದಿ ಹರಿಯ ಪದವ ೬

ಹರಿಯ ಧ್ಯಾನ ಮಾಡುವುದು
ಹರಿಯ ಧ್ಯಾನ ಅರಿಯುವುದು
ಹರಿಯ ಮೂರ್ತಿ ಕಾಣುವುದು
ಹರಿಯಧೀನವೆಂದು ತಿಳಿದು ೭

ಗುರುಕೃಪೆಯಿಂ ದತ್ತವಾದ
ವರ ಸುಜ್ಞಾನವರೆಯ ತಿಳಿದು
ಹರುಷ ಕ್ಲೇಶಾ ಮನಕೆ ತರದೆ
ಹರಿಯ ಮೂರ್ತಿ ಮನಕೆ ತಂದು ೮

ನಿಷ್ಠೆಯಿಂ ಗೋಪಾಲ
ಕೃಷ್ಣವಿಠ್ಠಲಾಧೀನ ಜಗವು
ಇಟ್ಟ ಹಾಗೆ ಇರುವೆನೆಂದು
ಗಟ್ಟಿಮನದಿ ಹರಿಯ ಪೊಂದಿ ೯

## ೨೨೮

ಪತಿಯೆ ಪರದೇವತೆಯು ಸತಿಯರಿಗೆ ಜಗದಿ
ಮತಿಯರಿತು ಭಜಿಸಿ ಪರಗತಿಯ ಸಾರುವುದು ಪ.

ಉದಯಕಾಲದೊಳೆದ್ದು ಸದಮಲ ಶುದ್ಧಿಯಲಿ
ಪದುಮನಾಭನ ಪಾದ ಮನದಿ ಸ್ಮರಿಸುತಲಿ
ಹೃದಯಸ್ಥ ಹರಿಯೆ ಪತಿ ಹೃದಯದಲಿರುವನು ಎಂದು
ಮುದದಿಂದ ನಮಿಸಿ ಪತಿ ಪದಕರ್ಪಿಸುವುದು ೧

ಆದರದಲಿ ಪತಿಯ ಪಾದವನೆ ತೊಳೆದು ಆ
ಸ್ವಾದೋದಕವ ಪಾನಗೈದು ಸುಖಿಸುವುದು
ವೇದಗೋಚರ ಹರಿಯೆ ನೀ ದಯವ ಮಾಡೆಂದು
ಆದರದಿ ಪತಿಯ ಮನವರಿತು ನುಡಿಯುವುದು ೨

ಸ್ವಚ್ಛದಲ್ಲಿ ಮನದ ತುಚ್ಛ ವಿಷಯವ ತೊರೆದು
ಇಚ್ಛೆಯಿಂದಲಿ ಹರಿಯ ನಾಮಗಳ ಭಜಿಸಿ
ಅಚ್ಯುತಾನಂತ ಗೋವಿಂದನೆನ್ನುತ ಸತತ
ಮಚ್ಛಾದ್ಯನೇಕ ಅವತಾರ ನೆನೆಯುವುದು ೩

ಪತಿಯೆ ಹರಿಯೆಂದರಿತು ಪತಿಯೆ ಗುರುವೆಂದರಿತು
ಪತಿಯ ಪೂಜೆಯನು ಅತಿ ಹಿತದಿ ಗೈಯ್ಯುವುದು
ಪತಿಯಂತರ್ಗತನೆ ಎನ್ನತಿಶಯದಿ ಪೊರೆಯೆಂದು
ಪತಿವ್ರತವ ನಡೆಸುತಲಿ ಹಿತದಿ ಬಾಳುವುದು ೪

ಪತಿಯ ನಿಂದಕಳಿಗೆ ಗತಿಯಿಲ್ಲ ಪರದಲ್ಲಿ
ಅತಿ ಬಾಧೆಪಡಿಸುವನು ಯಮನು ನಿರ್ದಯದಿ
ಪತಿವ್ರತವ ಸಾಧಿಸುವ ಸತಿಯರಿಗೆ ಅನವರತ
ಚ್ಯುತರಹಿತ ಪದವೀವ ಗೋಪಾಲಕೃಷ್ಣವಿಠಲ ೫

## ೨೨೯

ಭಜನೆ ಭಾಗ್ಯ ಒಂದೇ ಸಾಲದೇ । ಹರೀ ಪ.

ಭಜಕರಾದವರಿಗೆ ಹಗಲು ಇರುಳು ಮಾಳ್ಪಾ
ಭಜನೆ ಭಾಗ್ಯ ಒಂದೇ ಸಾಲದೆ ಅ.ಪ.

ಭಕ್ತರೆಲ್ಲರು ಕೂಡೀ ಮುಕ್ತಿಗೊಡೆಯನ ಪಾಡಿ
ಭಕ್ತಿ ಭಾಗ್ಯವ ಬೇಡಿ ನೃತ್ಯವ ಗೈಯುವಾ ೧

ತಾಳ ತಂಬೂರಿ ಗೆಜ್ಜೆ ಮೇಳನದಿಂದಲೀ
ತೋಳುಗಳೆತ್ತಿ ಪಾಡೀ ವೇಳೆಯ ಕಳೆವಂಥಾ ೨

ಹಿಂದೆ ಮುಂದಾಡುವ ನಿಂದಕರಾ ನುಡಿ
ಒಂದು ತಾರದೆ ಮನಕಾನಂದವ ಬೀರುವಾ ೩

ಕಟ್ಟಳೆ ಮೀರದೆ ಬಿಟ್ಟು ಬಿಡದೆ ನಿತ್ಯ
ನಿಷ್ಠೆಯಿಂದಲಿ ಗುರು ಕೊಟ್ಟ ಅಜ್ಞೆ ಎಂಬಾ ೪

ಕಂತುಪಿತನ ಮೂರ್ತಿ ನಿಂತು ಒಳಗೆ ಹೊರಗೆ
ಸಂತಸಪಡಿಸೆ ಏಕಾಂತ ಭಕ್ತರು ಮಾಳ್ಪ ೫

ಸಾಸಿರ ಸತ್ಕರ್ಮ ಮೀಸಲು ಫಲಗಳೂ
ಶ್ರೀಶನ ಧ್ಯಾನಕೆ ತ್ರಾಸಿಗೇರದೆಂಬ ೬

ಪದ್ಧತಿಯಂತೆ ತಂದೆ ಮುದ್ದುಮೋಹನ್ನ ಗುರು
ಪದ್ಮ ಪಾದಕೆ ಸೇರಿ ಪೊದ್ದಿದ ದಾಸ್ಯದ ೭

ತ್ರಿಗುಣದ ಕಲ್ಮಶ ವಗೆದು ದೂರಕೆ ಮನ
ಮಿಗಿಲಾಗಿ ಹರಿಪದ ತಗಲಿಕೊಂಬುವುದಕ್ಕೆ ೮

ನರ್ತಗೈಯ್ಯುತ ಸುತ್ತಿ ಪ್ರದಕ್ಷಿಣೆ
ಎತ್ತಿ ಸ್ವರವ ಹರಿ ಮೂರ್ತಿಯ ಪಾಡುವಾ ೯

ಶ್ರೇಷ್ಠ ಶ್ರೀ ಗೋಪಾಲಕೃಷ್ಣವಿಠ್ಠಲನನು
ಇಟ್ಟು ಹೃತ್ಕಮಲದಿ ಮುಟ್ಟುವೋ ಹರಿ ಪುರ ೧೦

## ೨೩೦

ಹರಿ ಎನ್ನು ಹರಿ ಎನ್ನು ಹರಿ ಎನ್ನು ಮನವೆ ಪ.

ನಿರುತದಿ ಪೊರೆವನ ಮರೆವರೆ ಮನವೆ ಅ.ಪ.

ಸರಿಯುವುದು ಆಯುಷ್ಯ ಸಂಪತ್ತು ನೋಡು
ಬರುತಿದೆ ಮೃತ್ಯುವು ಕರೆಯಲು ನೋಡು
ಹರಿನಾಮ ಯಮದಂಡ ಕಡಿವುದು ನೋಡು
ಪರಮಪುರುಷನ ನೀ ಬಿಡದೆ ಕೊಂಡಾಡು ೧

ಹರಿಯ ನಾಮಾಮೃತ ಸುಜನಕೆ ನೀಡು
ಹರಿಯ ಜ್ಞಾನಾನಂದಾಂಬುಧಿಯೊಳೊಲ್ಯಾಡು
ಹರಿಯ ಮೂರುತಿಯನ್ನು ಮನದಲ್ಲಿ ನೋಡು
ಹರಿಭಕ್ತಿ ಮದವೇರಿ ಕುಣಿ ಕುಣಿದಾಡು ೨

ಹರಿಗುರು ಸ್ಮರಣೆಯ ನಿರುತದಿ ಮಾಡು
ಹರಿಭಕ್ತಿ ಲಾಂಛನ ಮೈಯಲ್ಲಿ ಮೂಡು
ಹರಿದಾಸ ಸಂಪತ್ತಿನೊಳಗೆ ಓಲಾಡು
ಹರಿಯ ಮನದಿ ಕಂಡು ನಲಿನಲಿದಾಡು ೩

ಕಾಮಕ್ರೋಧಗಳನ್ನು ಖಂಡಿಸೀಡ್ಯಾಡು
ನೇಮ ಶ್ರೀ ಗುರು ಆಜ್ಞೆಯಂದದಿ ಮಾಡು
ಯಾಮ ಯಾಮಕೆ ಹರಿನಾಮವ ಪಾಡು
ಶ್ರೀಮದಾನಂದತೀರ್ಥರ ಮತ ನೋಡು ೪

ಶ್ರೀ ಪರಮಾತ್ಮನ ಗುಣವ ಕೊಂಡಾಡು
ಶ್ರೀಪತಿ ಭಕ್ತರ ಸಂಗದಿ ಕೂಡು
ಶ್ರೀ ಪದ್ಮ ಭವ ಹರ ಸ್ತುತಿ ಮಾಡು
ಗೋಪಾಲಕೃಷ್ಣವಿಠ್ಠಲನ ದಯ ಬೇಡು ೫

## ತತ್ವನಿರೂಪಣೆ

### ೨೩೧

ಆಟವಾಡುವ ಕೂಸು ನಾನು । ಕೃಷ್ಣ
ಕಾಟಬಡಿಸುವೆ ನಿನ್ನ ಸಾಧನವ ನೀಡೊ ಪ.

ಗುರುಗಳು ತಂದು ನಿನಗೊಪ್ಪಿಸಿದರೆಲೊ ದೇವ
ಸರಿಯ ಸಖನೆಂದು ಅನುಗಾಲವೂ
ಸಿರಿಯರಸ ಕೇಳಿನ್ನು ಹಿರಿಯನೆ ನೀನಹುದೊ
ಕಿರಿಯತನದಿಂದ ನಾ ಆಟವಾಡುವೆನೊ ೧

ಹೃದಯವೆಂಬೋ ಪುಟ್ಟ ಮನೆಯ ಕಟ್ಟಿ ಅಲ್ಲಿ
ಮುದದಿಂದ ಅಷ್ಟದಳ ಪದುಮ ರಚಿಸಿ
ಒದಗಿ ಬರುತಿಹ ದುಷ್ಟ ಅರಿಗಳನೆ ನುಗ್ಗೊತ್ತಿ
ಪದುಮನಾಭನೆ ನಿನ್ನ ಜೊತೆಯವರೊಡನೆ ೨

ಡಿಂಬದೊಳಗಿರುತಿಹ ಅಂಬರ ಮಧ್ಯದಲಿ
ಬಿಂಬವೆನ್ನುವ ದಿವ್ಯ ಬೊಂಬೆಯನೆ ಇಟ್ಟು
ಸಂಭ್ರಮದಿ ಶೃಂಗರಿಸಿ ಹಾಡಿ ಪಾಡಿ ಕುಣಿದು
ಆಂಬ್ರಣಿನುತ ನಿನ್ನ ನೋಡಿ ದಣಿಯುವೆನೊ ೩

ಪುಂಡರೀಕಾಕ್ಷ ನಿನ್ನ ಕೊಂಡಾಡುವೊ ಬಹಳ
ತಿಂಡಿಯನೆ ನೀಡೆನಗೆ ಅನುಗಾಲವೂ
ಭಂಡು ಮಾಡುವರೊ ಬರಿಕೈಲಿದ್ದರೆ ಸಖರು
ಕಂಡು ಕಂಡೂ ನೀನು ಸಮ್ಮನಿರಬೇಡೊ ೪

ಎಷ್ಟು ಜನ ಸ್ನೇಹಿತರೊ ಈ ಮನೆಯೊಳೆಲೆ ದೇವ
ಪುಟ್ಟನಾಗಿರುವೆ ನಾನೆಲ್ಲರಿಗೆ ಇನ್ನು
ಕೊಟ್ಟರೆ ಸಲಕರಣೆ ಆಟವಾಡುವೆ ಅಳದೆ
ಶ್ರೇಷ್ಠ ಶ್ರೀ ಗೋಪಾಲಕೃಷ್ಣವಿಠ್ಠಲನೆ ೫

## ೨೩೨

## ಉಗಾಭೋಗ

ಆತ್ಮ ಪರಮಾತ್ಮ ತತ್ವ ನೀ ತಿಳಿಯೋ ಪ್ರಾಣಿ
ಈ ತನುವಿನೊಳ್ ದ್ವಯ ಪಕ್ಷಿಗಳಿಪ್ಪುದು
ನೀತಿಯರಿತು ಭಜಿಸೆ ಪ್ರೀತಿಯಿಂ ಸಲಹುವ
ವಾತ ಜನಕ ನಮ್ಮ ಗೋಪಾಲಕೃಷ್ಣವಿಠಲ

## ೨೩೩

ಕಾವಿಯ ಕಲ್ಲಿನ ತಿಲುಕವಿಡಕ್ಕ
ಕಾವಿಯ ಕಲ್ಲಿನ ತಿಲುಕ ಪ.

ಕಾವಿಯ ಕಲ್ಲಿನ ತಿಲುಕವನಿಟ್ಟರೆ
ಕಾಯುವ ಶ್ರೀಹರಿ ಸತತ ಕಾಣಕ್ಕ ಅ.ಪ.

ಕಾವಿಯ ತಿಲುಕವು ಕಲುಷವ ಕಳೆವುದು
ಕಾವಿಯ ತಿಲುಕವು ಕಲಿಬಾಧೆ ಕಳೆವುದು
ಕಾವಿಯ ತಿಲುಕವು ಕೋಪತಾಪಗಳನ್ನು
ಜೀವನ ಬಳಿಯಲ್ಲಿ ಬರಲೀಸದಕ್ಕ ೧

ಕಾವಿಯ ತಿಲುಕವು ಕವಿತೆಯ ಮಾಳ್ಪರಿಗೆ
ಭಾವಶುದ್ಧಿಯನಿತ್ತು ಭಕ್ತಿ ಹೆಚ್ಚಿಸುವುದು
ಕಾವಿಯ ಮಹಿಮೆಯ ಪಾವನ ಗುರು
ಮಧ್ವರಾಯರೆ ಬಲ್ಲರಕ್ಕ ೨

ಕಾವಿಯ ತಿಲುಕವು ಗುರುಭಕ್ತಿ ಕೊಡುವುದು
ಕಾವಿಯ ತಿಲುಕವು ವೈವಿಧ್ಯ ಕಳೆವುದು
ಕಾವಿಯ ತಿಲುಕವು ಕಳೆಯ ಹೆಚ್ಚಿಸುವುದು
ಶ್ರೀ ವರನನು ಮನದಿ ತೊರುವುದಕ್ಕ ೩

ಕಾವಿಯ ತತ್ವ ದಾಸರೆ ಬಲ್ಲರು
ಕಾವಿಯೆ ಭೂಷಣ ದಾಸ ಶಿರಸಿಗೆ
ಕಾವಿ ಇಲ್ಲದ ವ್ಯಾಸ ದಾಸಕೂಟವು ಇಲ್ಲ
ಕಾವಿಯೆ ಸಂಸಾರ ನಾವೆಯಕ್ಕ ೪

ಕಾವಿಯ ಮಹಿಮೆ ತಂದೆ ಮುದ್ದುಮೋಹನ ಗುರು
ಭಾವಿಸಿ ಪೇಳಲು ಅರಿತು ಧರಿಸಿಹೆನು
ಪಾವನ ಗೋಪಾಲಕೃಷ್ಣವಿಠ್ಠಲ ವ್ಯಾಸ
ಕಾವಿಯ ಧರಿಸಿ ಮುನಿಯಾದ ಬದರಿಯಲಿ ೫

## ೨೩೪

ಕೇಳಿರಿ ಕೌತುಕ ಪೇಳುವೆನೀಗ
ಶೀಲ ಶ್ರೀ ಗುರುಗಳ ಕರುಣದಲಿ ಪ.

ವ್ಯಾಳಶಯನ ರಂಗ ತಾಳಿ ಕರುಣಿಸಿದ
ಮೇಲು ಮೇಲು ಭಕ್ತಿಯ ನೀಡುತಲಿ ಅ.ಪ.

ಅರಿಯದ ದೇಶದಿ ಅರಿಯದ ಕಾಲದಿ
ಅರಿಯದವಸ್ಥೆಯ ಅನುಭವವು
ಸಿರಿಯರಸನ ವ್ಯಾಪಾರವಿದಲ್ಲದಡೆ
ನರರಿಗೆ ಸಾಧ್ಯವೆ ನಾಡಿನೊಳು ೧

ಸಂಭ್ರಮದಲಿ ಸಮಾರಂಭವು ಕಲೆತಿರೆ
ಬೆಂಬಿಡದಲೆ ರಕ್ಷಿಸುತಿರಲು
ಕುಂಭಿಣಿಯೊಳು ಸ್ಥಿರವಾದ ಪದವಿಗೆ
ಅಂಬುಜನಾಭನ ಕರುಣವಿದು ೨

ಅಗ್ನಿಗಳೆರಡು ಕಲೆತು ಶಾಂತವಾಗಿ
ಭಗ್ನವಿಲ್ಲದ ಆನಂದ ತೋರೆ
ವಿಘ್ನವಾಗದ ಕಾಲಗಳೊದಗುತ
ಮಗ್ನಗೈಸಿತಾನಂದದಲಿ ೩

ಚಲಿಸದ ವಸ್ತುಗಳ್ ಚಲಿಸಿತು ಮತ್ತೆ
ಚಲನೆಯಿಲ್ಲದೆ ಸುಸ್ಥಿರವಾಯ್ತು

ಬಲು ವಿಚಿತ್ರವು ಭೂತಲದೊಳಗಿದು
ನಳಿನನಾಭನ ಸಮ್ಮತವು ೪

ಬಿಂಬನಾಗಿ ಹೃದಂಬರ ಮಧ್ಯದಿ
ಸಂಭ್ರಮಗೊಳಿಸೆಲೊ ಶ್ರೀ ವರನೆ
ಬೆಂಬಿಡದಲೆ ನಿತ್ಯ ಇಂಬುಗೊಟ್ಟು ಕಾಯೊ
ಬಿಂಬ ಶ್ರೀ ಗೋಪಾಲಕೃಷ್ಣವಿಠ್ಠಲ ೫

## ೨೩೫

ಪಾಲಿಸೆನಗೀ ಜ್ಞಾನ ಪಾಲಸಾಗರಶಾಯಿ
ಶ್ರೀ ಲೋಲ ನೀ ನಿತ್ಯದಿ ಪ.

ಶೀಲಗುಣ ನಿನ್ನ ಏನು ಬೇಡುವುದಿಲ್ಲೊ
ಕಾಲರೂಪನೆ ನಿನ್ನನು । ಇನ್ನು ಅ.ಪ.

ಒಂದು ಅಸ್ವತಂತ್ರ ಒಂದು ಸರ್ವಸ್ವತಂತ್ರ
ಒಂದು ಮನೆಯೊಳಗೆ ಇದ್ದು
ಒಂದೆರಡು ಲೋಕಕ್ಕೆ ಒಂದೆ ದೈವನು ಎನಿಸಿ
ಒಂದೊಂದರಲಿ ಇರುವ
ಒಂದು ಅಪೇಕ್ಷಿಸದೆ ಒಂದೆರಡು ಗುಣದಿಂದ
ಒಂದೆರಡು ಮಾಳ್ಪ ಜಗವ
ಇಂದಿರೇಶನೆ ನಿನ್ನ ಈ ವಿಧದ ವ್ಯಾಪಾರ
ಒಂದೊಂದು ಮನಕೆ ತೋರೋ । ಸ್ವಾಮಿ ೧

ಎರಡು ಮಾರ್ಗಗಳಿಹವು ಎರಡು ಕರ್ಮಗಳಿಂದ
ಎರಡು ವಿಧ ಸಮ ತಿಳಿದರೆ
ಎರಡು ರೂಪಗಳನು ಒಂದಾಗಿ ಭಾವಿಸುತ
ಎರಡೊಂದು ಜೀವ ತಿಳಿದು
ಎರಡು ಫಲ ಅನುಭವಿಸಿ ಎರಡು ಹರಿಗರ್ಪಿಸುತ

ಎರಡು ವಿಧ ಕರ್ತನೆಂದು
ಎರಡು ಎಪ್ಪತ್ತು ಸಹಸ್ರನಾಡಿಗಳಲ್ಲಿ
ಎರಡು ರೂಪದಲಿರುವ ಪೊರೆವ ೨

ಮೂರು ಅವಸ್ಥೆಯಲಿ ಮೂರು ತಾಪವ ಸಹಿಸಿ
ಮೂರು ಮಾರ್ಗದಲಿ ನಡೆದು
ಮೂರೆಂಟು ಇಂದ್ರಿಯವ ಮೂಲರೂಪದಿ ಲಯಸಿ
ಮೂರಾರು ವಿಧ ಭಕ್ತಿಯಲಿ
ಮೂರ್ಯೆದು ನುಗ್ಗೊತ್ತಿ ಮೂರು ಮೂರು ಅರಿಯ
ಮೂರು ಶುದ್ಧಿಯಲಿ ಗೆದ್ದು
ಮೂರಾರು ಎರಡೊಂದು ಖೋಡಿ ಮತಗಳ ಮುರಿಸಿ
ಮಾರುತಿಯ ಮತದಿ ನೆಲಸಿ । ತಿಳಿಸಿ ೩

ಮೀನ ಕೂರ್ಮನೆ ವರಹ ಶ್ರೀ ನಾರಸಿಂಹನೆ
ದಾನಯಾಚಕ ಭಾರ್ಗವ
ವಾನರರಿಗೊಲಿದನೆ ವೇಣುಹಸ್ತರೂಪಿ
ಮಾನವಿಲ್ಲದ ಕಲ್ಕಿಯೆ
ಶ್ರೀನಿವಾಸನೆ ನಿನ್ನ ನಾನಾವಿಧ ರೂಪಗಳು
ನಾನು ವರ್ಣಿಸಲು ಅಳವೆ
ಮಾನಾಭಿಮಾನದೊಡೆಯನೆ ಕೃಷ್ಣ ಕೈಪಿಡಿಯೊ
ಭಾನುಪ್ರಕಾಶ ಹರಿಯೆ । ಸಿರಿಯೆ ೪

ಶಿರದಲ್ಲಿ ಕಿರೀಟ ಫಣೆಯಲ್ಲಿ ತಿಲುಕವು
ಮೆರೆವ ಕುಂಡಲದ ಕದಪು
ಕಿರುನಗೆಯ ಪಲ್ಗಳು ಕೊರಳಲ್ಲಿ ಹಾರಗಳು
ಕರದಲ್ಲಿ ಆಯುಧಗಳು
ಜರಿಯ ಪೀತಾಂಬರವು ಸಿರಿ ಭೂಮಿ ಎಡಬಲದಿ
ಸುರನದಿಯ ಪೆತ್ತಪಾದ
ಸಿರಿರಮಣ ಗೋಪಾಲಕೃಷ್ಣವಿಠ್ಠಲ ಎನಗೆ
ಪರಿ ಪರಿಯ ರೂಪ ತೋರೊ ಸ್ವಾಮಿ ೫

## ೨೩೬

### ಉಗಾಭೋಗ

ಪ್ರಪಂಚದೊಳಗಿದ್ದು ಪ್ರಪಂಚವನೆ ಮೆದ್ದು
ಪ್ರಪಂಚವನೆ ಗೆದ್ದು ಪ್ರಪಂಚವನೆ ಒದ್ದು
ಪ್ರಪಂಚಾತೀತ ನಮ್ಮ ಗೋಪಾಲಕೃಷ್ಣವಿಠ್ಠಲನ
ಪ್ರಪಂಚದೊಳು ಸುಖವ ಪೊಂದುವನೆ ಧನ್ಯ

## ೨೩೭

ವಾಸುದೇವ ಎನ್ನ ಘಾಸಿಗೊಳಿಸದೆ
ನೀ ಸಲಹಲಿ ಬೇಕೊ ಪ.

ಈ ಶರೀರದೊಳು ಮಾಯಾಸಹಿತ–
ದಿ ಶ್ವಾಸನಾಡಿಯೊಳು ವಾಸವಾಗಿಹ ಅ.ಪ.

ಅನಿರುದ್ಧ ದೇಹದಿ ಅನಿರುದ್ಧ ನಾಮದಿ
ಅನುದಿನ ಸಲಹುತಲಿ
ದನುಜನಾದ ಪಾಪಾತ್ಮನ ನಾಭಿಯೊಳ್
ಅನಿಲನಿಂದಲಿ ಶೋಷಿಸುವೆ ಪ್ರದ್ಯುಮ್ನ ೧

ಹೃದಯದಿ ರಕ್ತವರ್ಣದಲಿ ನೀನಿರುತಲಿ ಸಂಕರ್ಷಣನೆನಿಸಿ
ಪದೋಪದಿಗೆ ಪಾಪಾತ್ಮಕನನು ಸುಟ್ಟು
ಸದಮಲ ಹೃದಯವ
ಶುದ್ಧಿಗೈಯ್ಯುವ ೨

ಮಧ್ಯದಿ ನಾಡಿಯ ಮಧ್ಯದ ಹೃದಯ ಪದ್ಮ
ಮಧ್ಯ ಎಂಟು ದಳದಿ
ವಿದ್ಯಮಾನನಾಗಿ ಬಿಂಬನೆನಿಸಿ ನಿನ್ನ
ಪೊದ್ದಿಹ ಜೀವರ ಭಾವನೆಯಂತೆ ಕಾಂಬೆ ೩

ಕೊಳಲನೂದುವ ನಿನ್ನ ಚಲುವರೂಪದ ಕಾಂತಿ
ಪೊಳಲೆಲ್ಲ ತುಂಬುವುದೊ
ನಳಿನಾಕ್ಷಿಯರ ಕೂಡಿ ಥಳಥಳಪ ನಿನ್ನ
ಬಲು ಸಂಭ್ರಮದೊಳು ಸುರರೆಲ್ಲ ಸ್ತುತಿಪರೊ ೪

ಶಿರದಲ್ಲಿ ದ್ವಾದಶ ವರದಳ ಪದ್ಮದಿ
ಸಿರಿ ಸಹಿತದಿ ಇರುವೆ
ವರನಾಡಿ ಮಾರ್ಗದಿ ಅರಿತು ಭಜಿಸೆ ಮುಕ್ತಿ
ಪೊರೆಯುವ ಬಿರುದುಳ್ಳ ಗೋಪಾಲಕೃಷ್ಣವಿಠ್ಠಲ ೫

## ೨೩೮

ಹಚ್ಚಡವಗೆಯ ಬೇಕಮ್ಮಾ । ಬಹುಕೊಳೆ
ಮುಚ್ಚಿ ಕೊಂಡಿಹುದು ನೋಡಮ್ಮಾ ಪ.

ಸ್ವಚ್ಛವ ಮಾಡುತ ಅಚ್ಯುತನಂಘ್ರಿಗೆ ಬೆಚ್ಚಗೆ ಹೊದಿಸಲು
ಇಚ್ಛೆಯ ಮಾಡುತ ಅ.ಪ.

ಏಳು ಪದರವಿಹುದೊ । ಬಹು ಕಾಲದಿಂ
ಬಾಳುತ ಬಂದಿಹುದೂ
ಕಾಲಕಾಲಕೆ ಬದಲಾವಣೆ ಪೊಂದುತ
ಬೀಳುತೇಳುತ ಬೆನ್ನು ಬಿಡದಿರುತಿಹುದೊ ೧

ಹೊರಗಡೆ ನವ ದುರ್ಗಂಧಾ । ಒಳಗಡೆ ಇನ್ನು
ಅರುಹಲಾರದ ಕಲ್ಮಷಾ
ಸುರರೆಲ್ಲ ಇದಕಿನ್ನು ಸರಿ ಇಲ್ಲವೆಂಬೋರು
ಮರುತಾಂತರ್ಯಾಮಿಗೆ ಸರಿತೋರುವಂದದಿ ೨

ಎಪ್ಪತ್ತೆರಡು ಸಾಸಿರಾ । ನೂಲುಗಳಿಂದ
ವಪ್ಪಾಗಿ ಹೊಲಿದ ಪಾರ
ಕಪ್ಪು ಕೆಂಪು ಬಿಳಿ ವಪ್ಪೆ ಬಣ್ಣಗಳಿಂದ
ಸರ್ಪಶಯನ ಸತತ ಸಲಹಿ ಕೊಡುವಂಥ ೩

ನಿರ್ಮಲೋದಕವ್ಯಾವುದೇ । ಇದನೊಗೆಯಲು
ಸಮ್ಮತ ಶಿಲೆಯಾವುದೇ
ಬೊಮ್ಮನೈಯ್ಯನ ಸುಜ್ಞಾನ ಸುಕೊಳದೊಳು
ವಮ್ಮನಸಿನೊಳದ್ದಿ ವದ್ದೆ ಮಾಡುತಲಿನ್ನು ೪

ವ್ಯಕ್ತಿ ವೈರಾಗ್ಯ ಶಿಲೇ । ಶ್ರೀ ಹರಿಗುರು
ಭಕ್ತಿ ಎರಡು ಕೈಗಳೇ
ಎತ್ತಿ ವಗೆದು ಎಲ್ಲಾ ಕಶ್ಮಲ ಕಳೆಯುತ
ಮತ್ತೆ ಜಾಲಾಡಿ ಹಿಂಡಿಕೆ ಮಾಡಿ ಶುಭ್ರದಿ ೫

ಎತ್ತಿ ತಂದು ಕೊಡುವುತಾ । ಮತ್ತೆ ಕೊಳೆ
ಹತ್ತದಂದದಿ ನೋಡುತಾ
ಉತ್ತಮವಾದ ಮೈದಾನದೊಳಗೆ ಹರಹಿ
ನೆತ್ತಿ ಜ್ಯೋತಿಯ ಘನ ದೀಪ್ತಿಯಲ್ಲೊಣಗಿಸು ೬

ಶುದ್ಧ ಸಾತ್ವಿಕವರ್ಣದೀ । ಹೊಳೆವಂಥ ಈ
ಶುದ್ಧ ಹೊದ್ದಿಕೆ ಸ್ಥಾನದೀ
ಮುದ್ದುಕೃಷ್ಣನು ತನ್ನ ಪರಿವಾರ ಸಹಿತದಿ
ಪೊದ್ದಿಕೊಂಡಿಪ್ಪ ಬಲು ಭದ್ರವ ಮಾಡುತ ೭

ಹಿಂದೆ ಮುಂದಿನ ಭಯವೆಲ್ಲಾ । ತಪ್ಪುವುದಿನ್ನು
ಸಂದೇಹಪಡಲು ಸಲ್ಲಾ
ತಂದೆ ಮುದ್ದುಮೋಹನ್ನ ಗುರುಗಳು ಪೇಳಿದ
ಒಂದೆ ವಾಕ್ಯವ ಆನಂದದಿ ನಂಬುತ ೮

ನೂತನ ಹಚ್ಚಡವೂ । ನೂಲುಗಾರ
ಜಾತಿಯರರಿಯರಿವೂ
ಪ್ರೀತಿಯೋಳ್ ಗೋಪಾಲಕೃಷ್ಣವಿಠ್ಠಲ ಕೊಟ್ಟ
ಖ್ಯಾತಿಯೊಳ್ ಬಾಳಿ ಶ್ರೀನಾಥನ್ನ ಪೊಂದುವೋ ೯

## ೨೩೯

ಹರಿಯೆ ಸರ್ವೋತ್ತಮ ಪರದೈವವೆಂತೆಂಬ
ಮರುತ ಮತವ ಸಾರಿರೊ ಪ.

ಗರುವಿಕೆಯನೆ ಬಿಟ್ಟು ಪರಮತವನೆ ಸುಟ್ಟು
ಹರಿಯ ಸೇವಕರಾಗಿರೊ । ಈ ಜಗದೊಳು ಅ.ಪ.

ಪಂಚ ಭೇಧವ ತಿಳಿದು ಪಂಚೇಂದ್ರಿಯವ ಸೆಳೆದು
ಪಂಚ ಮೂರ್ತಿಯ ಭಜಿಸಿರೊ
ಪಂಚ ಸಂಸ್ಕಾರದಿ ಪಂಚಯಜ್ಞವ ರಚಿಸಿ
ಪಂಚ ಮಾರ್ಗವ ಸಾರಿರೊ । ವೈರಾಗ್ಯದಿ ೧

ಎಂಟು ಮದಗಳನಳಿದು ಎಂಟು ಮೂರ್ತಿಯ ತಿಳಿದು
ಎಂಟು ದಳದಿ ಕಾಣಿರೊ
ಎಂಟು ಕರ್ತೃತ್ವವ ಎಂಟು ತತ್ವದಿ ಮಾಳ್ಪ
ಎಂಟಕ್ಷರನ ಪಾಡಿರೊ । ಕೊಂಡಾಡಿರೊ ೨

ಮೂರು ಗುಣಗಳಿಂದ ಮೂರು ಮಾಳ್ಪ ಜಗವ
ಮೂರು ರೂಪವ ನೆನೆಯಿರೊ
ಮೂರು ಮೂರು ಭಕ್ತಿ ಮೂರು ಮಾರ್ಗದಿ ರಚಿಸಿ
ಮೂರು ಲೋಕವ ಸಾರಿರೊ । ಮೂರನೆ ಗೆದ್ದು ೩

ಕಂಡ ದೈವಗಳಿಗೆ ಮಂಡೆಯ ಬಾಗಿಸುತ
ಬೆಂಡು ಆಗಲಿ ಬೇಡಿರೊ
ಹಿಂಡು ದೈವಗಳಿಗೆ ಗಂಡ ಹರಿಯ ಭಜಿಸಿ
ಗಂಡುಗಲಿಯಾಗಿರೊ । ಧೈರ್ಯವ ತಾಳಿ ೪

ಗುರುಗಳಿಂದಲಿ ತತ್ವ ಸರ್ವಕಾಲದಿ ತಿಳಿದು
ಉರ್ವಿಯೊಳಗೆ ಬಾಳಿರೊ
ಸರ್ವಾಂತರ್ಯಾಮಿ ಶ್ರೀ ಗೋಪಾಲಕೃಷ್ಣವಿಠ್ಠಲ
ಸರ್ವಬಿಂಬನೆನ್ನಿರೊ । ಮೂಲರೂಪಿ ೫

## ೨೪೦

## ಉಗಾಭೋಗ

ಹಿಂದಿನ ಊರಿಗೆ ಹಿಂತಿರುಗುವುದಿಲ್ಲ
ಮುಂದಿನ ಊರಿನಾನಂದವ ಕಂಡಿಲ್ಲ
ಇದ್ದಿದ್ದ ಊರೊಳು ಇರುವ ಹಾಗೆ ಇಲ್ಲ
ನಂದ್ಯಾವ ಊರೆಂಬೊದನ್ಯರಿಗಳವಲ್ಲ
ಸಂದಗ್ಧವಾದಂಥ ಇದರ ಅರ್ಥಗಳನು
ತಂದೆ ಮುದ್ದುಮೋಹನರ ಬಿಂಬಶ್ರೀ
ಸುಂದರ ಗೋಪಾಲಕೃಷ್ಣವಿಠ್ಠಲ ಬಲ್ಲ

ಮೂರು ಗುಣಗಳಿಂದ ಮೂರು ಮಾಳ್ಪ ಜಗವ
ಮೂರು ರೂಪವ ನೆನೆಯಿರೊ
ಮೂರು ಮೂರು ಭಕ್ತಿ ಮೂರು ಮಾರ್ಗದಿ ರಚಿಸಿ
ಮೂರು ಲೋಕವ ಸಾರಿರೊ । ಮೂರನೆ ಗೆದ್ದು ೩

ಕಂಡ ದೈವಗಳಿಗೆ ಮಂಡೆಯ ಬಾಗಿಸುತ
ಬೆಂಡು ಆಗಲಿ ಬೇಡಿರೊ
ಹಿಂಡು ದೈವಗಳಿಗೆ ಗಂಡ ಹರಿಯ ಭಜಿಸಿ
ಗಂಡುಗಲಿಯಾಗಿರೊ । ಧೈರ್ಯವ ತಾಳಿ ೪

ಗುರುಗಳಿಂದಲಿ ತತ್ವ ಸರ್ವಕಾಲದಿ ತಿಳಿದು
ಉರ್ವಿಯೊಳಗೆ ಬಾಳಿರೊ
ಸರ್ವಾಂತರ್ಯಾಮಿ ಶ್ರೀ ಗೋಪಾಲಕೃಷ್ಣವಿಠ್ಠಲ
ಸರ್ವಬಿಂಬನೆನ್ನಿರೊ । ಮೂಲರೂಪಿ ೫

## ೨೪೦

## ಉಗಾಭೋಗ

ಹಿಂದಿನ ಊರಿಗೆ ಹಿಂತಿರುಗುವುದಿಲ್ಲ
ಮುಂದಿನ ಊರಿನಾನಂದವ ಕಂಡಿಲ್ಲ
ಇದ್ದಿದ್ದ ಊರೊಳು ಇರುವ ಹಾಗೆ ಇಲ್ಲ
ನಂದ್ಯಾವ ಊರೆಂಬೊದನ್ಯರಿಗಳವಲ್ಲ
ಸಂದಗ್ಧವಾದಂಥ ಇದರ ಅರ್ಥಗಳನು
ತಂದೆ ಮುದ್ದುಮೋಹನರ ಬಿಂಬಶ್ರೀ
ಸುಂದರ ಗೋಪಾಲಕೃಷ್ಣವಿಠ್ಠಲ ಬಲ್ಲ

# ಕಥನಾತ್ಮಕ ಹಾಡುಗಳು

## ೨೪೧

ಉದ್ಭವಿಸಿದ ಕಂಬದಿ । ಶ್ರೀ ನಾರಸಿಂಹ
ಉದ್ಭವಿಸಿದ ಕಂಬದಿ ಪ.

ಉದ್ಭವಿಸಿದ ಬೇಗ ಪದ್ಮಸಂಭವಪಿತ
ಮುದ್ದು ಬಾಲಕನ ಉದ್ಧರಿಸುವೆನೆಂದು ಅ.ಪ.

ದುರುಳನು ಪ್ರಹಲ್ಲಾದನು । ಪರಿಪರಿಯಿಂದ
ಕರಕರಪಡಿಸೆ ಕುವರನ
ನರಹರಿ ಎನ್ನನು ಪೊರೆ ಎಂದು ಮೊರೆಯಿಡೆ
ಸುರರು ನೋಡುತಿರೆ ಭೋರ್ಗರೆಯುತ ಆ ಕ್ಷಣ ೧

ಎಲ್ಲಿರುವನು ಹರಿ ಎಂದು । ದೈತ್ಯನು ಮಗನ
ಇಲ್ಲಿ ಸ್ಥಂಭದಿ ತೋರೆಂದು
ಖುಲ್ಲನು ಹಿಂಸಿಸೆ ಸರ್ವತ್ರದಿ ಶ್ರೀ–
ನಲ್ಲನಿರುವನೆಂದು ಸಾಧಿಸೆ ಭಕ್ತನು ೨

ತನಯನ ನುಡಿ ಉಳಿಸಲು । ನರಹರಿ ಹೊಸಲೊಳ್
ಇನನು ತಾ ಮುಳುಗುತ್ತಿರಲು
ದನುಜನ ತೊಡೆಯ ಮೇಲಿಟ್ಟು ನಖದಲಿ
ಕನಲಿ ಸೀಳಿ ಕರುಳ್ಮಾಲೆ ಧರಿಸುತ ೩

ಸುರರು ಜಯ ಜಯವೆನ್ನುತ । ಪೊಗಳುತ್ತಲಿರೆ
ನರಹರಿ ಉಗ್ರ ತಾಳುತ
ಸುರರು ಬೆದರಿ ಪ್ರಹ್ಲಾದನ ಕಳುಹಲು
ಕರಿಗಿರಿ ನರಹರಿ ಶಾಂತನೆನಿಸಿದ ೪

ತಾಪವಡಗಿತು ಜಗದಲಿ । ವರ ಭಕ್ತನಿಂದ
ಶ್ರೀಪತಿ ಲಕುಮಿ ಸಹಿತಲಿ
ಗೋಪಾಲಕೃಷ್ಣವಿಠ್ಠಲ ಗುರುವರದ
ಈ ಪರಿಯಿಂದ ಭಕ್ತರ ಪೊರೆಯಲು ೫

## ೨೪೨

ಎಷ್ಟು ಪುಣ್ಯ ಮಾಡೀ ಕಂಬ
ವಿಠ್ಠಲನ್ನ ಗುಡಿ ಸೇರಿತೋ ಪ.

ಶ್ರೇಷ್ಠ ಪುರಂದರ ದಾಸರನ್ನು
ಕಟ್ಟಿಸಿಕೊಂಡು ತಾ ಪೂಜೆಗೊಂಡಿತೊ ಅ.

ಎಲ್ಲಾ ಕಂಬಗಳಿದ್ದರೂ ಇಂತು
ಇಲ್ಲೀ ಇದಕೆ ಈ ಖ್ಯಾತಿಯು ಬಂತು
ಬಲ್ಲಿದ ಸುಜನ ವಂದಿಪರಿ
ಪುಲ್ಲನಾಭನ್ನ ಕೃಪೆಯ ಪಡೆದಿತು ೧

ಮಾಯಾಕಾರನು ನೀರನು ತಂದು
ಈಯಲು ಪುರಂದರದಾಸರಿಗಂದು
ನೋಯಿಸೆ ತಿಳಿಯದೆ ಮನಕದ ತಂದು
ನ್ಯಾಯದಿ ಕಟ್ಟಿಸಿ ಹೊಡೆಸಿದನಂದು ೨

ದಾಸರಂತೆ ತಾನು ವೇಷವ ಧರಿಸಿ
ವೇಶ್ಯೆಗೆ ತನ್ನ ಕಂಕಣವನ್ನೆ ಕೊಡಿಸಿ
ತಾಸೊತ್ತಿನಾ ರಾತ್ರೆ ಹೊಡೆದದ್ದ ನೆನಸಿ
ವಾಸುದೇವ ಬೈಲಿಗೆಳೆಸಿದ ಬಿಗಿಸಿ ೩

ಜ್ಞಾನ ಪುಟ್ಟಲು ಹರಿಮಾಯವಿದೆಂದು
ಶ್ರೀನಿವಾಸ ತಾ ವಲಿದನು ಅಂದು

ಆನಂದದಿಂದೊಂದು ಕವನ ಗೈದು
ಶ್ರೀನಿಧೆ ಮುಟ್ಟಿತು ಮುಯ್ಯವಿದೆಂದು ೪

ದಾಸರ ಅಂಗವು ಸೋಕಿದ್ದರಿಂದ
ಶ್ರೀಶನು ಹಗ್ಗದಿ ಬಿಗಿಸಿದ್ದರಿಂದ
ದಾಸರ ಪೆಸರಲಿ ಮೆರೆವುದರಿಂದ
ದೋಷ ಪೋಯಿತು ಕಂಬಕೆ ಭವ ಬಂಧ ೫

ಹಿಂದೆ ಕಂಬದಿ ನರಹರಿ ಅವತರಿಸೆ
ಅಂದಿನ ಕಂಬವೆ ಈಗಿಲ್ಲಿ ಉದಿಸೆ
ಸಿಂಧುಶಯನನ್ನ ದಾಸತ್ವ ವಹಿಸೆ
ಬಂದಿತು ವಿಠಲನ್ನ ಗುಡಿಯನಾಶ್ರೈಸೆ ೬

ದಾಸರ ದರುಶನ ಕರ್ಮ ಕಳೆವುದು
ದಾಸರ ವಾಕ್ಶ್ರವಣ ಜ್ಞಾನವೀಯುವುದು
ದಾಸರ ಉಪದೇಶ ಹರಿಯ ತೋರುವುದು
ದಾಸರ ಸ್ಪರ್ಶವು ಮುಕ್ತಿಗೊಯ್ಯುವುದು ೭

ಕಂಭವೆ ಸಾಕ್ಷಿಯು ಈ ಕಲಿಯುಗದಿ
ಡಾಂಭಿಕ ಜನರಿಗೆ ತಿಳಿಯದು ಹಾದಿ
ಬೆಂಬಿಡದೆ ಹರಿ ಕಾಯುವ ಭರದಿ
ಇಂಬುಗೊಟ್ಟು ತನ್ನ ನಿಜ ದಿವ್ಯ ಪುರದಿ ೮

ದಾಸರ ಮಾರ್ಗವೆ ಸುಲಭವೆಂತೆಂದು
ದಾಸರ ಕೃಪೆ ದ್ವಾರ ವಲಿಯುವೆನೆಂದು
ದಾಸರ ದೂಷಿಸೆ ಗತಿ ಇಲ್ಲೆಂದು
ಶ್ರೀಶ ತಾನಿಲ್ಲೀ ನಿಂತನು ಬಂದು ೯

ಶ್ರೀ ರಮಾಪತಿ ಓಡಿ ಬಂದ ನಿಲ್ಲೆಂದೂ
ದ್ವಾರಕ ಪುರದೊಂದು ಕಂಭವೆ ಬಂದು

ಸೇರಿತೊ ವಿಠಲನ ಮಂದಿರವಂದು
ಸೂರೆಗೈದರೊ ಖ್ಯಾತಿ ದಾಸರು ಬಂದು ೧೦

ನಿಜದಾಸರಂಗಸಂಗದ ಫಲದಿ
ರಜತದ ಕಟ್ಟಿನಿಂ ಮೆರೆದಿತು ಜಗದಿ
ಸುಜನರ ಸಂಗದಿ ಮುಕುತಿಯ ಹಾದಿ
ಭುಜಗಶಯನ ತೋರುವ ನಿರ್ಮಲದಿ ೧೧

ತತ್ವವನಿದರಿಂದ ತಿಳಿವುದು ಒಂದು
ಉತ್ತಮತ್ವವು ಜಡಕಾಯಿತು ಬಂದು
ಉತ್ತಮರಾ ಪಾದ ಸೋಂಕಲು ಅಂದು
ವ್ಯರ್ಥವಾಗದು ಹರಿಭಕ್ತರೆ ಬಂಧು ೧೨

ಪಾಪ ನಿರ್ಲೇಪವಾಗೋದು ವಿಠ್ಠಲನ್ನ
ಆಪಾದ ಮೌಳಿಯ ರೂಪ ದರುಶನ್ನ
ಈ ಪರಿ ಖ್ಯಾತಿ ಪೊಂದಿತು ಕಂಬ ಘನ್ನ
ಗೋಪಾಲಕೃಷ್ಣವಿಠ್ಠಲ ಸುಪ್ರಸನ್ನ ೧೩

## ೨೪೩

ಒಂದು ದಿನ ನಾರದಮುನಿ ಗೋಕುಲದಿ
ಇಂದಿರೇಶನ ಲೀಲೆಯಾ
ನಿಂದು ನಭದಲಿ ನೋಡುತಾ । ಮೈಯುಬ್ಬಿ
ಬಂದನಾ ವೈಕುಂಠಕೆ ೧

ಸಿರಿದೇವಿ ಸಖಿಯರೊಡನೆ । ವನದಲ್ಲಿ
ಪರಿಪರಿಯ ಕ್ರೀಡೆಯೊಳಿರೇ
ಅರವಿಂದ ನಯನೆಯನ್ನೂ । ಕಂಡನಾ
ಸುರಮುನಿಯು ಸಂಭ್ರಮದಲೀ ೨

ಜಗನ್ಮೋಹನಾಕಾರಳೂ । ಶ್ರೀ ಹರಿಯ
ಜಗ ಸೃಷ್ಟಿಗನುಕೂಲಳೂ
ಬಗೆ ಬಗೆಯವತಾರಳೂ । ಕ್ಷಣ ಹರಿಯ
ಅಗಲದಂತಿರುತಿಪ್ಪಳೂ ೩

ಹರಿಗೆ ಗುಣದಿಂ ಕಿರಿಯಳೂ । ಮತ್ತೆಲ್ಲ
ಪರಿಯಲ್ಲಿ ಹರಿಗೆ ಸಮಳೂ
ಶರಣೆಂದವರ ಕಾಯ್ವಳೂ । ಬೊಮ್ಮಾದಿ
ಸುರರ ಸೃಜಿಸುವ ಶಕ್ತಳೂ ೪

ನಾಕ ಸ್ತ್ರೀಯರನೆ ಕೂಡೀ । ವನದಲ್ಲಿ
ಲೋಕನಾಯಕಿ ರಮಿಸುತಾ
ಶ್ರೀಕಾಂತನಗಲದವಳೂ । ಮುನಿಗೆ ತ
ನ್ನೇಕರೂಪವ ತೋರ್ದಳೂ ೫

ನೊಡಿ ನಮಿಸಿದನು ಸಿರಿಯಾ । ಹರಿಗುಣವ
ಹಾಡಿ ಪಾಡಿದನು ಮೈಯ್ಯಾ
ಮೂಡೆ ರೋಮಾಂಚ ಕೈಯ್ಯಾ । ಮುಗಿಯುತಲಿ
ನೋಡಿದನು ಸಿರಿಯ ದಣಿಯಾ ೬

ಪಲ್ಲವಾಧರೆ ನಗುತಲಿ । ತನ್ನ ಕರ
ಪಲ್ಲವದಿ ಕೃಪೆಯ ಮಾಡೀ
ಎಲ್ಲಿಂದ ಬಂದೆ ಮುನಿಪಾ ವಿಷಯವೇ
ನೆಲ್ಲ ಪೇಳೆಂದೆನ್ನಲೂ ೭

ಏನ ಪೇಳುವೆನೆ ತಾಯೆ । ನಿನ ಪತಿಯ
ನಾನಾ ವಿಧ ಚರ್ಯೆಗಳನೂ
ನಾನರಿಯಲಾರೆ ನಮ್ಮಾ । ನವನೀತ
ಚೋರನಾಗಿರುವನಮ್ಮಾ ೮

ತಿಳಿಯುದಕ ಯಮುನೆ ಮಳಲು । ದಿಣ್ಣೆಯಲಿ
ಕೊಳಲೂದೆ ಹರಿ ಕೇಳಲೂ
ಮೊಳೆತವಾ ಬಂಜೆ ಮೋಟೂ । ಮೃಗಪಕ್ಷಿ
ಕುಳಿತು ಮೈಮರೆತು ಕೇಳೇ ೧೫

ಓಡಿ ಬರುತಲಿ ತುರುಗಳೂ । ಬಾಲವ
ಲ್ಲಾಡಿಸದೆ ಕಣ್ಣುಮುಚ್ಚಿ
ಮಾಡಿಟ್ಟ ಪ್ರತಿಮೆಯಂತೆ । ಕಾಣುತಿರೆ
ಆಡಿಸದೆ ಸರ್ಪ ಹೆಡೆಯಾ ೧೬

ಶೃಂಗಾರ ಕೊಳಲನೂದೆ । ಜಡ ಚೇತ
ನಂಗಳಾಗುತ ಚಿಗುರಲೂ
ಅಂಗ ಮರೆಯುತ ಜೀವಿಗಳ್ । ಜಡದಂತೆ
ಕಂಗಳನುಮುಚ್ಚಿನಿಲ್ಲೆ ೧೭

ಅಷ್ಟ ಐಶ್ವೈರ್ಯದಾತಾ । ನಾರಿಯರ
ತುಷ್ಟಿಪಡಿಸುತಲಿ ಖ್ಯಾತಾ
ಶಿಷ್ಟ ಜನರನು ಪೊರೆಯುತಾ । ರಕ್ಕಸರ
ಹುಟ್ಟಡಗಿಸುವನು ವಿಹಿತಾ ೧೮

ಪೇಳಲಳವಲ್ಲವಮ್ಮಾ । ಶ್ರೀ ಹರಿಯ
ಲೀಲೆ ಜಾಲಗಳ ಬ್ರಹ್ಮಾ
ನೀಲಗಳರರಿಯರಮ್ಮಾ । ಆನಂದ
ತಾಳಿದೆನು ಕೇಳೆ ರಮ್ಮಾ ೧೯

ಇಷ್ಟು ಗೋಕುಲದಿ ನೋಡೀ । ಕಾಣದಿ
ನ್ನೆಷ್ಟೋ ಎನ್ನುತಲಿ ಪಾಡೀ
ಗುಟ್ಟು ಪೇಳಲು ಬಂದೆನೂ । ಸಿರಿದೇವಿ
ಸಿಟ್ಟಾಗಬೇಡವಿನ್ನೂ ೨೦

ಪರನಾರಿಯರ ಬೆರೆಯುತಾ । ಶ್ರೀ ಕೃಷ್ಣ
ಮರೆತು ನಿನ್ನನು ಸುಖಿಸುತಾ
ಇರುವ ಪರಿ ಯೊಚಿಸಮ್ಮಾ । ಆಜ್ಞೆ ಕೊಡು
ತ್ವರಿತದಲಿ ಪೋಪೆನಮ್ಮಾ ೨೧

ಹರಿಚರ್ಯವೆಲ್ಲ ಕೇಳಿ । ಶ್ರೀ ತರುಣಿ
ಪರಮ ಆನಂದ ತಾಳೀ
ಬೆರಗಾದ ಪರಿತೋರುತಾ । ಮುನಿವರಗೆ
ಪರಿ ಏನು ಮುಂದೆ ಎನಲೂ ೨೨

ಸನ್ನುತಾಂಗನ ಕೂಡಲೂ । ಭೂತಳದಿ
ಇನ್ನೇನುಪಾಯವೆನಲೂ
ಪನ್ನಂಗ ವೇಣಿ ಉದಿಸೂ । ಭೀಷ್ಮಕಗೆ
ಇನ್ನು ನೀ ಕುವರಿ ಎನಿಸೂ ೨೩

ಎಂತೆಂತು ಹರಿಯಚರ್ಯೆ । ಸಿರಿಕಾಂತೆ
ಅಂತಂತು ನಿನ್ನ ಚರ್ಯೆ
ಸಂತೋಷಪಡಿಸಿ ಎಮ್ಮಾ । ಸಲಹಮ್ಮ
ಶಾಂತೆ ನಾ ಪೋಪೆನಮ್ಮಾ ೨೪

ಮತ್ತೊಮ್ಮೆ ನೋಳ್ಪೆನೆಂದೂ । ಗೋಕುಲದ
ಹತ್ತಿರದಿ ನಭದಿ ನಿಂದೂ
ಸುತ್ತು ಮುತ್ತಲೂ ನೊಡಲೂ । ಸಿರಿದೇವಿ
ವ್ಯಾಪ್ತಳಾಗಲ್ಲಿ ಇರಲೂ ೨೫

ವನದಿ ಹರಿವಕ್ಷದಲ್ಲೀ । ಸಿರಿದೇವಿ
ಘನ ವೇಣೂರೂಪದಲ್ಲೀ
ವನಲಕ್ಷ್ಮೀರೂಪದಲ್ಲೀ । ಗೋಪಿಯರ
ಪ್ರಣಯ ಪ್ರಕಾಶದಲ್ಲೀ ೨೬

ಎಲ್ಲೆಲ್ಲಿ ಸೌಂದರ್ಯವೋ । ಉಲ್ಲಾಸ
ಎಲ್ಲೆಲ್ಲಿ ವೈಭವಗಳೋ
ಎಲ್ಲೆಲ್ಲಿ ಹರಿಲೀಲೆಯೋ । ಸಿರಿದೇವಿ
ಅಲ್ಲಲ್ಲಿ ತಾನಿರುತಿರೆ ೨೭

ಬೆರಗಾದ ನೋಡಿ ಮುನಿಪಾ । ಸಿರಿ ಹರಿಯ
ಚರಿಯ ನೋಡಿದ ಪ್ರತಾಪಾ
ಧರೆಗಿಳಿದು ನಮಿಸಿ ನಿಂದಾ । ಕ್ಷಮಿಸೆಂದು
ಸಿರಿ ಹರಿಗೆ ಸ್ತೋತ್ರಗೈದಾ ೨೮

ಸಿರಿಹರಿ ವಿಯೋಗವಿಲ್ಲಾ । ಆವಾವ
ಪರಿ ಕಾಲ ದೇಶದಲ್ಲೀ
ಅರಿಯದಜ್ಞಾನ ನುಡಿಯಾ । ಮನ್ನಿಸೋ
ಕರುಣಾಳು ಕಳೆಯೊ ಮಾಯಾ ೨೯

ಜಯ ಜಯತು ಜಗದೀಶನೆ । ಲಕ್ಷ್ಮೀಶ
ಜಯ ಜಯತು ಸುರವಂದ್ಯನೇ
ಜಯ ಜಯತು ದುಷ್ಟಹರಣ । ಗುಣ ಪೂರ್ಣ
ಜಯ ಜಯತು ಶಿಷ್ಟ ಶರಣಾ ೩೦

ಸ್ತುತಿಸುತಂಬರಕಡರಿದಾ । ಸುರಮುನಿಪ
ಚ್ಯುತದೂರನತಿ ವಿನೋದಾ
ಪತಿತರನು ಕಾಯ್ವ ಮೋದಾ । ಸುಖತೀರ್ಥ
ಯತಿಗೊಲಿದು ಉಡುಪಿಲ್ನಿಂದಾ ೩೧

ಅಪಾರ ಮಹಿಮ ಶೀಲಾ । ಸರ್ವೇಶ
ಗೋಪಿಕಾ ಜನ ವಿಲೋಲಾ
ಆಪನ್ನ ಜನರ ಪಾಲ । ಗುರುಬಿಂಬ
ಗೋಪಾಲಕೃಷ್ಣವಿಠಲಾ ೩೨

## ೨೪೪

ನಿಜ ಭಕ್ತಿ ತೋರಿದನು ಜಗಕೆ ಕೃಷ್ಣಾ
ವಿಜಯನಾ ಸತಿಯರಿಬ್ಬರ ನೆವದಿ ಮುದದೀ ಪ.

ಹಸ್ತಿವರದನು ತಂಗಿಯರ ನೋಡಬೇಕೆಂದು
ಹಸ್ತಿನಾಪುರಕೆ ಬಂದ್ಹರುಷದಿಂದ
ಚಿತ್ತ ನಿರ್ಮಲದಿ ಪಾಂಡವರು ಪೂಜೆಸೆ ನಲಿದು
ಭಕ್ತಿ ಭಾವಕೆ ಮೆಚ್ಚಿ ದ್ರೌಪತಿಗೆ ವಲಿದೂ ೧

ಅಣ್ಣನೆಂಬುವ ಭಾವದಲಿ ಸುಭದ್ರೆಯು ಇರಲು
ಘನ್ನ ಮಹಿಮನು ಎಂದು ದ್ರೌಪತಿಯು ತಿಳಿದೂ
ಸ್ವರ್ಣಗರ್ಭನ ಪಿತನು ಈರೇಳು ಜಗದೊಡೆಯ
ಎನ್ನ ಭಾಗದ ದೈವ ಸಲಹೆಂದು ನುತಿಸೇ ೨

ಅಂತರಂಗದ ಭಕ್ತಿ ಆನಂದಮಯ ತಿಳಿದು
ಕಂತುಪಿತ ಕರಗಿದಾ ಮಮತೆ ಪ್ರೇಮದಲಿ
ಶಾಂತಚಿತ್ತಳೆ ತಂಗಿ ದ್ರೌಪತಿಯೆ ಬಾರೆನುತ
ಇಂತು ನುಡಿನುಡಿಗೆ ಆಡಲು ಕರುಣೆಯಿಂದ ೩

ಕೇಳಿ ಇದನು ಸುಭದ್ರೆ ತಾಳಲಾರದೆ ಅಣ್ಣ
ಬಾಲೆ ನಿಜ ತಂಗಿ ನಾನಿರಲು ಐವರಿಗೆ
ಲೋಲೆಯಾದವಳೆ ಬಲು ಮೇಲಾದವಳೆ ಎಂದು
ಬಾಲಚಂದ್ರನ ಪೋಲ್ವ ಮುಖ ಬಾಡಿಸಿರಿಲೂ ೪

ಕಂಡು ಕಮಲಾಕಾಂತ ವಡಹುಟ್ಟಿದಳ
ಬೆಂಡಾದ ತೆರವ ಪೇಳೆನಲು ಖತಿಯಿಂದಾ
ಪುಂಡರೀಕಾಕ್ಷ ಎನ್ನುಳಿದು ನಿಜ ಭಾವದಲಿ
ಕಂಡವರ ಸುತೆ ನಿನಗೆ ಮಿಗಿಲಾದಳೆನಲೂ ೫

ಸಚ್ಚಿದಾನಂದ ವಿಗ್ರಹ ನಗುತ ನೆನೆದನೊಂ
ದಚ್ಚರಿಯ ಕೌತುಕವ ತೋರ್ವೆನೆಂದೂ
ಅಚ್ಛಿದ್ರ ಅಕ್ಲೇಶ ಆನಂದಮಯ ತಾನು
ಕಚ್ಚಿ ಬೆರಳನು ಕ್ಲೇಶ ಪಡುತ ವರಲಿದನೂ ೬

ಬಾರಮ್ಮಾ ತಂಗಿ ಸುಭದ್ರೆ ಬೆರಳಲಿ ರಕ್ತ
ಸೋರುತಿದೆ ಬೇಗೊಂದು ಚಿಂದಿ ತಾರೆ
ತಾರೆನಲು ಗಡಬಡಿಸಿ ಮನೆಯಲ್ಲ ಹುಡುಕತಲಿ
ತೋರದಲೆ ಒಂದ್ದರಕು ಬಟ್ಟೆ ಕಂಗೆಡುತಾ ೭

ಎತ್ತ ನೋಡಿದರತ್ತ ಪಟ್ಟೆ ಪೀತಾಂಬರವು
ಉತ್ತಮಾ ವಸನ ಕಂಚುಕ ಮಕುಟ ಮೆರೆಯೇ
ಚಿತ್ರದಾ ವಸನ ಅರಮನೆಯಲ್ಲಿ ತುಂಬಿರಲು
ಮತ್ತದರ ಮಮತೆ ಅಣ್ಣನಿಗೆ ಅಧಿಕವಾಗೆ ೮

ಬರಲಿಲ್ಲ ಸುಭದ್ರೆ ಬಾರಮ್ಮ ದ್ರೌಪದಿಯೆ
ವರ ತಂಗಿ ಬೇಗ ಕೊಡೆ ಹರಕು ಬಟ್ಟೆ
ಸುರಿಯುತಿದೆ ರಕ್ತ ಬೆರಳಿಂದ ನೋಡೆಂದನಲು
ಕಿರುನಗೆಯ ನಗುತ ಶರಗ್ಹರಿದು ಕಟ್ಟಿದಳೂ ೯

ಬಂದಳಾ ವೇಳೆಯಲಿ ಸುಂದರಾಂಗಿ ಸುಭದ್ರೆ
ನಿಂದು ನೋಡಿದಳೂ ದ್ರೌಪತಿಯ ಕೃತಿಯಾ
ಮಂದಗಮನೆಯು ನಾಚಿ ಮೊಗವ ತಗ್ಗಿಸಿ ನಿಲಲು
ಇಂದಿರೇಶನು ಇದರ ವಿವರ ತೋರಿದನು ೧೦

ಬೆರಗಾದ ಪರಿತೋರಿ ಸಿರಿಕೃಷ್ಣ ಕೇಳಿದನು
ಜರತಾರಿ ಸೆರಗ್ಹರಿದು ಕಿರುನಗೆಯ ನಕ್ಕಾ
ಪರಿ ಏನೆ ಎಲೆ ತಂಗಿ ನರಳುವೋ ಎನ ನೋಡಿ
ಪರಿಹಾಸ್ಯವಾಯಿತೆ ನಿನಗೆ ಎಂತೆಂದಾ ೧೧

ಅಣ್ಣಯ್ಯ ನಿನಗೆ ಮಿಗಿಲಾಯಿತೇ ಈ ಶೆರಗು
ಎನ್ನ ಅಭಿಮಾನ ಕಾಯುವ ದೈವ ನೀನೂ
ಘನ್ನ ಮಹಿಮಾಂಗ ನಿನಗಿನ್ನು ಕ್ಲೇಶಗಳುಂಟೆ
ನಿನ್ನ ಲೀಲೆಗೆ ಹರುಷ ಉಕ್ಕಿತೆಂದನಲೂ ೧೨

ಹೇ ನಾರಿ ನಾನನಾಥರಿಗೆ ನಾಥನು ಮುಂದೆ
ನೀನಿತ್ತ ವಸನ ಅಕ್ಷಯವಾಗಲೆಂದು
ಶ್ರೀನಾಥ ದ್ರೌಪದಿ ಸುಭದ್ರೆಯ ಮನ್ನಿಸಿ ಮೆರೆದ
ಜ್ಞಾನಿ ಜನಪ್ರಿಯನು ಗೋಪಾಲಕೃಷ್ಣವಿಠಲಾ ೧೩

## ೨೪೫

ನೋಡಿದ್ಯಾ ಕೃಷ್ಣನ ರೂಪವ । ಪ್ರತಾಪವ
ಬೇಡಿದುದಿತ್ತುಕಾವ ಪ.

ವೃತ್ತ :

ಬಾಲಾರೂಪನು ಕೃಷ್ಣಗೋಕುಲದಲಿ ಲೀಲೆಯ ತೋರುತ್ತಲೀ
ಕಾಲಕಾಲದಿ ಗೋಪಿ ಬಾಲೆಯರಿಗೆ ಜಾಲವ ತೊರುತ್ತಲೀ
ನೀಲಾಕುಂತಳ ಕೊಳಲ ಪಿಡಿದು ವನದಿ ಲೋಲಾಕ್ಷಿಯರ ಕೂಡುತ
ಲೀಲೆ ಮಾಳ್ಪನು ನೀರೆ ಬಾರೆ ನೋಡೋಣವೆ

ಪದ:

ಶರದ ಚಂದ್ರನ ಅರ್ಧರಾತ್ರಿಯು ಕಾಂತಿಪೂರ್ತಿಯು
ವನದ ವೈಭವ ಶ್ರೀಯು
ಅರವಿಂದನಾಭನು ವನದಲ್ಲಿ ಯಮುನ ದಡದಲ್ಲಿ
ಕೊಳಲನೂದುತಲಲ್ಲಿ
ಪರಿಪರಿ ಆನಂದಪಡುತಿರೆ ಸುಖ ಬೆರೆತಿರೆ
ಸುರರು ನೋಡುತ್ತಲಿರೆ
ಅರವಿಂದ ಮುಖಿಯರು ಕೇಳುತ್ತ ಮೈಮರೆಯುತ್ತ
ಕೃಷ್ಣನಿದ್ದಲ್ಲಿ ಬರುತ ೧

ವೃತ್ತ :

ಕೊಳಲ ಧ್ವನಿಯ ಕೇಳಿ, ಗೋಪಾಂಗನೆಯರು ಪೊಳಲೊಳು ತಂತಮ್ಮಯ
ಎಳೆಯ ಮಕ್ಕಳನೆಲ್ಲ ಬಿಟ್ಟು ನಳಿನಾಕ್ಷನಿದ್ದಲ್ಲಿಗೆ
ಸೆಳೆದ ಮನ ಹಿಂತಿರುಗಿಸದಲೆ ನಳಿ ತೋಳ ಆಭರಣಗಳ್
ಒಲವಿನಿಂ ವ್ಯತ್ಯಸ್ಥದಿಂದ ತೊಡುತ ಘಳಿಲನೆ ಬಂದರೊನಕೆ

ಪದ :

ಬಂದ ಗೋಪಿಯರನೆ ನೋಡಿದ ಮಾತಾಡಿದ
ನಲಿದಾಡುತ ನಿಂದ
ಇಂದೇಕೆ ಈ ಪರಿ ಬಂದಿರೆ ಎಲೆ ಸುಂದರೆ ನಿಮ್ಮ
ಪತಿಗಳ್ ಬಯ್ಯುವರೆ
ಕಂದರು ನಿಮ್ಮನು ಕಾಣದೆ ದಿಕ್ಕು ತೋರದೆ
ರೋದಿಪರಲ್ಲೆ ಬರಿದೆ
ಬಂದು ನೋಡಿದಿರೆನ್ನನು. ಈಗ ಪೋಗಿರಿ ಬೇಗ
ಸಾಕು ನಿಮ್ಮಯ ಸಂಗ ೨

ವೃತ್ತ :

ಪುಲ್ಲನಾಭನೆ ನಿನ್ನ ನಂಬಿ ನಮ್ಮ ವಲ್ಲಭರ ತೊರೆಯುತ್ತಲೀ
ಎಲ್ಲ ಹಂಬಲ ಬಿಟ್ಟು ಈಗ ನಿನ್ನಲ್ಲಿ ಬಂದಿಪ್ಪೆವೊ
ಸೊಲ್ಲು ಸೊಲ್ಲಿಗೆ ನಿನ್ನ ನೆನೆದು ನಾವು ಶ್ರೀನಲ್ಲ ಪೊರೆ ಎನ್ನುತ
ಇಲ್ಲಿಗೈತಂದ ಎಮ್ಮನೀಗ ನಿಲ್ಲದೆ ಪೋಗೆಂಬರೆ

ಪದ :

ನಂಬಿದ ಭಕ್ತರ ಬಿಡುವರೆ ಪೊರೆಯದಿರುವರೆ
ಪೋಗೆಂದು ಪೇಳುವರೆ
ಅಂಬುಜಾಕ್ಷನೆ ಕಾಮನಂಬಿಗೆ ಬಿದ್ದೆವು ಈಗೆ
ನೀ ಸಲಹದೆ ಪೋಗೆ

ಬೆಂಬಿಡಲಾರೆವೊ ಹರಿ ನಿನ್ನ ಪೋಷಿಸೊ ಘನ್ನ
ನಂಬಿಪ್ಪೆವೊ ನಿನ್ನ
ಕಂಬುಕಂಧರ ನಿನ್ನ ಸಂಗಕೆ ಆಯಿತು ಬಯಕೆ
ಬಂದೆವೊ ಅಂಗಸುಖಕೆ ೩

ವೃತ್ತ :

ವನಿತಾಮಣಿಯರ ಮನದ ದೃಢಕೆ ವನಜಾಕ್ಷ ಒಲಿಯುತ್ತಲಿ
ಮನಸಿಜಾಪಿತನು ತನ್ನ ಲೀಲೆ ಮನವೊಪ್ಪಿ ತೋರುತಲಿ
ಘನ ನೀಲವರ್ಣ ಕೃಷ್ಣ ಶೋಭಿಸುತಿರೆ ವನಜಾಕ್ಷಿಯರ ಮಧ್ಯದಿ
ಮನದಲ್ಲಿ ಪುಟ್ಟಿತಾಗ ಮದ ಗರ್ವ ಸಮರ್ಯಾರು ನಮಗೆನ್ನುತ

ಪದ :

ಹರಿ ತಿಳಿದ ಸತಿಯರ ಗರ್ವವ ಇದಕುಪಾಯವ
ಒಂದು ನೆನೆದ ಶ್ರೀದೇವ
ಅರವಿಂದನಾಭನು ಅವರಿಗೆ ಕಾಣದೆ ಪೋಗೆ
ಕಂಗೆಡುತಲಿ ಕೂಗೆ
ಸರಸಿಜಾಕ್ಷನು ನಮ್ಮ ತೊರೆದನು ಬಿಟ್ಟು ಪೋದನು
ಹುಡುಕೋಣ ಬಾರೆ ಇನ್ನು
ಹರಿಣಾಕ್ಷಿಯರ ವನ ವನದಲ್ಲಿ ಹರಿಯನಲ್ಲಲ್ಲಿ
ಅರಸುತಲಿ ಪೋಗಲಲ್ಲಿ ೪

ವೃತ್ತ :

ಕಂಡರಲ್ಲಿ ಹರಿಯ ಹೆಜ್ಜೆ ಗುರುತು ಬೆಂಡಾಗಿ ಬಾಲೆಯರು
ಪುಂಡರೀಕಾಕ್ಷ ಒಬ್ಬಳನೆ ಕರೆದುಕೋಂಡೀಗ ಬಂದಿಪ್ಪನೆ
ಮಂಡೆ ನೇವರಿಸಿ ಪೂ ಮುಡಿಸಿಹ ಶುಂಡಾಲ ವರದ ಹರಿ
ಕಂಡೆನೆ ಕಾಲಿನ್ಹೆಜ್ಜೆ ಗುರುತು ಭಂಡಾಳು ಅವಳ್ಯಾವಳೆ

ಪದ :

ಇಂತೆಂದು ಬರುತಿರೆ ವನದಲ್ಲಿ ಸುದತಿಯರಲ್ಲಿ
ಸಂಪಿಗೆ ಮರದಲ್ಲಿ
ಕಾಂತನ ಕಾಣದೆ ಕೊರಗುತ್ತ ತೂಗಾಡುತ ಬಹು
ಕಷ್ಟವ ಪಡುತ
ಇಂತಿದ್ದ ಸುದತಿಯ ತಾವ್ ಕಂಡು ಇಳುಹಿಸಿಕೊಂಡು
ಕೇಳೆ ನುಡಿದಳು ದುಃಖಗೊಂಡು
ಕಾಂತ ಕೃಷ್ಣನು ಎನ್ನ ಕರತಂದ ಪೂವ ಕೊಯ್ಯೆಂದ
ಇಂತು ಬಿಟ್ಟೆನ್ನ ಪೋದ ೫

ವೃತ್ತ :

ಏನ ಹೇಳಲೆ ಹರಿಯು ಕರೆದು ತಂದು ನಾನಾ ಸುಖವಪಡಿಸಿದ
ನಾನೆ ಸುಂದರಿ ಎಂದು ಮನದಿ ತಿಳಿದೆ ನಾ ನಡೆಯಲಾರೆನೆಂದೆ
ದೀನನಾಥನು ಎನ್ನನೆತ್ತಿಕೊಂಡು ಬರಲು ಈ ನಳಿನ ಬೇಕೆಂದೆನೆ
ಶ್ರೀನಾಥ ಇಲ್ಲೆನ್ನ ಬಿಟ್ಟು ಪೋದ ಏನೆಂಬೆ ಈ ಕಷ್ಟವ

ಪದ :

ಎಷ್ಟು ಹುಡುಕಲು ಕೃಷ್ಣ ತೋರನೆ ಇಲ್ಲಿ ಬಾರೆನೆ
ಮನ ಕೆಟ್ಟಿತೆ ಇನ್ನೆ
ಒಟ್ಟುಗೂಡಿ ಎಲ್ಲ ನೆರೆಯೋಣ ಹರಿಯ ಕರಿಯೋಣ ಭಕ್ತಿ
ಭಾವ ಮಾಡೋಣ
ಇಷ್ಟಾರ್ಥ ಸಲಿಸುವ ಕುಲದೈವ ಎಮ್ಮನು ಕಾವ
ಬಿಡಿಸುವ ಭವನೋವ
ನಿಷ್ಠೆಯಿಂದಲಿ ಇಂತು ನೆನೆಯುತ್ತ ಮೈ ಮರೆಯುತ್ತ
ಕೃಷ್ಣ ಪೊರೆಯೊ ಎನ್ನುತ್ತ ೬

**ವೃತ್ತ :**

ಶ್ರೀ ಕಮಲಭವ ರುದ್ರ ಇಂದ್ರಾದಿಗಳ್ ಲೋಕೇಶ ನಿನ್ನಂಘ್ರಿಯ
ಏಕಮಾನಸಿನಿಂದ ಭಜಿಸಿ ಸಾಕಲ್ಯಪೊಂದಿಪ್ಪರೊ
ಯಾಕಿಂತೀ ಪರಿ ನಿರ್ದಯವೊ ಎಮ್ಮ ಮೇಲೆ ಶೀಕಾಂತ ಕಾಪಾಡೆಲೊ
ಪಾಕ ಶಾಸನ ವಂದ್ಯ ಹರಿಯೆ ಎಮ್ಮ ಸಾಕುವ ನೀನಲ್ಲವೆ

**ಪದ :**

ಬಾಲಕತನದಲ್ಲಿ ದೈತ್ಯರ ಬಾಧೆಯ ಧೀರ ಬಿಡಿಸಿ
ಕಾಯ್ದೆಯೋ ಶೂರ
ಲೀಲೆಯಿಂದಲಿ ಗಿರಿ ಎತ್ತಿದೆ ಅಗ್ನಿ ನುಂಗಿದೆ ಕಾಳಿಯ
ಗರ್ವ ಮುರಿದೆ
ಪೇಳಲೊಳವೆ ನಿನ್ನ ಮಹಿಮೆಯ ಒಡಲೊಳ್
ಭೂಮಿಯ ತೋರ್ದೆ ಗೋಪಿಗೆ ಪ್ರಿಯ
ಪಾಲು ಮೊಸರು ಕದ್ದು ಮೆದ್ದೆಯೊ ತುರುವ
ಕಾಯ್ದೆಯೊ ನಾನಾ ಕಷ್ಟ ಬಿಡಿಸಿದೆಯೊ ೭

**ವೃತ್ತ :**

ಇಂತು ಈ ಪರಿಕಾಯ್ದ ಹರಿಯೆ ಎಮ್ಮ ಸಂತಾಪ ಬಿಡಿಸೆನ್ನುತ
ಇತು ಮದಗರ್ವವಳಿದು ಸ್ತುತಿಸೆ ಶ್ರೀ ಕಾಂತ ತಾ ಮೆಚ್ಚುತ
ನಿಂತನಾಗಲೆ ಅವರ ಎದುರೊಳ್ ಕಂತುಪಿತ ಇನಕೋಟಿಯ
ಕಾಂತಿ ಮೀರುವ ತೇಜದಿಂದ ಕಾಂತಾಮಣಿಯರ ಮಧ್ಯದಿ

**ಪದ:**

ಮನ್ಮಥಕೋಟಿ ಲಾವಣ್ಯನು ನಿಂತನು ತಾನು
ರಾಸಕ್ರೀಡೆಯಾಡಿದನು
ವನಿತೇರಿಗೊಂದೊಂದು ರೂಪಾದ ಸುಖ ತೋರಿದ
ವೇಣುಗಾನಗೈದ

ಘನನೀಲವರ್ಣ ಹೊದ್ದಿಹ ನೀಲ ವಸ್ತ್ರವು ಫಾಲ
ತಿಲಕವು ವಿಶಾಲ
ಸನಕಾದಿಗಳ ವಂದ್ಯ ಗೋಪಾಲಕೃಷ್ಣವಿಠ್ಠಲ
ಎನ್ನ ಸಲಹೊ ಶ್ರೀ ಲೋಲ ೮

## ೨೪೬

ರಕ್ಷಿಸೊ ಕರಿಗಿರಿ ನರಹರಿ ಭವ ಭಯಹಾರಿ
ನಿನ್ನ ಪಾದವ ತೋರಿ ಪ.

ವೃತ್ತ :

ಸೃಷ್ಟ್ಯಾದ್ಯಷ್ಟಕರ್ತ ಹರಿಯೇ ದುಷ್ಟರ ಸಂಹಾರಕ
ಪುಟ್ಟ ಬಾಲಕ ನಿನ್ನ ಸ್ತುತಿಸೆ ಪುಟ್ಟಿದೆ ಕಂಬದೊಳು
ಸಿಟ್ಟಿನಿಂದಲಿ ದೈತ್ಯನನು ನೀ ಹೊಟ್ಟೆಯ ಬಗೆದ ಹರಿ
ದಿಟ್ಟ ಶ್ರೀ ನಾರಸಿಂಹ ಎನಗೆ ಕೊಟ್ಟು ಮತಿಯ ಸಲಹೊ

ಪದ :

ಬಂದರು ಹರಿಯ ದರುಶನಕೆಂದು ಮುನಿಗಳೂ ಅಂದು
ದ್ವಾರಪಾಲಕರಂದು
ಮಂದ ಮತಿಯಿಂದ ಬಿಡದಿರೆ ಅಲ್ಲೆ ತಡೆದರೆ
ರೋಷಜ್ವಾಲೆಯ ಕೆದರೆ
ಮಂದಭಾಗ್ಯರೆ ದೈತ್ಯರು ಆಗಿ ಭೂಮಿಗೆ ಪೋಗಿ
ಎಂದು ಶಪಿಸಲು ಕೊರಗಿ
ಮಂದಹಾಸನೆ ಹರಿ ಪೊರೆಯೆಂದು ಮೊರೆಯಿಡಲಂದು
ಅಭಯವಿತ್ತೊ ಗುಣಸಿಂಧು ೧

ವೃತ್ತ :

ಶ್ರೀಶನಾಜ್ಞೆಯಿಂದ ಬಂದು ಧರೆಗೆ ದ್ವೇಷಿಗಳೆಂದೆನಿಸಿ
ವಾಸುದೇವನ ಭೃತ್ಯವರ್ಗಗಳನು ಹಿಂಸೆಯಗೈಯ್ಯುತಲಿ

ದೋಷಕಂಜದೆ ಕನಕನಯನ ಖತಿಯೊಳ್
ಭೂಸುದತಿಯಂ ಒಯ್ಯಲು
ನಾಶಪಡಿಸಿ ಅವನ ಕಾಯ ಪೊರದೆ ಭೂಸತಿಯ ವರಹಾತ್ಮಕ

ಪದ :

ಕನಕಾಕ್ಷ ಮಡಿದುದು ತಾ ಕೇಳೀ ರೋಷವ ತಾಳಿ
ಕನಕ ಕಶ್ಯಪು ಕನಲಿ
ಮನದಲ್ಲಿ ಚಿಂತೆಯ ಮಾಡಿದ ಧೈರ್ಯ ತಾಳಿದ
ಹರಿಯ ಕೊಲ್ಲುವೆನೆಂದ
ವನಕೆ ಪೋಗುತ ತಪಚರಿಸಿದ ಬ್ರಹ್ಮ ಮೆಚ್ಚಿದ
ಬೇಡಿದುದೀವೆನೆಂದ
ದಿನದೊಳು ಮರಣವು ಬೇಡೆಂದ ನಾನಾ ಬಗೆಯಿಂದ
ಬೇಗ ಕೊಡು ಇದನೆಂದ ೨

ವೃತ್ತ :

ಕೊಟ್ಟಾಗ ವರ ಬ್ರಹ್ಮ ಪುರಕೆ ಬರಲು ಪುಟ್ಟಿತು ಮದ ಗರ್ವವು
ಅಷ್ಟದಿಕ್ಪಾಲಕರೆಲ್ಲ ನಡುಗಿ ಕೊಟ್ಟರು ಕಪ್ಪವನು
ದುಷ್ಟ ತಾ ಜಗವ ಹುರಿದು ಮುಕ್ಕಿ ಸೃಷ್ಟೀಶ ತಾನೆಂದನು
ಅಷ್ಟು ಆಹುತಿ ಎನಗೆ ಕೊಡಿರಿ ಕಟ್ಟಳೆ ಮಾಡಿದನು

ಪದ

ಮೂರು ಲೋಕವು ತಲ್ಲಣಿಸುತ ತಾಪವಪಡುತ
ಹರಿಯೆ ರಕ್ಷಿಸು ಎನುತ
ಸಾರಿ ಬರುತಿರೆ ದೇವತೆಗಳು ಋಷಿ ಮುನಿಗಳೂ
ನೋಡಿದ ಕರುಣಾಳು
ಘೋರದೈತ್ಯನು ಸುತನ ಬಾಧಿಪ ಸತ್ಯಸಾಧಿಪ
ಆಗ ಬರುವೆನು ತಾಪ
ಹರಿದು ರಕ್ಷಿಪೆ ನಿಮ್ಮ ಪೋಗಿರಿ ಧೈರ್ಯ ತಾಳಿರಿ
ಮಡಿದ ರಕ್ಕಸನ ನೋಡುವಿರಿ ೩

**ವೃತ್ತ :**

ಎಂದಾ ಹರಿಯ ವಚನವ ಕೇಳಿ ಸುರರು ಬಂದರು ತಂ ಸ್ಥಾನಕೆ
ಎಂದಿನಂದದಿ ದೈತ್ಯ ಸಭೆಯೊಳ್ ಕಂದನ ಕರೆಯುತ್ತಲಿ
ಮಂದಹಾಸ ಮುಖವ ನೋಡಿ ಕಲಿತುದೇನೆಂದು ಬಿನ್ನೈಸೀಗೆನೆ
ತಂದೆ ಜಗಕೆ ಹರಿಯು ಸತ್ಯ ಒಂದೇ ವಚನ ನಿಶ್ಚಯ

**ಪದ :**

ಕೇಳಿದ ಕರ್ಣ ಕಠೋರವ ಮಗನ ಭಾವವ
ಮನಕೆ ಆಯಿತು ನೋವ
ತಾಳುತ ರೋಷವ ಸುತನಲಿ ದೈತ್ಯ ಮನದಲಿ
ಭೃತ್ಯರ ಕರೆಯುತಲಿ
ಪೇಳಿದ ನಾನಾ ದುಃಖವ ಕೊಡಿರಿ ಹಿಂಸೆಪಡಿಸಿರಿ
ಎಂದು ನುಡಿದ ಸುರವೈರಿ
ಬಾಲನ ಪಿಡಿದೆಳೆತಂದರು ಬಾಧೆ ಕೊಟ್ಟರು ಜಲಗಿರಿ
ಅಗ್ನಿಲ್ಹಾಕಿದರು ೪

**ವೃತ್ತ :**

ಗಜದ ಕಾಲಿಗೆ ಕಟ್ಟಿ ಎಳೆಸಿ ಭುಜಗನ ಮೇಲ್ ಬಿಡುತಿರೆ
ಗಜವ ಪಾಲಿಸಿದ ಹರಿಯೆ ಪೊರೆಯೊ ಭುಜಗನಶಯನ ಹರೆ
ನಿಜವು ತಿಳಿಯದೆ ನಿನಗೆ ಎಂದು ಭಜಿಸೆ ನಿಜಮನವರಿತು ಹರಿ
ದ್ವಿಜಧ್ವಜನ ಭಕ್ತ ಸ್ತುತಿಸೆ ಗಜ ವೈರಿ ರೂಪಾದನು

**ಪದ :**

ಮತ್ತಾಗ ಕರೆದನು ಮಗನನು ದೈತ್ಯನು ತಾನು
ನಿನ್ನ ರಕ್ಷಿಪೆ ನಾನು
ಶತ್ರು ನಮಗೆ ಹರಿ ಥರವಲ್ಲ ಬಿಡು ಈ ಸೊಲ್ಲ
ನೀ ನುಡಿ ಎನ್ನ ಸೊಲ್ಲ

ಸತ್ಯವೊ ಎನಗೆ ರಕ್ಷಕ ಹರಿ ಬಹುದುರಿತಾರಿ
ಎನ್ನ ಪೊರೆವನು ಶೌರಿ
ಮತ್ತೆ ತಾಳಿದ ರೋಷ ಮನದಲಿ ಪುರೋಹಿತದಲಿ
ವಿದ್ಯೆ ಕಲಿಸೆನುತಲಿ ೫

ವೃತ್ತ :

ಕ್ಷಿಪ್ರದಿಂದಲಿ ಶಾಲೆಗಾಗ ಕಳಿಸೆ ಪುತ್ರರ ಕೂಡುತಲಿ
ಸಪ್ರಾಮಾಣ್ಯವ ಕೇಳಿರಿನ್ನು ಜಗಕೆ ಶ್ರೀಪತಿಯೆ ಸರ್ವೋತ್ತಮ
ಈ ಪೃಥೀಶರ ನಂಬಬೇಡ ಹರಿಯ ನೀವ್ ಪ್ರಾರ್ಥನೆ ಮಾಡಿರೋ
ಕ್ಷಿಪ್ರದೊಳ್ ಕಾಯ್ವ ಹರಿಯು ಎನುತ ತಾ ಪ್ರೇರಿಸಿದ ತರಳನು

ಪದ :

ಕೇಳಿ ಬಾಲರು ಎಲ್ಲ ಮನದಲಿ ಹರುಷವ ತಾಳಿ
ಹರಿಯ ಕೊಂಡಾಡುತಲಿ
ಹೇಳಿದರ್ಯಾರೊ ನಿನಗಿದನು ಎಮಗೆ ಪೇಳಿನ್ನು
ಎನಲು ಪ್ರಹ್ಲಾದನು
ಕೇಳಿರೊ ಗರ್ಭದಿ ಇರೆ ನಾನು ನಾರದನು
ದಯೆಗೆಯ್ದು ಎನಗಿನ್ನು
ಅಳಿಯದೊ ಎನಗೆ ಶ್ರೀ ಹರಿ ಚಿಂತೆ ಬಿಡಿರಿ ದುರ್ಭ್ರಾಂತೆ
ಮಾಡಿರಿ ಹರಿಚಿಂತೆ ೬

ವೃತ್ತ :

ಬಂದು ನೋಡಿ ಉಪಾಧ್ಯ ಮಠದಿ ಸುತರಾನಂದದಾ ವೈಭವವನು
ಇಂದು ಎಲ್ಲರ ಕೆಡಿಸಿ ಎನ್ನ ತಲೆಗೆ ತಂದೆಯೊ ಮೃತ್ಯುವನು
ಕೊಂದಿಡುವೆನೊ ಬಾಲ ಈಗ ನಿನ್ನ ತಂದೆಯ ಬಳಿಗೊಯ್ದು ನಾ
ನೆಂದುತರಳನ ತಂದು ಖಳನಾ ಮುಂದೆ ನಿಲ್ಲಿಸಿ ಪೇಳಿದ

ಪದ :

ಸಾಧ್ಯವಿಲ್ಲವೊ ತಿದ್ದುವುದು ಇನ್ನು ನಮಗಿವನನು
ಕೆಡಸಿದ ಬಾಲರನ್ನು
ಸುದ್ದಿಯ ಕೇಳಿದ ರೋಷದಿ ಪದಘಾತದಿ
ಬೆದರಿಸಿ ನುಡಿದ ಭರದಿ
ಪೊಡ್ಡಿಪನೆಲ್ಲೊ ನಿನ್ನಾ ಹರಿ ಕರಿಯುವೆ ಕರಿ ಪೇಳೋ
ಬೇಗ ಕುಲವೈರಿ
ಪದ್ಮಸಂಭವಪಿತ ಜಗತ್ಕರ್ತಾ ಸರ್ವತ್ರದಿ ವ್ಯಾಪ್ತಾ
ಎನ್ನ ಪೊರೆಯುವನು ಗುಪ್ತ ೭

ವೃತ್ತ :

ಎಲ್ಲಾ ಕಡೆಯಲಿ ವ್ಯಾಪ್ತ ನಿನ್ನ ಹರಿಯು ಕೊಲ್ಲುವೆ ನಿನ್ನ ಕರಿ
ಇಲ್ಲೀ ಸ್ಥಂಭದಿ ತೋರು ಎನಲು ಶ್ರೀ ನಲ್ಲ ಪೊರೆ ಎಂದನು
ಅಲ್ಲೇ ಸ್ಥಂಭವು ಛಟ ಛಟತ್ಕಾರವಾಗೆ ಖಿಲ್ಲನು ಬೆದರಿದನು
ಪ್ರಹ್ಲಾದವರದ ನರಮೃಗನು ಆಗಿ ಅಲ್ಲಿಂದ ಹೊರ ಹೊರಟನು

ಪದ :

ಪಾಪಿಯ ತೊಡೆಯ ಮೇಲಿಟ್ಟನೊ ಹೊಟ್ಟೆ ಬಗೆದನು
ಕರುಳ್ಮಾಲೆ ಹಾಕಿದನು
ರೂಪವು ಘೋರವವಾಗಿರುತಿರೆ ದೇವತೆಗಳ್ ಬೆದರೆ
ಲಕ್ಷ್ಮೀಯು ಪೋಗದಿರೆ
ಕೋಪವಡಗಿಸೊ ಪ್ರಹ್ಲಾದನೆ ವರಭಕ್ತನೆ ಸ್ತುತಿಸೆ ಶಾಂತನಾದೆ
ಗೋಪಾಲಕೃಷ್ಣವಿಠ್ಠಲ ಹರಿ ಲಕ್ಷ್ಮಿನರಹರಿ
ಕಾಯ್ವ ಜಗವೆಲ್ಲ ಶೌರಿ ೮

## ೨೪೭

ರಾಮನಾಮದಿ ಪಾಮರರಿಗೆ
ಪ್ರೇಮ ಪುಟ್ಟುವುದೆ ಪ.

ಸ್ವಾಮಿ ಭೃತ್ಯ ನ್ಯಾಯವರಿಯದ
ಕಾಮಿಗಿದರೊಳು ನೇಮ ಬಪ್ಪುದೆ ಅ.ಪ.

ದಾಶರಥಿ ಎನಿಸಿ ಜಗದೊಳು
ಶ್ರೀಶನವತರಿಸೆ
ಕೌಶಿಕನ ಮಖ ಘಾಸಿಗೈಯ್ಯುವ
ದೋಷಿಗಳ ತಾ ನಾಶಗೈಸಿದ ೧

ಶಿಲೆಯ ಪೆಣ್ಗೈದು ಲಲನೆ ಸೀತೆಯ
ಒಲುಮೆಯಿಂ ವರಿಸಿ
ಕುಲವನಳಿದನ ಛಲವ ಭಂಗಿಸಿ
ಲಲನೆ ಸಹಿತದಿ ನೆಲಸೆ ಪುರದಲಿ ೨

ಮಾತೆ ವಚನದಿ ಸೀತೆ ಅನುಜ ಸ
ಹಿತ ವನಕೆ ಬರೆ
ಖ್ಯಾತಿ ರಾವಣನಾ ತಳೋದರಿ
ಪ್ರೀತಿಸಲು ವಿಘಾತಿಗೈಸಿದ ೩

ಮಾಯಾಮೃಗ ಕಂಡು ಪ್ರಿಯ ನೀಡೆನೆ
ಸಾಯಕವನೆಸೆಯೆ
ಕಾಯ ಬಿಡುತಿರೆ ಹೇಯ ರಾವಣ
ಪ್ರಿಯಳನುಯ್ಯೆ ನೋಯ್ದು ಮನದಲಿ ೪

ಬೆಟ್ಟವನೆ ಕಂಡು ಕುಟ್ಟಿ ವಾಲಿಯ
ಪಟ್ಟ ಕಪಿಗಿತ್ತು

ಶ್ರೇಷ್ಠ ಹನುಮಗೆ ಕೊಟ್ಟು ಉಂಗುರ
ಪಟ್ಟದರಸಿಗೆ ಮುಟ್ಟಿಸೆಂದ ೫

ಕೇಳಿ ಶ್ರೀ ವಾರ್ತೆ ತಾಳೀ ಹರುಷವ
ಬೀಳು ಕೊಂಡಲ್ಲಿಂ
ತಾಳೆ ಕೋಪವ ಕೇಳಿ ವನಧಿ
ಸೀಳು ಆಗಲು ಶಿಲೆಯ ಬಿಗಿದ ೬

ದುಷ್ಟ ರಾವಣನ ಕುಟ್ಟಿ ಶಿರವನು
ಪಟ್ಟದರಸಿ ಕೂಡಿ
ಶ್ರೇಷ್ಠ ಭರತಗೆ ಕೊಟ್ಟು ದರ್ಶನ
ಪಟ್ಟವಾಳಿದ ದಿಟ್ಟಯೋಧ್ಯೆದಿ ೭

ರಾಮ ರಾಮನೆಂಬಾ ಹನುಮಗೆ
ಪ್ರೇಮದಿಂದೊಲಿದು
ಧಾಮ ಅಜಪದ ನೇಮಿಸಿ ಮುಂದೆ
ಸೋಮನೆನಿಸಿದ ಭಾನು ವಂಶಕೆ ೮

ಬೆಟ್ಟದೊಡೆಯನ ಇಷ್ಟು ಮಹಿಮೆಯ
ಮುಟ್ಟಿಮನ ಭಜಿಸಿ
ದಿಟ್ಟ ಗೋಪಾಲಕೃಷ್ಣವಿಠ್ಠಲ
ಶ್ರೇಷ್ಠನೆನ್ನುವ ಶ್ರೇಷ್ಠಗಲ್ಲದೆ ೯

## ೨೪೮

ಶ್ರೀರಾಮ ನಿನ್ನ ಪದಕೆರಗಿ ನಮಿಸಿವೆನು
ತೋರೆನಗೆ ನಿಜರೂಪ ಪರಿವಾರ ಸಹಿತ ಪ.

ಶ್ರೀ ಗುರುಗಳಿಗೆರಗಿ ಅವರ ಕರುಣಾಬಲದಿ
ಈಗ ಈ ಜನ್ಮದಲಿ ನಿನ್ನ ಭಜಿಪೆ

ನಾಗಶಯನನೆ ನಿನ್ನ ಜನ್ಮಕರ್ಮದ ದಿನದಿ
ಬೇಗ ಬಂದೆನ್ನೊಳಗೆ ನೆಲಸಿದೆಯೊ ದೇವ ೧

ನಿನ್ನ ದರುಶನಕೆಂದು ಘನ್ನ ಯೋಗಿಗಳು ಬರೆ
ಮನ್ನಿಸೆ ಇರುತಿರಲು ದ್ವಾರಪಾಲಕರು
ಇನ್ನವರ ಶಾಪದಲಿ ದೈತ್ಯಕುಲದಲಿ ಜನಿಸೆ
ಮುನ್ನವರ ಪೊರೆಯಲು ಭೂಮಿಯೊಳು ಬಂದೆ ೨

ದಶರಥಗೆ ಸುತನಾಗಿ ತಾಟಕಿಯ ಸಂಹರಿಸಿ
ಅಸಮ ಮುನಿಯಜ್ಞವನು ಅನುಜ ಸಹ ಕಾಯ್ದು
ಕುಶಲದಿಂದಲಿ ಶಿಲೆಯ ಹೆಣ್ಣುಗೈಯುತ ಬಂದು
ಶಶಿಮುಖಿ ಸೀತೆಯನು ಕರಪಿಡಿದ ದೇವ ೩

ಧನುವ ಮುರಿದುದ ಕೇಳೀ ಜಮದಗ್ನಿ ಕುವರನು
ನಿನ ಸಂಗಡದಲಿ ಕಾಳಗಕೆ ಬರಲು
ದನುಜರಿಗೆ ಭ್ರಮೆಗೊಳಿಸಿ ಕನಲುತಿಬ್ಬರು ಕಾದಿ
ಘನಬಲ ಗೆಲಿದಂಥ ಅನುಗುಣನೆ ರಾಮ ೪

ಮಾತೆ ವಚನದಿ ಅನುಜ ಸೀತೆ ಸಹಿತದಿ ವನಕೆ
ಪ್ರೀತಿಯಿಂದಲಿ ಪೋದೆ ನೀತಿಯನು ತಿಳಿದು
ಪಾತಕವ ಹರಿಸುವ ಪರಮ ಪಾವನ ಮೂರ್ತಿ
ಈ ತೆರದ ಲೀಲೆಯನು ತೋರಿದೆಯೊ ಜಗಕೆ ೫

ಕಂಡು ಮಾಯಾಮೃಗವ ಅಂಡಲೆದು ಅದರೊಡನೆ
ಭಂಡ ರಾವಣ ಬಂದು ಭಿಕ್ಷುಕನ ತೆರದಿ
ಲಂಡನತದಲಿ ಸೀತೆಯನು ಕದ್ದು ಓಡಲು
ಕಂಡು ನಿರ್ಜನ ಗೃಹವ ಬೆಂಡಾದ ರಾಮ ೬

ಅನುಜನೊಡನೆ ವನವ ಅಲೆದಲೆದು ಕಂಗೆಟ್ಟು
ಘನ ಪಕ್ಷಿಯಿಂದಲಿ ವಾರ್ತೆ ತಿಳಿದು
ಹನುಮ ಸುಗ್ರೀವರಿಗೆ ಒಲಿದು ವಾಲಿಯ ಕೊಂದು
ವನಿತೆ ಸೀತೆಯನರಸೆ ವಾನರರ ಕಳುಹಿದೆ ೭

ಹನುಮನಿಂದಲಿ ಸುಟ್ಟು ದನುಜಪುರ ಉಂಗುರವ
ವನಿತೆ ಸೀತೆಗೆ ಕೊಟ್ಟು ವಾರ್ತೆ ತರಿಸಿ
ವನಧಿಗೆ ಸೇತುವೆಯ ಕಟ್ಟಿ ವಾನರರೊಡನೆ
ದನುಜ ರಾವಣ ಸಹಿತ ರಕ್ಕಸರ ಕೊಂದೆ ೮

ಅಗ್ನಿಯಿಂ ಸೀತೆಯನು ಶುದ್ಧಳೆನಿಸಿ ಗ್ರಹಿಸಿ
ವಿಘ್ನವಿಲ್ಲದ ಪದ ವಿಭೀಷಣಗಿತ್ತು
ಮಗ್ನನಾಗಿರೆ ಭರತ ನಿನ್ನ ಪದಧ್ಯಾನದಲಿ
ಅಗ್ನಿಸಖಸುತನೊಡನೆ ವಾರ್ತೆ ಕಳುಹಿಸಿದೆ ೯

ಬಂದೆದುರುಗೊಳ್ಳೆ ಭರತನು ಸಕಲ ಪರಿವಾರ
ಬಂದಯೋಧ್ಯೆಗೆ ಸಕಲ ಸನ್ನಾಹದಿ
ಅಂದು ಸಿಂಹಾಸನದಿ ಪಟ್ಟಾಭಿಷೇಕವಗೊಂಡು
ಬಂದ ಭಕ್ತರಿಗೆ ಇಷ್ಟಾರ್ಥ ಸಲಿಸಿದೆಯೊ ೧೦

ಕೊಟ್ಟು ಕಪಿಗೆ ಬ್ರಹ್ಮಪಟ್ಟದ ಪದವಿಯನು
ಶ್ರೇಷ್ಠನೆನಿಸಿದೆಯೊ ಜಗಕೆ ಬೆಟ್ಟದೊಡೆಯ
ಇಷ್ಟ ಶ್ರೀ ಗೋಪಾಲಕೃಷ್ಣವಿಠ್ಠಲ ಎನಗೆ
ಕೆಟ್ಟ ಸಂಸೃತಿ ಬಿಡಿಸಿ ಕೊಟ್ಟಭಯ ಸಲಹೊ ೧೧

## ೨೪೯

ಕ್ಷೇಮದಿಂದಿರುವನಮ್ಮಾ । ಶ್ರೀನಿವಾಸ
ಭಾಮೆ ಲಕುಮಿ ಕೇಳಮ್ಮಾ ಪ.

ಕಾಮಜನಕ ಪೂರ್ಣ ಕಾಮನಾಗಿಹನಮ್ಮ
ಕಾಮಿಸಿದವರ ಅಭೀಷ್ಟ ಕೊಡುವನಮ್ಮ ಅ.ಪ.

ವೈಕುಂಠ ತೊರೆದನಮ್ಮಾ । ನಿನಗಲ್ಲಿ ಬ
ಹು ಕಷ್ಟವೆಂಬೊನಮ್ಮಾ
ನೀ ಕೊಲ್ಲಾಪುರಕೆ ಬರಲು ಖೇದಪಡುತಲಿ
ಆ ಕೋಲಗಿರಿಯಲಿ ತಾನೆ ನೆಲಸಿದನಮ್ಮಾ ೧

ಬಲುದಿನವಾಯಿತಂತೇ । ನಿನ್ನನು ನೋಡಿ
ಛಲವಿನ್ನು ಬೇಡವಂತೆ
ಲಲನೆ ಪದ್ಮಾವತಿ ದೂರದಲ್ಲಿಹಳಂತೆ
ವಲಿದು ನೀ ವಕ್ಷ ಸ್ಥಳದಿ ನೆಲಸ ಬೇಕಂತೆ ೨

ನೋಡಬೇಕೆಂಬೊನಮ್ಮಾ । ನಿನ್ನೊಡನೊಂದು
ಆಡಬೇಕೆಂಬೊನಮ್ಮಾ
ಮಾಡಿಸಿದೇಯಂತೆ ಪದ್ಮಿಣಿ ಲಗ್ನವ
ಮಾಡಿದ ಉಪಕಾರ ಮರಿಯನಂತಮ್ಮ ೩

ತಲೆನೋವು ಬಿಡದಂತಮ್ಮಾ । ತನ್ನಾ ಸೇವೆ
ತಿಳಿದು ಮಾಡುವರ್‍ಯಾರಮ್ಮಾ
ಲಲನೆ ನಿನ್ಹೊರತಿಲ್ಲ ಕೆಲಕಾಲ ಸೇವಿಪೆ
ತಿಳಿದು ತಿಳಿದು ಇಲ್ಲಿ ನೆಲೆಸಿದೆ ಯಾಕಮ್ಮ ೪

ವಡೆಯಳೆ ಭಾಗ್ಯವಂತೆ । ನೀ ತೊರೆಯಲು
ಬಡತನ ಬಂದಿತಂತೆ
ಕೊಡುವ ಜನರ ಕಪ್ಪಕೊಳುತ ದರ್ಶನವನ್ನು
ಕೊಡದೆ ಹೊಡೆಸುವಂಥ ಕಡುಲೋಭ ಕಲಿತನೆ ೫

ಅಷ್ಟ ಐಶ್ವರ್ಯ ಪ್ರದೆ । ಹೃದಯದಲಿರೆ
ಎಷ್ಟು ವೈಭವವಿಹುದೆ
ಬಿಟ್ಟೆ ನೀನೀಗೆಂದು ಎಷ್ಟು ಆಭರಣಾಗ
ಳಿಟ್ಟು ಮೆರೆವೊನಮ್ಮ ದೃಷ್ಟಿ ಸಾಲದು ನೋಡೆ ೬

ಎಷ್ಟು ಲೀಲೆಯೆ ನಿಮ್ಮದೂ । ವೈಕುಂಠವ
ಬಿಟ್ಟು ಇಬ್ಬರು ಇಹುದೂ
ಗುಟ್ಟು ಬಲ್ಲಂಥ ಹರಿದಾಸರಿಗೊಲಿಯುವ
ಶ್ರೇಷ್ಠ ಶ್ರೀ ಗೋಪಾಲಕೃಷ್ಣ ವಿಠ್ಠಲನರಸಿ ೭

# ವಿಶೇಷ ಸಂದರ್ಭದ ಹಾಡುಗಳು

## ೨೫೦ *

ಅಡಗಿದೇತಕೊ ರಜತ ಕವಚದೊಳಗೆ
ಅಡಿ ಭಕ್ತರಾಡುವೋ ಬಿಡಿ ನುಡಿಗೆ ಪ.

ಗೇಣು ಪ್ರಮಾಣದಾ ಪ್ರಾಣರಾಯನೆ ಛಿದ್ರ
ಕಾಣುತಿರೆ ಶಿಲೆರೂಪದಲ್ಲಿ ನಲಿದು
ಆನಂದದಿಂ ನುಡಿದ ಆನತರ ವಚನಕ್ಕೆ
ನೀ ನಾಚಿ ಜಗಕಿನ್ನು ಕಾಣಬಾರದು ಎಂದು ೧

ದುರುಳ ಸೀತೆಯ ಕದ್ದು ತೆರಳುತಿರೆ ನಿಮ್ಮ ಕಂ
ಡರವಿಂದನಯನೆ ಆಭರಣ ಕಟ್ಟೊಗೆಯೇ
ಸಿರಿಚರಣ ಸ್ಪರ್ಶವೆನಗಿರಲೆಂದು ಪೈಜಣವ
ಮುರಿಸಿ ಕವಚವ ಮಾಡಿ ಮೆರೆವ ವೈಖರಿಯೇ ೨

ರಜತಗಿರಿ ವಾಸ ರಣದಲ್ಲಿ ಬ್ರಹ್ಮಾಸ್ತ್ರವನು
ಭುಜಬಲದಿ ಬಿಡಲು ಲೆಕ್ಕಿಸದೆ ಮೂದಲಿಸೀ
ನಿಜವಾಸ ಸ್ಥಳವಿಲ್ಲದಲೆಯಲೆಂದೆನ್ನುತಲಿ
ರಜತಗಿರಿ ಕವಚ ಮಾಡಿರುವ ವೈಭವವೋ ೩

ಕುನ್ನಿ ಮತಗಳ ಮುರಿದು ಘನ್ನ ಶಾಸ್ತ್ರವನೊರೆದು
ಚನ್ನಕೃಷ್ಣನ ರಜತ ಪೀಠದಲಿ ನಿಲಿಸೀ
ಎನ್ನೊಡೆಯನಾಸನವು ಎನಗೆ ಭೂಷಣವೆಂದು
ಚನ್ನಾಗಿ ಮೈಗೆ ಸುತ್ತಿರುವ ವಿಸ್ಮೃತಿಯೋ ೪

---

* (ಸಾಗರ ಕಟ್ಟೆ ಪ್ರದ್ಯುಮ್ನ ತೀರ್ಥರು ಪೂಜಿಸುತ್ತಿದ್ದ
ಭಿನ್ನಪ್ರಾಣದೇವರನ್ನು ಕುರಿತು ನೋಡಿ ಕೀ೨೬೦)

ನಿನ್ನಲ್ಲಿ ವಡಕಿರಲು ಪೂಜಿಸುವ ಜ್ಞಾನಿಗಳಿ
ಗಿನ್ನೊಂದು ನುಡಿ ಅಜ್ಞರಿಂ ಬೇಡವೆಂದೂ
ಚನ್ನಾಗಿ ಹಿಂದೆ ಮುಂದೆಡಬಲದಿ ಮೇಲ್ ಕೆಳಗೆ
ಇನ್ನು ತೋರದ ತೆರದಿ ಮರೆಮಾಡಿಕೊಂಡೂ ೫

ವಡೆಯ ಈರೇಳು ಲೋಕದಿ ವ್ಯಾಪ್ತನಾಗಿ ನೀ
ನುಡಿದು ಶ್ರೀಮಂತ್ರ ಜೀವರ ಕಾಯೊ ಎನಲೂ
ವಡೆಯಗುತ್ತರ ಪೇಳಲಾರದಲೆ ಬ್ಯಾಸತ್ತು
ಅಡಿಗಿಲ್ಲಿ ಮೈದೋರದಿರುವ ಪರಿ ಏನೋ ೬

ಕಂಡವರು ಬಿಡುವರೇ ಆಡದಲೆ ನಿನ ಚರಿತೆ
ಚಂಡ ವಿಕ್ರಮನಹುದೊ ಮುನಿಯದಲೆ ಸಲಹೋ
ಪಾಂಡವರ ಪಾಲ ಗೋಪಾಲಕೃಷ್ಣವಿಠ್ಠಲನ
ತೊಂಡ ಶ್ರೀ ಪ್ರದ್ಯುಮ್ನತೀರ್ಥ ಕರ ಪೂಜ್ಯ ೭

## ೨೫೧ *

ಇದೆ ಇದೆ ಉಡುಪಿಪುರ ನಮ್ಮ
ಪದುಮನಾಭನು ನೆಲೆಸಿರುವ ಮಂದಿರ ಪ.

ಬಂದ ಆಯಾಸಗಳೊಂದು ಕಾಣಿಸದಿನ್ನು
ಸಿಂಧು ತಡಿಯಲಿಪ್ಪ ಪಟ್ಟಣ ನೋಡೆ
ಸುಂದರ ಗೋಪುರ ಅಂದವಾಗಿಹ ಬೀದಿ
ಬಂದೆವೆ ಗುರು ಹಿರಿಯರ ಕೃಪೆಯಿಂದ ೧

ಮೊದಲೆ ತೋರುವುದು ಶ್ರೀ ರಾಘವೇಂದ್ರ ಮಠ
ಅದರ ಬದಿಯಲ್ಲೆ ಕೃಷ್ಣಪುರ ಮಠವು

* (ಉಡುಪಿ ಕ್ಷೇತ್ರದ ಅಷ್ಟ ಮಠಗಳು ಮತ್ತು ಕೃಷ್ಣ ಮಂದಿರದ ವರ್ಣನೆ. ನೋಡಿ ಕೀ. ೨೫೭)

ಅದರೆದರಲ್ಲೆ ಶಿರೂರು ಶ್ರೀಗಳ ಮಠ
ಎದುರೆ ಕಾಣುವುದೆ ಕನಕ ಮಂಟಪವು ೨

ಕಿಂಡಿಯಲ್ಲಿ ನೋಡಿ ಪುಂಡರಿಕಾಕ್ಷನ
ಕಂಡು ವಂದಿಸಿ ಮಹಾದ್ವಾರಕೆ ಬನ್ನಿ
ಮಂಡೆ ಬಾಗಿಸಿ ಬನ್ನಿ ಮಹಾಪ್ರದಕ್ಷಿಣೆಗಾಗಿ
ಕಂಡು ಸಾಗಿರಿ ಮುಂದೆ ಕಾಣೂರು ಮಠವ ೩

ಎರಡನೆಯ ಬೀದಿಯಲಿ ಬಲದ ಮಹಾದ್ವಾರ
ಗಿರಿಜೆಯರಸ ಚಂದ್ರೇಶ್ವರನ ಗುಡಿ
ಎರಗಿ ಮುಂದ್ವರಿಯೆ ಎಡದಲ್ಲಿ ಸೋದೆಯ ಮಠ ಅ
ದರ ಪಕ್ಕವೆ ಪುತ್ತಿಗೆ ಮಠ ನೋಡಿ ೪

ಬರಬರುತ ಬೀದಿ ಎರಡು ಪಕ್ಕಗಳಲ್ಲಿ
ಇರುವ ಅಂಗಡಿ ಸಾಲು ವ್ಯಾಸಾದಿ ಮಠಗಳ್
ನಿರರುತಿ ಕೋಣದಿ ಆದಮಾರು ಮಠ ಅ
ದರ ಪಕ್ಕವೆ ಪೇಜಾವರ ಮಠವೆನ್ನಿ ೫

ಮುಂದೆ ಒಂದೆರಡ್ಹೆಜ್ಜೆಯಿಂದ ಬರಲು ಅಲ್ಲಿ
ಸುಂದರವಾದ ಪಲಿಮಾರು ಮಠ
ಅಂದ ನೋಡುತ ಸಾಗಲರ್ಧ ಪ್ರಥಮ
ಬೀದಿಯಿಂದ ಬಲಗಡೆ ತಿರುಗೆ ಅನಂತೇಶ್ವರ ೬

ಚತುರ ಬೀದಿಯ ಮಧ್ಯೆ ರಾಜಿಸುತಿಹ ಗುಡಿ
ಅತಿ ಉನ್ನತವಾದ ಗರುಡಸ್ಥಂಭ
ಪ್ರಥಮ ಪ್ರದಕ್ಷಿಣೆ ದ್ವಾರ ದರ್ಶನಗಳು
ಗತಿಸಿ ಪೋದುವು ನಮ್ಮ ಪಾಪರಾಶಿಗಳು ೭

ನಡೆಯಿರಿ ನಡೆಯಿರಿ ಕೃಷ್ಣನ ಮಠದೆಡೆ
ಬಡಿಯುತಲಿಹರು ನಗಾರಿಗಳು

ತಡೆಯದೆ ತೆಗೆವರು ಮಹಾದ್ವಾರವೀಗಲೆ
ಒಡೆಯ ಕೃಷ್ಣನ ನೋಡ ಬಲ್ಲಿರೆಲ್ಲ ೮

ಬೆಳಗು ಝಾವದ ನಾಲ್ಕು ತಾಸಿನ ಭೇರಿಯು
ಒಳಗೆ ಪೋಗಿರಿ ಎಂದು ಕೂಗುತಿದೆ
ಬಲು ಬೇಗ ಸ್ನಾನ ಮಾಡುತ ಮಧ್ವಸರಸಿನೋಳ್
ಚಲುವ ಕೃಷ್ಣನ ನೋಡ ಬನ್ನಿರೆಲ್ಲ ೯

ಮುನಿವರರೆದ್ದು ಸ್ನಾನವಗೈದು ಉಷಃಕಾಲ
ಘನಪೂಜೆಗೈದು ಪೊಂಗಲು ದೋಸೆಯ
ಮುನಿವರದಗೆ ನೈವೇದ್ಯವರ್ಪಿಸಿ ತಮ್ಮ
ಮನದಣಿಸುತ್ತಲಾನಂದಿಪರು ೧೦

ಬಾಲತೊಡಿಗೆಯನಿಟ್ಟ ಬಾಲರೂಪನ ನೋಡಿ
ನೀಲಮೇಘಶ್ಯಾಮ ನಿರ್ಮಲಾತ್ಮ
ಆಲಯದೆಡಬಲ ಗರುಡ ಮುಖ್ಯಪ್ರಾಣ
ಓಲೈಸೆ ಗೋಪಾಲಕೃಷ್ಣವಿಠಲನ ೧೧

## ೨೫೨ *

ಇಂದು ಕಾಯಲಿಬೇಕೊ ಸುಂದರ ಧನ್ವಂತ್ರಿ
ಇಂದಿರೆರಮಣ ಆನಂದ ಕೃಷ್ಣ ಪ.

ತಂದೆ ಮುದ್ದುಮೋಹನ ಗುರುಗಳ ನೀನು
ಚಂದದಿಂ ಪಾಲಿಸಿ ತಂದುಕೊ ಕೀರುತಿ ಅ.ಪ.

ಬಂದಿತೊ ನಿನಗೊಂದು ಕುಂದು ಇದರಿಂದ
ನಂದಕಂದನೆ ಕೃಷ್ಣ ಉಡುಪಿ ನಿಲಯ

* (ತಂದೆ ಮುದ್ದುಮೋಹನದಾಸರಿಗೆ ಅನಾರೊಗ್ಯವುಂಟಾದಾಗ ಮಾಡಿದ ಧನ್ವಂತ್ರಿ ಪ್ರಾರ್ಥನೆ. ನೋಡಿ. ಕೀ ೨೫೮)

ಮಂದರೋದ್ಧರ ಕೃಷ್ಣ ಬಂದು ಈಗ ನೀ ಕಾಯೊ
ಕಂದರ್ಪಜನಕನೆ ಇಂದು ಬೇಡುವೆ ನಿನ್ನ ೧

ಭವರೋಗ ಹರನಿಗೆ ಇದೊಂದಸಾಧ್ಯವೆ
ತವಕದಿಂದಲಿ ಆಯುವಿತ್ತು ಕಾಯೊ
ಪವನನಂತರ್ಯಾಮಿ ಭವಪಾಶಬದ್ಧರ
ತವಕದಿಂದಲಿ ಕಾಯ್ವ ಗುರುಗಳಲ್ಲವೆ ಇವರು ೨

ನಿನ್ನ ಆಜ್ಞೆಯಿಂದ ಭಕ್ತರನುದ್ಧರಿಸ
ಲಿನ್ನು ಧರೆಗೆ ಬಂದವರಲ್ಲವೆ
ಮನ್ನಿಸಿ ನೀನಾಯುರಾರೋಗ್ಯ ಭಾಗ್ಯವಿತ್ತು
ಚನ್ನಾಗಿ ಕಾಯಬೇಕಿನ್ನು ಎನ್ನಯ ದೊರೆಯೆ ೩

ಕಷ್ಟ ಬಿಡಿಸುವರಿಗೆ ಕಷ್ಟ ಕೊಡುವರೆ ನೀನು
ಕಷ್ಟ ಪರಿಹಾರಕನೆಂದೆನಿಸಿ
ಬಿಟ್ಟು ಬಿಡು ಈ ಬಿಂಕ ಥಟ್ಟನೆ ಕಾಪಾಡೊ
ಶ್ರೇಷ್ಠ ಗುರುಗಳ ಎಮ್ಮ ಕಷ್ಟ ಬಿಡಿಸುವರ ೪

ಅನ್ನ ಪಾನವಿಲ್ಲದಿನ್ನು ಬಳಲಿಸುವರೆ
ಚನ್ನವಾಯಿತು ಇದು ನಿನ್ನ ಘನತೆ
ಸನ್ನುತ ಮಹಿಮ ಶ್ರೀ ಗೋಪಾಲಕೃಷ್ಣವಿಠ್ಠಲ
ಇನ್ನು ಕಾಯದಿರೆ ಎನ್ನಾಣೆ ಬಿಡೆ ಕಂಡ್ಯಾ ೫

## ೨೫೩ *

ಎಂಥಾದ್ದೊ ಶ್ರೀ ತಿರುಪತಿ । ಎಂಥಾದ್ದೊ ಪ.

ಎಂಥಾದ್ದೊ ತಿರುಪತಿ ಕ್ಷೇತ್ರ । ಸ
ತ್ಪಾಂಥರಿಗಿಲ್ಲಿ ಸುಗಾತ್ರ । ಆಹ
ಕಂತುಪಿತನು ಇಲ್ಲಿ ನಿಂತು ಭಕ್ತರಿಗೆಲ್ಲ
ಸಂತಸಪಡಿಸುವನಂತಾದ್ರಿನಿಲಯ ನಿನ್ನೆಂದಾದ್ದೊ ಅ.ಪ.

ನಾಗಾದ್ರಿಗಿರಿಯ ಮೆಟ್ಟುಗಳು । ಅ
ಯೊಗ್ಯರಿಗಿದು ದುರ್ಲಭಗಳು । ಅಲ್ಲಿ
ಭಾಗವತರ ಸಮ್ಮೇಳಗಳು । ಶಿರ
ಬಾಗಿ ವಂದಿಪರು ಜನರುಗಳು । ಆಹ
ಪೋಗುತ ಗಾಳಿಗೋಪುರವ ಕಂಡೆರಗಿ ಮುಂ
ದ್ಯಾಗುತ ಸಜ್ಜನ ನೀಗುವರು ದುಃಖ ೧

ಹರಿಮಂದಿರ ಮಹಾದ್ವಾರ । ಬಹು ಜ
ನರು ಕೂಡಿಹರು ವಿಸ್ತಾರ । ಬೀದಿ
ನಡೆದು ಪ್ರದಕ್ಷಿಣಾಕಾರ । ಭೂ
ವರಹನ ಸ್ವಾಮಿ ಕಾಸಾರ । ಆಹ
ಹರುಷದಿಂದಶ್ವತ್ಥ ತರುವ ಕಂಡೆರಗಿ ಹರಿ
ದರುಶನಕಾಗಿ ಹಾರೈಸುವ ಜನತತಿ ೨

ಸ್ವಾಮಿಪುಷ್ಕರಣಿಯ ಸ್ನಾನ । ಮನ
ಕಾನಂದಪ್ರದ ಸುಜ್ಞಾನ । ಭಾನು
ತಾನುದಿಸುವನು ಮುಂದಿನ । ಸುಖ
ಕೇನೆಂಬೆ ಹರಿಯ ದರ್ಶನ । ಆಹ
ನೀನೆ ಗತಿಯೆಂದು ನಂಬಿದವರ ಪೊರೆವ
ಭಾನುಪ್ರಕಾಶ ಹಣ ಕಾಣೀಕೆ ಕೈಕೊಂಬ ೩

* (ತಿರುಪತಿಯ ಬ್ರಹ್ಮರಥೋತ್ಸವ ಸಂಧರ್ಭದಲ್ಲಿ
ಕಂಡ ಕ್ಷೇತ್ರ ವಿಶೇಷಗಳು)

ಗರುಡ ಸ್ಥಂಭವನೆ ಕಾಣುತ್ತ । ಬಾಗಿ
ಕರಮುಗಿದು ಒಳದ್ವಾರ ಪೊಗುತ । ವಿಮಾನ
ಗಿರಿ ಶ್ರೀನಿವಾಸಗೆರಗುತ್ತ । ಬಂದು
ವರ ತೊಟ್ಟಿ ತೀರ್ಥ ಕೊಳ್ಳುತ್ತ । ಆಹಾ
ತರತರದ ಕಾಣಿಕೆ ಕೊಪ್ಪರಿಗೆಗೆ ಸುರಿಯುತ್ತ
ನಿರುತ ನೀ ಸಲಹೆಂದು ಮೊರೆಯಿಡೆ ಭಕ್ತರು ೪

ಗರುಡನ ಎದುರೊಳು ನಿಂದು । ಸ್ವಾಮಿ
ಗರುವ ರಹಿತ ತಾ ಬಂದು । ಬಂದ
ವರಭಕ್ತರನೆ ಕಾಯ್ವ ಬಿರುದು । ಇಂಥ
ಹರಿಗೆ ಅಮೃತೋದಕವೆರೆದು । ಆಹಾ
ಜರಿಯ ಪೀತಾಂಬರ ಉಡಿಸಿ ಸರ್ವಾಭರಣ
ಹರಿಗೆ ಶೃಂಗರಿಸಿಪ್ಪ ಪರಿಯ ವರ್ಣಿಸಲಳವೆ ೫

ಶಿರದಲಿ ಪೊಳೆವ ಕಿರೀಟ । ಕ
ಸ್ತೂರಿ ತಿಲಕವು ಸುಲಲಾಟ । ಸುರ
ನರರ ಪಾಲಿಪ ವಾರೆ ನೋಟ । ಕರ್ಣದಿ
ಮಿರುಗುವ ಕುಂಡಲ ಮಾಟ । ಆಹ
ವರ ಸಂಪಿಗೆಯ ಪೋಲ್ವ ನಾಸಿಕದ ಕದಪುಗಳ್
ಮೆರೆಯೆ ಕನ್ನಡಿಯಂತೆ ಮುಗುಳು ನಗೆಯ ಚೆಲ್ವ ೬

ಸಿರಿವತ್ಸ ಕೌಸ್ತುಭಹಾರ । ಕಂಠ
ಕರಶಂಖ ಚಕ್ರವಪಾರ । ಸುರ
ನರರಿಗಭಯ ತೋರ್ಪಧೀರ । ಕರ
ದ್ವರವ ಕೊಡುವಂಥ ಉದಾರ । ಆಹ
ತರತರದ ಪುಷ್ಪಗಳ್ ನವರತ್ನ ತುಳಸಿಯ
ಮೆರೆವೊ ಹಾರಗಳನು ಧರಿಸಿರ್ಪ ಗಂಭೀರ ೭

ವಕ್ಷಸ್ಥಳದಲ್ಲಿ ಲಕುಮಿ । ಹರಿ
ಕುಕ್ಷಿಯೊಳ್ ಈರೇಳು ಅವನಿ । ಜಗ

ರಕ್ಷಿಪ ಮಮಕುಲಸ್ವಾಮಿ । ಸರ್ವ
ಸಾಕ್ಷಿಯಾಗಿದ್ದು ತಾ ಪ್ರೇಮಿ । ಆಹ
ಪಕ್ಷಿವಾಹನ ಸುರಾಧ್ಯಕ್ಷ ಖಳ ಶಿಕ್ಷ
ಪಕ್ಷವಹಿಸಿ ಸುರರ ರಕ್ಷಿಪ ಸರ್ವದ ೮

ನಡುವಿನ ನಾಭಿ ವಡ್ಯಾಣ । ಮೇಲೆ
ಉಡಿದಾರ ಗೆಜ್ಜೆ ಕುಂದಣ । ನೆರೆ
ಪಿಡಿದುಟ್ಟ ಪೀತಾಂಬ್ರವರ್ಣ । ಕಾ
ಲ್ಕಡಗ ರುಳಿಯು ಗೆಜ್ಜೆ ಪೂರ್ಣ । ಆಹ
ಮಡದಿಯರುಭಯದಿ ಪರಿಶೋಭಿಸುತಿರೆ
ಪೊಡವಿಯಳೆದ ಪಾದ ದೃಢಭಕ್ತರನೆ ಪೊರೆವ ೯

ನೋಟಕತಿ ಚಲುವ ಗಂಭೀರ । ಭಕ್ತ
ಕೂಟದಿ ಮೆರೆಯುತಪಾರ । ಉತ್ಸ
ವಾಟಗಳಾಡುತ ಸಾರ । ಭೋಕ್ತ
ಸಾಟಿರಹಿತ ಬರುವ ಧೀರ । ಆಹ
ಕೋಟಿದೇವತೆಗಳ ನೋಟದಿಂ ಪೊರೆಯುವ
ದಾಟಿಸುವ ಭವನಾಟಕಧರದೇವ ೧೦

ಮಚ್ಛಾದ್ಯನೇಕ ಅವತಾರ । ಬಹು
ಇಚ್ಛೆಯಿಂದಲಿ ಭಜಿಸುವರ । ಕಾಯ್ವ
ಮೆಚ್ಚುತ ಮನದಲಿ ನಾರ । ಸಿಂಹ
ಸ್ವೇಚ್ಛೆಯಿಂ ಮೆರೆವ ಜಗತ್ಸಾರ । ಆಹ
ತುಚ್ಛಕರು ವಸನ ಬಿಚ್ಚಿ ಸೆಳೆಯುತಿರೆ
ಇಚ್ಛೆಯರಿತು ಲಲನೆ ರಕ್ಷಿಸೆನಲು ಪೊರೆದ ೧೧

ಎಲ್ಲೆಲ್ಲಿ ನೋಡಲು ಭಕ್ತ । ಜನ
ರಲ್ಲಲ್ಲಿ ನೆರೆಯುತ ಮುಕ್ತಾ । ಧೀಶ
ನಲ್ಲದಿನ್ನಿಲ್ಲೆಂದು ಸ್ತುತಿಸುತ್ತ । ಶ್ರೀಶ

ಇಲ್ಲೆ ಬಾರೆಂದು ಕರೆಯುತ್ತ । ಆಹ
ಮಲ್ಲ ಮರ್ಧನ ಎಮ್ಮ ಸೊಲ್ಲು ಲಾಲಿಸೊ ಎನಲು
ಬಲ್ಲಿದ ಭಕ್ತರ ಸೊಲ್ಲಿಗೆ ಒಲಿಯುವ ೧೨

ಬುತ್ತಿ ಪೊಂಗಲು ಮಾರುವರು । ಜನ
ರರ್ಥಿಯಿಂದದನು ಕೊಂಬುವರು । ಗೀತ
ನೃತ್ಯ ವಾದ್ಯಗಳಿಂ ಕುಣಿಯುವರು । ಅನ್ನ
ಅರ್ಥಿಯಿಂ ದಾನ ಮಾಡುವರು । ಆಹ
ಎತ್ತ ನೋಡಲು ಮನಕತ್ಯಂತ ಆನಂದ
ನಿತ್ಯ ಉತ್ಸವಗಳು ಸತ್ಯಾತ್ಮ ಕೈಗೊಂಬ ೧೩

ಇಂತು ಮೆರೆವೊ ಕ್ಷೇತ್ರ ಘನವು । ನೋಡಿ
ನಿಂತು ವರ್ಣಿಸಲಸದಲವು । ಜಗ
ದಂತರಾತ್ಮಕನ ವೈಭವವು । ಗುರು
ಅಂತರ್ಯಾಮಿ ಶ್ರೀನಿಧಿಯು । ಆಹ
ಇಂತು ಬ್ರಹ್ಮೋತ್ಸವ ನಿಂತು ರಥದಿ ಬರುವ
ಕಂತುಪಿತ ಶ್ರೀ ಭೂಮಿಕಾಂತೇರ ಒಡಗೂಡಿ ೧೪

ಶ್ರೀಪತಿ ಜಲದೊಳಾಡೀದ । ಕೂರ್ಮ
ರೂಪದಿಂ ಗಿರಿಯನೆತ್ತಿದ । ಬಹು
ಪಾಪಿ ಕನಕಾಕ್ಷನ ಕೊಂದ । ನೃಹರಿ
ರೂಪ ವಾಮನ ಭೃಗುಜನಾದ । ಆಹ
ಚಾಪಖಂಡನ ಕೃಷ್ಣಚರಿಸಿ ಬತ್ತಲೆ ಕಲ್ಕಿ
ಗೋಪಾಲಕೃಷ್ಣವಿಠ್ಠಲನ ಮಹಾಕ್ಷೇತ್ರ ೧೫

## ೨೫೪ *

ಏರಿ ಬಂದನು ಸೂರ್ಯ । ನಾರಾಯಣ ರಥ
ಏರಿ ಬಂದನು ಸೂರ್ಯ ಪ.

ಏರಿ ಬಂದನು ಸೂರ್ಯ ರಥವನು
ಭಾರಿ ವಸನಾಭರಣ ತೊಡುತಲಿ
ಮೂರುಲೋಕವ ಬೆಳಗು ಮಾಡುತ
ಭಾರಿ ತಮವನು ಛೇದಿಸುತ್ತ ಅ.ಪ.

ಸಪ್ತ ಹಯೆಗಳ್ ಕಟ್ಟುತ । ಚಕ್ರೇಕ ರಥಕೆ
ಸಪ್ತ ಋಷಿಗಳ್ ಪೊಗಳುತ । ಅರುಣ ಸಾರಥ್ಯ
ಸಪ್ತ ಜಿಹ್ವನ ತೆರದಿ ತೋರುತ
ಸಪ್ತ ಶರಧಿಯ ದಾಟಿ ಸಾರುತ
ಸಪ್ತಗಿರಿ ಮೇರು ಸುತ್ತುತಾ ರಥ
ಸಪ್ತಮಿ ಶುಭ ದಿವಸದಲ್ಲಿ ೧

ವಾಲಖಿಲ್ಯರು ಎದುರಲಿ । ಅರವತ್ತು ಸಾವಿರ
ಓಲಗ ತೊಡುತಲಲ್ಲೀ । ಹಿಂದು ಮುಂದಿನಲಿ
ಗಾಲಿದಬ್ಬುವ ರಕ್ಕಸೊಬ್ಬನು
ವ್ಯಾಳನೊಬ್ಬನು ರಜ್ಜರೂಪಕೆ
ಮೇಲೆ ಯಕ್ಷಕಿನ್ನರರು ಸುತ್ತಲು
ಕಾಲಕಾರಿವ ಕರ್ಮ ಸಾಕ್ಷಿಯು ೨

ಉತ್ತರಾಯಣ ಮಾಘದಿ । ಸ್ನಾನವಗೈದು
ಉತ್ತಮರರ್ಘ್ಯ ಕರದಿ । ಪಿಡಿಯುತ್ತ ಭರದಿ
ಉತ್ತಮ ಗಂಗಾದಿ ತೀರ್ಥದಿ
ಉದಿಸಿ ಬರುವಗೆ ಕೊಡುವ ಕತದಿ

---

(ಮಾಘಮಾಸದ ತೀರ್ಥಸ್ನಾನದ ಸಂದರ್ಭಕ್ಕೆ ರಚಿಸಿದ ಕೃತಿ)

ಚಿತ್ತ ನಿರ್ಮಲದಿಂದ ಕಾದಿರೆ
ಹತ್ತಿ ಛಾಯೆಯೆ ಸಹಿತ ರಥದಿ ೩

ಜಗಚಕ್ಷುವೆನಿಸಿದನೂ । ಧರ್ಮಜಗೆ ವಲಿದು
ಮಿಗೆ ಅಕ್ಷಪ್ರದನಾದನೂ । ಸವಿತೃ ನಾಮಕನೂ
ಬಗೆ ಬಗೆಯ ಜೀವರುಗಳಯುವ
ತೆಗೆದು ಸೆಳೆಯುತ ದಿನದಿನದಲಿ
ನಿಗಮಗೋಚರ ನಾಜ್ಞೆಧಾರಕ
ಸುಗುಣರಿಗೆ ಸುಜ್ಞಾನವೀಯುತ ೪

ಶಂಖ ಚಕ್ರಾ ಕಮಲ । ಗದೆಯ ಧರಿಸಿ
ಕಿಂಕರಾದ್ಯರ ನುತಿಗಳ । ಕೇಳುತ್ತ ಬಹಳ
ಶಂಖ ಚಕ್ರಾಂಕಿತನು ಶಿರಿಸಹ
ಶಂಕಿಸದೆ ತನ್ನ ಹೃದಯದಲ್ಲಿರೆ
ಬಿಂಕ ಗೋಪಾಲಕೃಷ್ಣವಿಠಲಗೆ
ಕಿಂಕರನು ತಾನೆಂದು ಪೊಗಳುತ ೫

## ೨೫೫ *

ಚಿರಂಜೀವಿಯಾಗು ಗುರುವರ ಕುಮಾರಿ
ಪರಮಪ್ರಿಯ ಶ್ರೀ ಗುರುಪದಧೂಳಿ ಕರುಣದಲಿ ಪ.

ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿಸುತ
ಅಕ್ಲೇಶಳಾಗಿ ಅನುಗಾಲದಲ್ಲಿ
ಚಿಕ್ಕತನದಿಂದ ಗುರು ಬೋಧಾಮೃತವ ಸವಿದು
ಅಕ್ಕರೆಯಿಂದ ಪಿತ ಮಾತೆ ಪೋಷಿತಳಾಗಿ ೧

ಭೂ ಕಲ್ಪತರುವೆನಿಪ ಗುರುಗಳಿತ್ತಂಕಿತವ
ಜೋಕೆಯಿಂದಲಿ ನಿತ್ಯ ಪಠಣಗೈದು

---

(ತಮ್ಮ ಗುರುಪುತ್ರಿಗೆ ಮಾಡಿದ ಆಶೀರ್ವಾದ ಪದ)

ಏಕಾಂತ ಭಕ್ತಿಯಿಂ ಇಂದಿರೇಶನ ಸ್ತುತಿಸಿ
ಶ್ರೀಕಾಂತ ಹರಿಯ ಮಂಗಳ ಕೃಪೆಯ ಪಡೆಯುತಲಿ ೨

ಪುಟ್ಟಿದಾ ಗೃಹಕೆ ಚಿಂತಾಮಣಿಯು ಎಂದೆನಿಸು
ಶ್ರೇಷ್ಠ ಪತಿ ಗೃಹಕೆ ಗೃಹಲಕ್ಷ್ಮಿ ಎಂದೆನಿಸು
ಅಷ್ಟು ಬಂಧು ಜನಕೆ ಅಮೃತವಾಣಿಯು ಎನಿಸು
ಕೃಷ್ಣ ಭಕ್ತರನು ಪೂಜಿಸುತಲಿರು ಸತತ ೩

ಇಂದು ಗುರುಕೃಪೆಗೈದ ಆಶೀರ್ವಾದದುಡುಗೆಯನು
ಚಂದದಿಂ ಧರಿಸಿ ಮಂಗಳಕರಳು ಎನಿಸಿ
ಒಂದು ಕ್ಷಣ ಬಿಡದೆ ಫಣಿರಾಜಶಯನನ ಸ್ಮರಣೆ
ಮುಂದೆ ಸತ್ಪುತ್ರ ಪೌತ್ರರ ಪಡೆದು ಸುಖದಿ ೪

ನಾಗಶಯನನ ಭಕ್ತನಾದ ಪತಿಯನೆ ಸೇರಿ
ಭೋಗಿಸುತ ಇಹಪರದ ಸುಖಭಾಗ್ಯವ
ಭಾಗವತಪ್ರಿಯ ಗೋಪಾಲಕೃಷ್ಣವಿಠ್ಠಲನ
ಬಾಗಿ ನಮಿಸುತ ಸುಮಂಗಳೆಯಾಗಿ ನಿತ್ಯದಲಿ ೫

## ೨೫೬

ಜೋಜೋ ಶ್ರೀ ಗೋಪಾಲಕೃಷ್ಣ ಮೂರುತಿಯೆ
ಜೋಜೋ ಶ್ರೀ ರುಕ್ಮಿಣೀ ಪತಿ ಲೋಕ ದೊರೆಯೆ
ಜೋಜೋ ಈ ಲೋಕದೊಳು ನಿನಗಿನ್ನು ಸರಿಯೆ
ಜೋಜೋ ಶ್ರೀ ಗುರುಕರಾರ್ಚಿತದಿ ಬಂದ್ಹರಿಯೆ ಪ.

ತಂದೆ ಮುದ್ದುಮೋಹನರು ಕೊಟ್ಟ ಅಂಕಿತದಿ
ಪೊಂದಿದ್ದ ರೂಪ ಗ್ರಹದಲ್ಲಿ ಹೊಂದಿ
ಮುಂದೆಂಟು ವತ್ಸರಕೆ ಎನ್ನೊಡನೆ ಬಂದಿ
ತಂದೆ ಮುದ್ದುಮೋಹನರ ಕರಸ್ಪರ್ಶ ಪೊಂದಿ ೧

(ಅಂಬಾಬಾಯಿಯವರು ಪೂಜಿಸುತ್ತಿದ್ದ ಶ್ರೀ ಕೃಷ್ಣನ ಸ್ತುತಿ)

ನಮ್ಮ ಹಿರಿಯರ ಪೂಜೆ ಒಮ್ಮೊಮ್ಮೆ ಎಂದು
ಒಮ್ಮೆ ದುರುಳನು ಮುಟ್ಟೆ ಮಲಿನಾದೆನೆಂದು
ನಮ್ಮ ಗುರು ಕರಸ್ಪರ್ಶದಿಂ ಪುನಃ ಬಂದು
ರಮ್ಮೆ ಪತಿ ಎನ್ನ ಕರಪೂಜೆ ಬೇಕೆಂದು ೨

ಘನ್ನ ಗುಣರು ನಿನ್ನ ಪೂಜಿಸಿ ಪೋಗಲಂದು
ಮನೆ ಪೆಟ್ಟಿಗೆಯೊಳ್ ಸುಮ್ಮನಿರಲಾರೆನೆಂದು
ಮನಕೆ ಪ್ರೇರಿಸೆ ದುರುಳರಿಗೆ ಕದ್ದು ಒಯ್ದು
ಘನ ಮೂರ್ತಿಗಳು ಪೋಗೆ ನೀನೊಬ್ಬ ಬಂದು ೩

ಬಹುದಿವಸ ಮಲಿನವಾಗಿರುತಿರಲು ನೀನು
ಮಹಮಹಿಮೆ ಅರಿಯಲಿಲ್ಲಾಗ ನಾನಿನ್ನು
ಅಹಹ ನಮ್ಮ ಗುರುಗಳೆರೆಯಲು ಜ್ಞಾನವನ್ನು
ಮಹಿಯೊಳೆನ್ನ ಪೂಜೆಯನು ಬಯಸಿದೆಯೊ ನೀನು ೪

ಮನದಲ್ಲಿ ಪ್ರೇರಿಸಲು ಘನವಲ್ಲವೆಂದು
ಕನಸಿನಲಿ ಎನ್ನ ಹಸ್ತದೊಳ್ ಬಂದು ನಿಂದು
ಸನುಮತದಿ ಹರುಷದಲಿ ನಿನ್ನ ನಾ ತಂದು
ಘನ ಮಹಿಮ ಗುರುಗಳಿಗೆ ಒಪ್ಪಿಸಲು ಅಂದು ೫

ಅಂತರಾತ್ಮನ ಗುರುವು ವಿಗ್ರಹದೊಳಿಟ್ಟು
ಸಂತೋಷದಿಂದ ಮನಮುಟ್ಟಿ ಕೊಡಲಷ್ಟು
ಅಂತಾಯ್ತು ಮಲಿನ ಕುಂದಿತು ತೇಜವೆಷ್ಟು
ನಿಂತೆನ್ನ ಕೈಲಿ ಪೂಜೆಯಗೊಂಬ ಗುಟ್ಟು ೬

ದಿನದಿನಕೆ ಭಜನೆ ಪೂಜೆಯನೆಗೊಂಬ ಚಂದ
ಘನಭಕ್ತರನು ಪೊರೆವ ಬಿರುದು ಆನಂದ
ಮುನಿಜನರ ಮೋಹಕನೆ ಸಚ್ಚಿದಾನಂದ
ಎನಗೊಲಿದೆ ಗೋಪಾಲಕೃಷ್ಣ ಗೋವಿಂದ ೭

ರಮೆ ಬ್ರಹ್ಮ ಸುರರಿಗೆ ಸರಿ ಪೂಜಿಸುವೆನೆ
ಕಮಲಾಕ್ಷ ಅಣು ನಾನು ನಿನ್ನ ಒಲಿಸುವೆನೆ
ರಮಣೀಯವಾದ ವಸ್ತುಗಳ ನಾ ತಹೆನೆ
ಕ್ಷಮಿಸು ನಿನ್ನ ದಾಸಿ ನನ್ನಪರಾಧಗಳನೆ ೮

ಅಂತರಂಗದಲಿಪ್ಪ ಬಿಂಬ ಮೂರುತಿಯೆ
ನಿಂತು ಈ ವಿಗ್ರಹದಿ ಈ ರೀತಿ ಮೆರೆಯೆ
ಸಂತೋಷ ನೋಳ್ಪರಿಗೆ ಕೊಡು ಭಕ್ತಿ ಹರಿಯೆ
ಕಂತುಪಿತ ಕಮಲಾಕ್ಷ ಕಾಯೊ ಸಿರಿದೊರೆಯೆ ೯

ಪೂಜ್ಯಪೂಜಕನೆಂದು ಪೂಜೆ ಮಾಡುವೆನೊ
ಮೂರ್ಜಗತ್ಪತಿ ನಿನ್ನ ಲಾಲಿ ಪಾಡುವೆನೊ
ಪೂಜ್ಯ ಶ್ರೀ ಗೋಪಾಲಕೃಷ್ಣವಿಠ್ಠಲ ನೀನು
ಗೋಜು ಬೇಡನ್ಯರದು ಪೊರೆಯೊ ದಾಸರನು ೧೦

## ೨೫೭ *

ನೋಡಬಲ್ಲಿರೆ ದಿವ್ಯ ಉಡುಪಿ ಕ್ಷೇತ್ರ
ನಾಡಿನೊಳಗಲ್ಲಿ ಪೋದವನೆ ಸತ್ಪಾತ್ರ ಪ.

ಶ್ರೇಷ್ಠ ಸದ್ಗುರು ಚರಣ ಕಮಲಗಳಿಗಭಿನಮಿಸಿ
ಅಷ್ಟು ದೇವತೆಗಳಿಗೆ ಅಭಿವಂದಿಸಿ
ಮುಟ್ಟಿ ಹಿರಿಯರ ಚರಣ ಮಹದಾಜ್ಞೆ ಸ್ವೀಕರಿಸಿ
ಪಟ್ಟ ಬ್ರಹ್ಮನ ಪದಕೆ ಸಿರಿಹರಿಗೆ ಎರಗಿ ೧

ಎಷ್ಟು ಜನ್ಮದ ಫಲವೊ ಈ ಯಾತ್ರೆ ಕೈಕೊಳಲು
ಶ್ರೇಷ್ಠ ಶ್ರೀ ಮಧ್ವಮುನಿ ಮತದಿ ಜನಿಸಿ
ದಿಟ್ಟ ವೈಷ್ಣವರಾದ ಭಕ್ತಸಂಗವ ಕೂಡಿ
ಬಿಟ್ಟು ಮನ ಕಲ್ಮಷಗಳೆಲ್ಲ ಮುಂದೋಡಿ ೨

---

ಉಡುಪಿಯ ಕ್ಷೇತ್ರ ಯಾತ್ರೆಯ ಸಂದರ್ಭದಲ್ಲಿ ರಚಿಸಿದ್ದು. ನೋಡಿ ಕೀ ೨೫೧.

ಭರತಖಂಡದಿ ಪುಟ್ಟಿ ವಾಯುಮತ ಪೊಂದಿದಕೆ
ಹರುಷದಲಿ ಈ ಯಾತ್ರೆ ಗೈದಲ್ಲದೆ
ಪರಿದು ಪೋಗದು ಜೀವದಜ್ಞಾನದಂಧತೆಯು
ಪರಮ ಸುಜ್ಞಾನದಾತನ ನೋಡಬನ್ನಿ ೩

ಮಧ್ವರಾಯರ ಕರುಣ ಮುದ್ದು ಕೃಷ್ಣನ ಕತೆಯು
ಸದ್ವೈಷ್ಣವರ ಸಂಗ ಸನ್ಮೋದ ಲಾಭ
ಹೃದ್ವನಜದಲಿಪ್ಪ ಹರಿಯ ಕಾಣಲು ಮಾರ್ಗ
ಗೆದ್ದು ಭವದಬ್ಧಿ ದಾಟುವಿರಿ ನೀವಿನ್ನು ೪

ಶ್ರೀ ಪತಿಯು ಬಾಲರೂಪದಿ ಇಲ್ಲಿ ನೆಲಸಿಹನು
ಗೋಪಿಕಾಜನಪ್ರಿಯ ಗೋಪಿಬಾಲ
ಗೋಪಾಲಕೃಷ್ಣವಿಠ್ಠಲನ ನೋಡುವ ಪುಣ್ಯ
ಈ ಪರಮ ಪುರುಷನೇ ತಂದಿತ್ತನೆಂದೂ ೫

## ೨೫೮ *

ಪೊರೆಯೊ ಈ ವೇಳೆಯಲಿ ಕರಿಗಿರಿನಿಲಯ ಶ್ರೀ
ನರಹರಿಯೆ ಸುಕ್ಷೇಮವ ಪ.

ಪರಮಪ್ರಿಯರಿಗೆ ಇತ್ತು ವರ ಸೇವೆ ಕೈಕೊಂಡು
ನಿರುತದಿ ಪಾಲಿಸೆನ್ನ ಘನ್ನ ಅ.ಪ.

ದಾಸ ಗುರುಕುಲತಿಲಕರಿವರಿಗೆ ನೀನೀಗ
ಘಾಸಿಗೊಳಿಸುವುದುಚಿತವೆ
ದೋಷದೂರನೆ ಎಮ್ಮ ಮನವನರಿತವ ಜನರ
ದೂಷಣೆಗೆ ಗುರಿ ಮಾಳ್ಪರೆ
ಘಾಸಿಪಡುತಿಹರ ಆಯಾಸಪಡಿಸುವುದು ಬಹು
ಲೇಸಲ್ಲ ನಿನಗೆ ಥರವೆ

---

ತಂದೆ ಮುದ್ದುಮೋಹನ ದಾಸರಿಗೆ ಅನಾರೋಗ್ಯವಾದ ಸಂದರ್ಭ. ನೋಡಿ ಕೀ ೨೫೨.

ಶೇಷಶಯನನೆ ಎಮ್ಮ ಮಾತು ಲಾಲಿಸಿ ಈಗ
ಪೋಷಿಸಲಿ ಬೇಕೊ ಸ್ವಾಮಿ ಪ್ರೇಮಿ ೧

ಕಲ್ಪತರುವಂತಿಹರು ಶಿಷ್ಯವೃಂದಕೆ ಇವರು
ಇಪ್ಪರೋ ಚಂದ ಜಗದಿ
ತಪ್ಪದಲೆ ಆಯುರಾರೋಗ್ಯ ಕೊಟ್ಟು ನೀ
ಸರ್ಪಶಯನನೆ ರಕ್ಷಿಸೊ
ಒಪ್ಪದಿಂದಲಿ ಎಮ್ಮ ಸೇವೆ ಸಫಲವಗೊಳಿಸಿ
ಅಪ್ಪ ಸಂತಸವಪಡಿಸೊ
ಬಪ್ಪ ಪೋಪ ಕೀರ್ತಿ ಅಪಕೀರ್ತಿ ನಿನ್ನಡಿಗೆ
ಪುಷ್ಪದಂತರ್ಪಿಸುವೆನೊ ನೃಹರಿ ೨

ಮನವಚನ ಕಾಯದಲಿ ಅನ್ಯ ಬಗೆಯದೆ
ಎಮ್ಮ ಗುರುಗಳನು ಸೇವಿಸುವೆವೊ
ವನಜಾಕ್ಷ ಲಕುಮಿಪತಿ ಎನ್ನ ಮನ ಪ್ರೇರಕನೆ
ಚಿನುಮಯನೆ ನೀ ಸಾಕ್ಷಿಯೋ
ಮನುಜರಿದನೇನ ಬಲ್ಲರು ಕೇಳು ತಂತಮ್ಮ
ಮನ ಬಂದ ತೆರ ನುಡಿವರೊ
ಎನಗದರ ಗೊಡವೇನು ನೀನಿರಲು ಭಯವೇನು
ಘನ ಮಹಿಮ ಪೊರೆಯೊ ಬೇಗ ಸ್ವಾಮಿ ೩

ಪಂಚಪ್ರಾಣರು ಇವರು ವಂಚನಿಲ್ಲದೆ ಪೇಳ್ವೆ
ಮುಂಚೆ ನೀ ಕಾಪಾಡೆಲೊ
ಸಂಚಿತಾಗಾಮಿ ಪ್ರಾರಬ್ಧ ದುಷ್ಕರ್ಮಗಳು
ಮಿಂಚಿನಂದದಿ ಮಾಡೆಲೊ
ಸಂಚಿತಾಗಾಮಿಗಳ ಶಿಷ್ಯರಿಗೆ ಕಳೆವರಿಗೆ
ಕೊಂಚ ಬಾಧೆಯ ಕೊಡದೆಲೊ
ಸಂಚಿಂತಿತ ಪ್ರದನೆ ಎನ್ನ ಮೊರೆ ಲಾಲಿಸು
ಅಚಂಚಲದ ಕ್ಷೇಮವೀಯೋ ದೇವ ೪

ಕಾಪಾಡುವ ಕರ್ತ ಈ ಪರಿ ಪ್ರಾರ್ಥಿಸುವೆ
ಶ್ರೀ ಪತಿಯೆ ದಯವ ಮಾಡೊ
ನಾ ಪೇಳ್ವುದಿನ್ನೇನು ನಿನ್ನ ಸೇವಾದಿಗಳು
ಕೃಪೆಯಿಂದ ಗುರುಗಳಿಂದ
ಪಾಪ ಪರಿಹರನೆ ನೀ ಕೈಕೊಂಡು ಕೀರ್ತಿಯನು
ಈ ಪೃಥ್ವಿಯಲ್ಲಿ ನೆಲಸೊ
ಗೋಪಾಲಕೃಷ್ಣವಿಠ್ಠಲನೆ ನೀ ಕಾಪಾಡು
ಕಾಪಾಡು ಜಗದ್ರಕ್ಷಕ ಹರಿಯೆ ೫

## ೨೫೯ *

ಮುತ್ತೈದೆಯಾದೆ ನಾ ಮುರವೈರಿ ದಯದಿ
ನಿತ್ಯತೃಪ್ತನು ಎನ್ನ ನಿಜಕರವ ಪಿಡಿಯೆ ಪ.

ಗುರುಗಳುಪದೇಶಾಂಬುಧಿಯಲಿ ಪುಟ್ಟಿದ ಎನ್ನ
ಕರೆದರು ಕಮಲಾಭಿದಾನದಿಂದ
ವರುಷವೆಂಟಾಗೆ ಗುರುಜನಕ ಎನ್ನನುದಯದಿ
ಸಿರಿವರನೆ ಪೊರೆ ಎಂದು ಒಪ್ಪಿಸಿದ ಕತದಿಂ ೧

ಗುರು ಕೊಟ್ಟ ಅಂಕಿತವೆ ಮಾಂಗಲ್ಯವಾಯ್ತೆನಗೆ
ಗುರುವಿಟ್ಟ ನಾಮವೆ ತಿಲುಕವಾಯ್ತು
ಗುರುಕರುಣವೆಂಬ ಕವಚವ ತೊಟ್ಟೆ ಹರುಷದಲಿ
ಗುರು ಪ್ರೀತಿ ಎಂಬ ವಸನವನುಟ್ಟು ಮುದದಿ ೨

ಗುರುವು ಬೋಧಿಸಿದ ಭಕ್ತಿ ಜ್ಞಾನ ವೈರಾಗ್ಯ
ಸರಿ ಮಾಡಿ ಮೂರು ಕಾಲಿನ ಜಡೆಯನು
ಪರಿಪರಿಯ ತತ್ವಗಳೆ ಚೌರಿ ರಾಗುಟಿ ಗೊಂಡ್ಯ
ಗುರುವಾಜ್ಞೆ ಎಂಬ ಪುಷ್ಪವ ಧರಿಸಿ ಶಿರದಿ ೩

---

(ಅಂಬಾಬಾಯಿಯವರು ತಮಗೆ ಅಂಕಿತದೊರೆತ ಸಂದರ್ಭದಲ್ಲಿ ರಚಿಸಿದ್ದು)

ಗುರುವಾಕ್ಯ ಶ್ರವಣವೇ ಕರ್ಣಕುಂಡಲವಾಯ್ತು
ಗುರುವಿನ ನಿರ್ಮಾಲ್ಯವೇ ನಾಸಿಕಾಭರಣ
ಗುರುನಾಮಗಳೆ ರತ್ನ ಪರಿಪರಿಯ ಹಾರಗಳು
ಗುರುಭಕ್ತಿ ಎಂಬ ನಡು ಒಡ್ಯಾಣ ಧರಿಸಿ ೪

ಗುರುವು ಪೇಳಿದ ಸದ್ಗುಣಗಳೆ ಪಾದಾಭರಣ
ಗುರುವಿನ್ವಾತ್ಸಲ್ಯವೆ ಪರಿಮಳ ದ್ರವ್ಯ
ಗುರು ಅನುಗ್ರಹವೆಂಬೊ ಮಂಗಳ ದ್ರವ್ಯಗಳು
ಗುರು ಮಾತೆ ಎನ್ನ ಪೋಷಿಸಿ ಹರಿಗೆ ಕೊಡಲು ೫

ಹೃದಯವೆ ಲಗ್ನ ಮಂಟಪ ದಿವ್ಯ ಶೃಂಗಾರ
ಪದುಮಭವ ಸುರರೆ ನೆರದಿಹ ಬಂಧು ಬಳಗ
ಒದಗಿ ಬಹ ಸುಜ್ಞಾನ ಸಂಬಾರ ಸಲಕರಣೆ
ಮದನ ಪಿತನೆದುರಿಗೆ ನಿಲಿಸಿ ಧಾರೆಯನೆರೆಯೆ ೬

ಗುರುವೆ ಜನನಿ ಜನಕ ಗುರುವೆ ಪುರೋಹಿತರು
ಗುರುವಚನವೆಂಬ ಅಕ್ಷತೆ ಎರಚುತಿರಲು
ಪರಮ ಜೀವಚ್ಛಾದಿ ಕದ ಪರದೆ ತೆಗೆಯುತಿರೆ
ಹರಿಗೆ ಗುಣನಾಮ ಜೀರಿಗೆ ಬೆಲ್ಲ ಎರಚೆ ೭

ಸುಮನೊ ವೃತ್ತಿಗಳೆಂಬ ಕಮಲದ್ಹಾರವನ್ಹಾಕಿ
ಕಮಲನಾಭನ ಪದಕೆರಗಿ ನಿಲಲೂ
ಕಮಲಹಸ್ತವ ಶಿರದ ಮೇಲಿಟ್ಟು ಶ್ರೀ ಕೃಷ್ಣ
ಕಮಲೆ ನಿನ್ನನು ಪೊರೆವೆನೆಂಬ ಅಭಯ ಕೊಡಲು ೮

ಮುಕ್ತಿ ಸುಖವೆಂಬ ಮಂಗಳ ಸೂತ್ರ ಬಂಧಿಸಲು
ಮುಕ್ತರಾರಾಧ್ಯ ಲಕ್ಷ್ಮೀಕಾಂತನು
ಮುಕ್ತರಾರಾಧ್ಯ ಜಗದ್ಭರ್ತೃ ಮುನಿಜನವಂದ್ಯ
ವ್ಯಕ್ತನಾಗಲು ಮನದಿ ಗುರು ಕಟಾಕ್ಷದಲಿ ೯

ಗುರು ತಿಳಿಸಿದಂಥ ಸ್ವರೂಪದರ್ಪಣ ನೋಡಿ
ಪರಮ ಸೌಭಾಗ್ಯ ಆನಂದಪಡುವೆ
ಗುರುಗಳಂತರ್ಯಾಮಿ ಗೋಪಾಲಕೃಷ್ಣವಿಠ್ಠಲ
ಗುರುಬಿಂಬನೇ ಎನಗೆ ಸುಖವ ಪಾಲಿಸಲಿ ೧೦

## ೨೬೦ *

ಶಿಲೆಯಲ್ಲಿ ಮಮತೆಯೇ ಸಿದ್ಧ ಪುರುಷ
ಇಳೆಮೂರು ವ್ಯಾಪಕಗೆ ಈ ಮುನಿಯ ಬಳಿಯಾ ಪ.

ದಶರಥಾತ್ಮಜ ಸೇತು ಬಂಧನವ ಗೈಯಲೂ
ಅಸಮ ಸಾಹಸದಿ ಗಿರಿಗಳನೆ ತಂದೇ
ಹಸನಾದ ಶಿಲೆಯೊಂದರಲಿ ರೂಪ ಮೂಡುವಡೆ
ವಸುಧಿ ಸುತೆಪತಿ ಬೇಡವೆನುತಿರ್ದನೇನ್ನೈ ೧

ನಡುಗೆ ಹುಲಿ ಘರ್ಜನೆಗೆ ಪಡೆದವಳ ಕೈ ಜಾರೆ
ವಡೆದು ಶತವಾಗಲಾ ಗಿರಿಯಲ್ಲಿ ಮಮತೇ
ವಡಮೂಡದವಗೆ ಈ ವಡೆದ ಪ್ರತೀಕದಲಿ
ಇಡುತ ಅಭಿಮಾನವನು ಕಡು ಪೂಜೆಗೊಂಬೇ ೨

ಧರೆಯಲ್ಲಿ ಚರಿಸಿ ಸದ್ಭಕ್ತರ ಜ್ಞಾನವನು
ಹರಿಸಿ ಸದ್ಗ್ರಂಥ ಕನ್ನಡಿಯ ತೋರಿ
ಗಿರಿ ಏರುವಾಗ ಬೇಕೆನಲು ಶಿಲೆ ಇರಲಿಲ್ಲೆ
ಬಿರುಕಾದ ಕಲ್ಲಿನಲ್ಲಿ ನೆಲಸಿರುವದೇನ್ನೈ ೩

ಶಿಲೆಯೆ ನೀನೆನ್ನಲು ಅಜ್ಞಾನಿ ನುಡಿಯಹುದು
ಶಿಲೆಯಲ್ಲಿ ನೀನೆಲು ಮತ್ತೊಂದು ಶಿಗದೇ
ಬಲು ಛಿದ್ರ ತಂತಿಯಲಿ ಬಿಗಿಸಿ ಪೂಜೆಯಗೊಂಬ
ಬಲವಂತದಾ ಮಹಿಮೆ ತಿಳಿಯಲಳವಲ್ಲಾ ೪

---

ಸಾಗರಕಟ್ಟೆಯ ಪ್ರದ್ಯುಮ್ನತೀರ್ಥರು ಪೂಜಿಸುತ್ತಿದ್ದ ಭಿನ್ನಪ್ರಾಣ ದೇವರನ್ನು ಕುರಿತು. ನೋಡಿ ಕೀ ೨೫೦)

ತಾಪಸರ ಪೂಜೆ ಸತ್ವವ ತೋರ್ವ ವೈಭವವೋ
ಆಪನ್ನರನೆ ಕಾಯ್ವ ಆನಂದವೋ
ಶ್ರೀ ಪರಮಹಂಸ ಪ್ರದ್ಯುಮ್ನತೀರ್ಥರಿಗೊಲಿದೆ
ಗೋಪಾಲಕೃಷ್ಣವಿಠ್ಠಲನ ನಿಜದಾಸ ೫

## ೨೬೧ *

ಸತ್ಯವಂತನೊ ನೀನು ಸರಸಿಜಾಕ್ಷ
ಉತ್ಪತ್ತಿರಹಿತ ಸಿರಿ ನಿತ್ಯಾವಿಯೋಗ ಪ.

ಶ್ರೀನಿವಾಸನೆ ಕೃಷ್ಣ ಭಾನು ಪ್ರಕಾಶ ಹರಿ
ಏನೆಂಬೆ ನಿನ್ನ ಪ್ರಭಾವವನ್ನು
ನಾನಾ ವಿಧದಿಂದ ಭಕ್ತರ ಕಾಯ್ವ ನರಹರಿಯೆ
ಮಾನವಂತರ ಕಾಯ್ವ ದಾನವಾಂತಕನೆ ೧

ಕೃಷ್ಣಮೂರುತಿ ನಿನ್ನ ದರುಶನದ ಕಾರಣದಿ
ಶ್ರೇಷ್ಠ ಗುರುಗಳಿಗೆ ನೀ ಕ್ಲೇಶ ತಂದೊಡ್ಡಿ
ಇಷ್ಟು ಪರಿಯಲಿ ಎನ್ನ ಮನವ ಶೋಧಿಸಿ ನೋಡಿ
ಕಷ್ಟ ಕಳೆದೆಯೊ ಈಗ ಕರುಣಾಳು ದೇವ ೨

ಗುರುಗಳಿಗೆ ಬಂದಂಥ ರೋಗವನೆ ಪರಿಹರಿಸಿ
ಕರುಣಿಸಿದೆ ಮನಕೆ ಬಹು ಆನಂದವನ್ನು
ಪರತರನೆ ಇದರಂತೆ ಭವರೋಗವನೆ ಹರಿಸಿ
ನಿರುತ ನಿನ್ನಯ ಪಾದಸ್ಥಾನ ನೀಡೆನಗೆ ೩

ಸುರಪನಿಗೆ ಬಂದಂಥ ಪರಿಪರಿಯ ಕಷ್ಟದಿಂ
ಹರಿಯೆ ನಿನ್ನಾಜ್ಞೆಯಿಂದೆಲ್ಲರೂ ಕೂಡಿ

---

(ಗುರುಗಳು ಅನಾರೋಗ್ಯದಿಂದ ಚೇತರಿಸಿಗೊಡಾಗ ಬರೆದ ಧನ್ವಂತ್ರಿ ಸ್ತುತಿ. ನೋಡಿ ಕೀ. ೨೫೩, ೨೫೮)

ಸುರರು ಅಸುರರು ಕಲೆತು ಶರಧಿ ಮಥಿಸುತಲಿರಲು
ಕರುಣೆಯಿಂದಲಿ ಸುಧೆಯ ಕಲಶ ತಂದವನೆ ೪

ವಂಚನೆಯ ಪೆಣ್ಣಾಗಿ ವಂಚಿಸಿ ದೈತ್ಯರನು
ಹಂಚಿಕೆಂದಲಿ ಅಮೃತ ಸುರರಿಗುಣಿಸಿ
ಪಂಚಬಾಣನ ಪಿತನೆ ಸುರರ ರಕ್ಷಕನಾದೆ
ವಂಚಿಸದೆ ಎಮ್ಮಗಳ ನೀನೀಗ ಕಾಯೊ ೫

ಅಮೃತಹಸ್ತನೆ ಕೃಷ್ಣ ಅಮೃತವಿತ್ತು ಕಾಯೊ
ಅಮೃತರಲ್ಲವೆ ನಿನ್ನ ಪಟ್ಟಣದ ಜನರು
ಅಮೃತ ಕಿರಣಾಂತರ್ಯಾಮಿಯೆ ಶಾಂತ ಧನ್ವಂತ್ರಿ
ಅಮೃತರಾಗುವರ್ಯೆಯ್ಯ ನಿನ್ನ ನಂಬಿದರೆ ೬

ಸಚ್ಚಿದಾನಂದ ಸರ್ವೋತ್ತಮನೆ ಶ್ರೀ ಕೃಷ್ಣ
ಬಿಚ್ಚಿ ಸಲಹಯ್ಯ ಎನ್ನಜ್ಞಾನ ಬಂಧ
ಅಚ್ಯುತಾನಂತ ಶ್ರೀ ಗುರುಗಳಂತರ್ಯಾಮಿ
ಅಚ್ಚವೈಷ್ಣವ ಪ್ರಿಯ ಗೋಪಾಲಕೃಷ್ಣವಿಠ್ಠಲ ೭

## ೦ ೨೬೨ *

ಹರಿಗುರು ಕರುಣದಿ ದೊರಕಿದುದೆನಗೀ
ಪರಮ ಪಾವನ ತಂಬೂರಿ ಪ.

ನರಹರಿ ಭಕ್ತರು ಒಲಿದೆನಗಿತ್ತರು
ಸುಲಲಿತ ನಾದದ ತಂಬೂರಿ ಅ.ಪ.

ತಂದೆ ಮುದ್ದುಮೋಹನರು ಸ್ವಪ್ನದಿ
ತಂದು ತೋರಿದಂಥ ತಂಬೂರಿ
ನಂದ ಕಂದನ ಗುಣ ಅಂದದಿ ಸ್ತುತಿಸೆ ಆ-
ನಂದವ ತೋರುವ ತಂಬೂರಿ

(ಗುರುಗಳಿಂದ ಅಂಕಿತ ಪಡೆದು ಹರಿದಾಸರಾಗಿ ತಂಬೂರಿ ಹಿಡಿದ ಸಂದರ್ಭ)

ಇಂದಿರೇಶನ ಭಕ್ತರಂದದಿ ಧರಿಸುವ
ರೆಂದೆಂದಿಗು ಈ ತಂಬೂರಿ
ನೊಂದು ಭವದೊಳು ತಪ್ತರಾದವರಿಗೆ
ಬಂಧನ ಬಿಡಿಸುವ ತಂಬೂರಿ ೧

ಅಂತರಭಕ್ತರು ಹರುಷದಿ ನುಡಿಸುವ
ಕಂತುಪಿತಗೆ ಪ್ರೀತಿ ತಂಬೂರಿ
ಸಂತತ ಮಾನಾಭಿಮಾನವ ತೊರೆದು ಏ-
ಕಾಂತದಿ ಸುಖಿಸುವ ತಂಬೂರಿ
ಶಾಂತದಿ ನಾರದಾದಿಗಳು ವೈಕುಂಠದಿ
ನಿಂತು ನುಡಿಸುವಂಥ ತಂಬೂರಿ
ಪಂಥದಿ ಹರಿಪಾದಂಗಳ ಭಜಿಸೆ ನಿ-
ಶ್ಚಿಂತೆಯ ಮಾಳ್ಪಂಥ ತಂಬೂರಿ ೨

ಬಲು ಬಲು ಪರಿಯಲಿ ಹರಿದಾಸತ್ವಕೆ
ಬರುವಂತೆ ಮಾಡಿದ ತಂಬೂರಿ
ಛಲದಿಂದಲಿ ಶ್ರೀ ಹರಿ ತಾನಿತ್ತಿಸಿದ
ಒಲುಮೆಯಿಂದಲಿ ಈ ತಂಬೂರಿ
ನೆಲೆಯಾದೆನು ಹರಿದಾಸರ ಮಾರ್ಗದಿ
ಕಲುಷವ ಕಳೆದಿತು ತಂಬೂರಿ
ಸುಲಭದಿಂದ ಶ್ರೀ ಗುರುಗಳು ಕರುಣಿಸಿ
ನೆಲೆಗೆ ನಿಲಿಸಿದಂಥ ತಂಬೂರಿ ೩

ಶ್ರೀನಿವಾಸನು ತಾ ಕೊಡಿಸಿದನು
ಏನೆಂಬೆನು ಈ ತಂಬೂರಿ
ಮಾನಾಭಿಮಾನವ ತೊಲಗಿಸುವುದಕೆ
ಕಾರಣವಾಗಿಹ ತಂಬೂರಿ
ಶ್ರೀನಿಧಿ ಸೊಸೆ ಬಹು ಆನಂದದಲಿ

ತಾ ನುಡಿಸುವಳೀ ತಂಬೂರಿ
ಗಾನಲೋಲ ಕೃಷ್ಣ ತಾನೊಲಿವುದಕೆ
ಕಾರಣ ಮಾಡಿಹ ತಂಬೂರಿ ೬

ಬೆಟ್ಟದೊಡೆಯ ತಾನಿಷ್ಟು ಹಟವ ಮಾಡಿ
ಕೊಟ್ಟೀ ಕೊಟ್ಟನು ತಂಬೂರಿ
ಎಷ್ಟು ನಾಚಿಕೆಪಟ್ಟರು ಬಿಡದಲೆ
ಕಷ್ಟ ಕಳೆಯಲಿತ್ತ ತಂಬೂರಿ
ಬಿಟ್ಟು ಹೋಯಿತು ಭವ ಕಟ್ಟು ಇಂದೆನ್ನನು
ಮುಟ್ಟಿಸಿತ್ತರಿಪುರ ತಂಬೂರಿ
ಎಷ್ಟು ಹೇಳಲಿ ಶ್ರೀನಿಧಿ ಗೋಪಾಲ
ಕೃಷ್ಣವಿಠ್ಠಲನಿತ್ತ ತಂಬೂರಿ ೫

# ದೀರ್ಘ ಕೃತಿಗಳು

## ಶ್ರೀ ಕೃಷ್ಣ ಬಾಲಲೀಲೆ ಜೋಗುಳ

### ೨೬೩

ನಮೋ ನಮೋ ಗುರುಚರಣಕಮಲಗಳಿಗೆರಗುವೆನು
ಕ್ರಮದಿಂದೆ ಸುರರಿಗಭಿನಮಿಸಿ । ಅಭಿನಮಿಸಿ ಪೇಳುವೆನು
ಕಮಲನಾಭನ್ನ ಜೋಗುಳವ ೧

ತರತಮ್ಯಕ್ರಮದಿಂದ ವರಸಿದ್ಧಿನಾಯಕಗೆ
ಗಿರಿಜೆ ಹರನಡಿಗೆ ಭಾರತಿಗೆ । ಭಾರತಿಯ ಪತಿಪದಕೆ
ಸಿರಿಕೃಷ್ಣನಡಿಗೆ ನಮಿಸೂವೆ ೨

ಪುಟ್ಟೀತು ಮನದಲ್ಲಿ ಕೃಷ್ಣಲೀಲೆಯ ಸ್ಮರಣೆ
ಥಟ್ಟನೆದ್ದೀಗ ಬರೆಯುವೆ । ಬರೆದು ಹರಿಚರಿತೆಯನು
ಶ್ರೇಷ್ಠ ಗುರುಚರಣಕರ್ಪಿಸುವೆ ೩

ಅನ್ಯಸ್ಮರಣೆಗಳೇಕೆ ಅನ್ಯವಾರ್ತೆಗಳೇಕೆ
ಅನ್ಯರಾಡುವೊ ನುಡಿಯೇಕೆ । ನುಡಿಯೇಕೆ ಶ್ರೀಕೃಷ್ಣ
ನಿನ್ನ ನೆನಹೆನಗೆ ಆನಂದ ೪

ಚಿನ್ಮಯಾತ್ಮಕ ಕೃಷ್ಣ ಎನ್ನ ಹೃದಯದಿ ನಿಂದು
ತನ್ನ ಸೇವಕರ ಒಡಗೂಡಿ । ಒಡಗೂಡಿ ನುಡಿಸುವನು
ಘನ್ನ ಗುರುಕೃಪೆಯನನುಸರಿಸಿ ೫

ಕ್ಷೀರಾಬ್ಧಿಯಲಿ ರಮೆಯ ಸೇರಿ ಹರಿ ಪವಡಿಸಿರೆ
ಗೋರೂಪದಿಂದ ಭೂದೇವಿ । ಭೂದೇವಿ ಪ್ರಾರ್ಥಿಸಲು
ದಾರುಣಿಗೆ ಅಭಯವಿತ್ತನು ೬

ರಮ್ಮೆಯರಸನು ಆಗ ಸುಮ್ಮನಸರೊಡಗೂಡಿ
ತಮ್ಮನಿಗೆ ತಮ್ಮನಾಗ್ಯವತರಿಸೆ । ಅವತರಿಸೆ ಮನ ಮಾಡಿ
ಚಿನ್ಮಯನು ಧರೆಗಿಳಿದು ಬಂದಾನು ೭

ಮಥುರೆಯಲಿ ದೇವಕಿಯು ಮದುಮಗಳು ಆಗಿರಲು
ಮುದದಿಂದ ರಥದಿ ಕುಳ್ಳಿರಿಸಿ । ಕುಳ್ಳಿರಿಸಿ ಪತಿಯೊಡನೆ
ಸುದತಿಯರ ಮೇಳ ಬರುತಿರಲು ೮

ವಸುದೇವ ದೇವಕಿಗೆ ಕುಶಲದಲಿ ಮೆರವಣಿಗೆ
ಹಸನದಲಿ ಕಂಸ ನಡೆಸುತಿರೆ । ನಡೆಸುತಿರೆ ನಭದಲ್ಲಿ
ಉಸುರಿತಶರೀರ ವಾಕ್ಕೊಂದು ೯

ಮದವೇಕೆ ರಕ್ಕಸನೆ ಸುದತಿಗೆಂಟನೆ ಗರ್ಭ
ಅದು ನಿನಗೆ ಮೃತ್ಯುವೆಂದೆನಲು । ಎಂದೆನಲು ಪಲ್ಕಡಿದು
ಸುದತಿಯನೆ ಕೊಲ್ಲಲನುವಾದ ೧೦

ಬೇಡ ಬೇಡಲೊ ಕಂಸ ಬೇಡಿಕೊಂಬೆನೊ ನಿನ್ನ
ಕಾಡದಿರು ಶಿಶುವ ಕೊಡುವೆನು । ಕೊಡುವೆ ಮನ ಬಂದಂತೆ
ಮಾಡೆಂದು ತಡೆದ ವಸುದೇವ ೧೧

ದುರುಳ ಸೆರೆಮನೆಯಲ್ಲಿ ಇರಿಸಿ ದಂಪತಿಗಳನು
ಕರುಣವಿಲ್ಲದೆಲೆ ಜನಿಸಿದ । ಜನಿಸಿದಾ ಮಕ್ಕಳನು
ತರಿದಾನಾಗೈದು ಮೇಲೊಂದು ೧೨

ಕಟ್ಟಿತೇಳನೆ ಗರ್ಭ ಕಷ್ಟ ಸಹಿಸದೆ ಹರಿಗೆ
ಇಟ್ಟ ಮೊರೆ ಕೇಳಿ ಶ್ರೀ ಕೃಷ್ಣ । ಶ್ರೀ ಕೃಷ್ಣ ಕರುಣದಲಿ
ಅಷ್ಟಮಾ ಗರ್ಭಕರಸಾದ ೧೩

ಉದರದಲಿ ಶ್ರೀ ಕೃಷ್ಣ ಉದುಭವಿಸುತಿರಲಾಗ
ಮುದವಾಯ್ತು ಮನಕೆ ದೇವಕಿಗೆ । ದೇವಕಿಗೆ ವಸುದೇವ
ಬೆದರಬೇಡೆಂದು ಮನ್ನಿಸಿದ ೧೪

ಕಾರಗಾರದಿ ಗರ್ಭ ಬೆಳೆಯುತಿರೆ ದೇವಕಿಗೆ
ಸೇರಿ ನಭದಲ್ಲಿ ಬ್ರಹ್ಮಾದಿ । ಬ್ರಹ್ಮಾದಿ ಸುರರೆಲ್ಲ
ಶ್ರೀ ರಮಣನನು ಸ್ತುತಿಸಿದರು ೧೫

ವಸುದೇವ ದೇವಕಿಗೆ ಶಿಶುವಾಗಿ ಅವತರಿಸಿ
ಅಸುರನನೆ ಕೊಂದು ವಸುಧೆಯನು । ವಸುಧೆಯನು ಸಲಹೆಂದು
ಕುಸುಮನಾಭನಿಗೆರಗಿದರು ೧೬

ತುಂಬೆ ನವಮಾಸಗಳು ಅಂಬುಜಾಕ್ಷಿಗೆ ಆಗ
ಕುಂಭಿಣಿಯ ಮೇಲೆ ಶ್ರೀ ಕೃಷ್ಣ । ಶ್ರೀ ಕೃಷ್ಣ ಪುಟ್ಟಿದನು
ಅಂಬರದಿ ದೇವಗಣ ಸ್ತುತಿಸೆ ೧೭

ಚತುರ ಭುಜದಿಂದ ಶ್ರೀ ಪತಿಯು ಉದುಭವಿಸೆ
ಗತಿ ನೀನೆ ಎಂದು ಪ್ರಾರ್ಥಿಸಲು । ಪ್ರಾರ್ಥಿಸಲು ವಸುದೇವ
ನಸುನಗುತ ಕೃಷ್ಣ ಇಂತೆಂದ ೧೮

ಕಂಸ ಬೆಳಗಾಗುತಲೆ ಹಿಂಸೆಪಡಿಸುವ ಎನ್ನ
ಸಂಶಯಪಡದೆ ಗೋಕುಲಕೆ । ಗೋಕುಲಕೆ ಕೊಂಡೊಯ್ದು
ಕಂಸನಿಗೆ ದುರ್ಗೆಯನು ನೀ ತೋರು ೧೯

ಎನುತ ಈ ರೀತಿಯಲಿ ಮನಮೋಹಕ ಸ್ವಾಮಿ
ಮನುಜರಂದದಲಿ ಮಗುವಾಗಿ । ಮಗುವಾಗಿ ಘನ ಮಹಿಮ
ಮಲಗಿರಿಲು ಅರ್ಧರಾತ್ರಿಯಲಿ ೨೦

ಜನನದೂರನು ತಾನು ಜನಿಸಿದನು ಎಂದೆನಿಸಿ
ಜನನಿ ಜನಕರನು ಸಲಹಲು । ಸಲಹಲು ತೋರಿದನು
ಜನಸಿದಾಕ್ಷಣ ತನ್ನ ಅದ್ಭುತವ ೨೧

ನಿಗಡ ಬಂಧನವೆಲ್ಲ ತನಗೆ ತಾನೇ ಸಡಲಿ
ತೆಗೆದವೊ ಬೀಗ ಮುದ್ರೆಗಳು । ಮುದ್ರೆಯು ಕಳಚೇ
ನಿಗಮಗೋಚರನ ಕೊಂಡೊಯ್ದು ೨೨

ಕತ್ತಲೆಯ ರಾತ್ರಿಯಲಿ ಒತ್ತಿ ಬರುತಿರೆ ವೃಷ್ಟಿ
ಛತ್ತರಿಯು ಆಗೆ ಫಣಿರಾಜ । ಫಣಿರಾಜ ವಸುದೇವ
ಎತ್ತಿಕೊಂಡ್ಹೊರಟ ಶಿಶುವನ್ನು ೨೩

ಘೋರೆಂಬ ಯಮುನೆ ತಾ ದಾರಿ ಬಿಟ್ಟಳು ಹರಿಗೆ
ಸೇರಿದನು ಗೋಕುಲವ ಕ್ಷೇಮದಲಿ । ಕ್ಷೇಮದಲಿ ಸಮರಾತ್ರಿ
ಸಾರಿ ಕಲೆತನು ನಂದಗೋಪನ್ನ ೨೪

ನಂದಗೋಪನ ಸತಿಯು ನಂದನೆಯು ಪೆತ್ತಿರಲು
ಇಂದಿರೇಶನನ ಅಲ್ಲಿಟ್ಟು । ಅಲ್ಲಿಟ್ಟು ದುರ್ಗೆಯನು
ತಂದು ತೋರಿದನು ಕಂಸನಿಗೆ ೨೫

ಸಿಟ್ಟಿನಿಂದಲಿ ಕಂಸ ಕುಟ್ಟುವನಿತರೊಳ್ಹೊಸರಿ
ಅಷ್ಟಭುಜದಿಂದ ನಭದಲ್ಲಿ । ನಭದಲ್ಲಿ ದುರ್ಗೆ ತಾ
ದುಷ್ಟನಿಗೆ ಸಾರಿ ಪೇಳಿದಳೂ ೨೬

ನಿನ್ನ ಕೊಲ್ಲುವ ವೈರಿ ಅನ್ಯತ್ರದಲಿ ಬೆಳೆದು
ತನ್ನ ಸಂಕಲ್ಪದನುಸಾರ । ಅನುಸಾರ ನಡೆಸುವನೂ
ಎನ್ನುತಲಿ ಮಾಯ ಪೊಂದಿದಳು ೨೭

ನಂದಗೋಪಗೆ ಮುದ್ದು ಕಂದ ಪುಟ್ಟಿದನೆಂದು
ಸುಂದರಾಂಗಿಯರು ಪಾಡುತ್ತ । ಪಾಡುತ್ತ ಆರುತಿಯಾ
ತಂದು ಬೆಳಗಿದರು ಶ್ರೀ ಹರಿಗೆ ೨೮

ಪುಟ್ಟ ಮಕ್ಕಳನೆಲ್ಲ ಕುಟ್ಟಿ ಕೊಲ್ಲುವೆನೆಂದೂ
ಅಟ್ಟಿದನು ಕಂಸ ರಾಕ್ಷಸರ । ರಾಕ್ಷಸರು ಆಜ್ಞೆಯಲಿ
ಥಟ್ಟನೇ ತೆರಳಿದರು ದಿಶೆದಿಶೆಗೆ ೨೯

ಕೆಟ್ಟ ಪೂತನಿಯೆಂಬ ದುಷ್ಟ ರಕ್ಕಸಿ ಬಹಳ
ಶಿಷ್ಟಳಂತೆ ನಟಿಸಿ ಗೋಕುಲಕೆ । ಗೋಕುಲಕೆ ಸಾರುತ್ತ
ದೃಷ್ಟಿಸಿ ನೋಡಿದಳು ಕಂದನ್ನ ೩೦

ಪುಟ್ಟಬಾಯಲಿ ತನ್ನ ಬಟ್ಟ ಕುಚಗಳನಿಟ್ಟು
ಕೊಟ್ಟಳು ವಿಷದ ಮೊಲೆಯನ್ನು । ಮೊಲೆಯನ್ನು ಚೀಪುತ್ತಾ
ದುಷ್ಟೆ ಅಸುವನ್ನೇ ಹೀರಿದನು ೩೧

ದಶರಾತ್ರಿ ಕಳೆಯುತಿರೆ ಅಸುರ ಸಂಹಾರನಿಗೆ
ಶಶಿಮುಖಿಯರೆಲ್ಲ ನೀರೆರೆದು । ನೀರೆರೆದು ಬಾಣಂತಿ
ಹಸುಮಗುವ ಹರಸಿ ಪಾಡಿದರೂ ೩೨

ವಿಧಿಕರ್ಮಗಳನೆಲ್ಲ ಮುದದಿಂದ ನಡಿಸುತಲಿ
ಬುಧರಿಗನ್ನಾದಿ ದಾನಗಳ । ದಾನಗಳ ಗೈಯ್ಯುತಲಿ
ಮುದವಾಂತ ಮನದೊಳಗೆ ನಂದಗೋಪ ೩೩

ಅಷ್ಟಮಿಯ ಜಾತನಿಗೆ ಶ್ರೇಷ್ಠ ಗುರುಗಳ ಕರೆಸು
ಕೃಷ್ಣನೆಂತೆಂಬೋ ಪೆಸರಿಟ್ಟು । ಪೆಸರಿಟ್ಟು ತೊಟ್ಟಿಲನು
ಕಟ್ಟಿ ಪಾಡಿದರು ಜೋಗುಳವ ೩೪

ಶಿಶುವೆಂದು ಶ್ರೀಶನ್ನ ಯಶೋದೆ ಕೂಗಿದಳು
ಹಸುಮಗನೆ ಅಳದೆ ಮಲಗಮ್ಮ । ಮಲಗಮ್ಮ ರಕ್ಕಸರು
ಘಸಳಿಗೊಳಿಸ್ಯಾರು ಬಂದಿನ್ನು ೩೫

ಹಿಡಿದ ಹಟ ಬಿಡವಲ್ಲ ಕುಡಿಯಲೊಲ್ಲನು ಮೊಲೆಯ
ಕಡುಪಾಪಿ ವಿಷ ಉಣಿಸಿದಂದಿನಿಂದ । ಅಂದಿನಿಂ ನೆನೆನೆನೆದು
ಬಿಡುತಿಹನು ಎನ್ನ ಮೊಲೆಹಾಲು ೩೬

ಬಂಡಿ ಮುರಿದಾರಭ್ಯ ಚಂಡಿಹಿಡಿದಿಹ ಕೃಷ್ಣ
ಕಂಡ ಮಂತ್ರಗಳ ಯಂತ್ರಗಳ । ಯಂತ್ರಗಳ ಮಾಡಿದರು
ಕಂಡು ಬೆದರುವನೇ ತೊಟ್ಟಿಲೊಳು ೩೭

ಗಣಿಸಲಾರದೆ ವೇದ ಎಣಿಸುತಿರೆ ಹರಿಮಹಿಮೆ
ತೃಣನ ಕೊಂದಂಥಾ ಶ್ರೀ ಕೃಷ್ಣ । ಶ್ರೀ ಕೃಷ್ಣ ತಾನೀಗ
ತೃಣ ತಗಲೆ ಬೆದರಿ ನಡಗುವನು ೩೮

ಅಚ್ಯುತನು ತಾನೀಗ ರಚ್ಚು ಹಿಡಿದನಮ್ಮ
ಬಿಚ್ಚಿಹನು ಕಣ್ಣು ಕೈಕಾಲು । ಕೈಕಾಲು ಮಣ್ಣಗಿದು
ಬೆಚ್ಚುವಂದದಲಿ ಬಾಯ್ತೆರೆವ ೩೯

ಬಲಗೈಯ ಚಾಚುವನು ಛಲ ಹಿಡಿದು ಕಾಡುವನು
ಮೊಲೆ ಉಣ್ಣದೆ ಹಸಿವಾ ಸಹಿಸುವನು । ಸಹಿಸುವನು ಶ್ರೀ ಕೃಷ್ಣ
ಹಲವು ರಕ್ಕಸರ ಕೊಲ್ಲುವನೂ ೪೦

ಬಟ್ಟೆ ಹೊಚ್ಚಲು ಒದ್ದು ಬತ್ತಲೇ ಮಲಗುವನು
ಕೆಟ್ಟ ಕೋಪದಿ ಕೈಯ್ಯನೆತ್ತವನು । ಎತ್ತುವನು ಶ್ರೀ ಕೃಷ್ಣ
ದೃಷ್ಟಿ ತಾಕೀತೆ ಕಂದನಿಗೆ ೪೧

ದೃಷ್ಟಿ ತೆಗೆದಳು ಗೋಪಿ ಕೃಷ್ಣಮೂರುತಿಗಾಗ
ಥಟ್ಟನೆತ್ತಿದಳು ಆರತಿಯಾ । ಆರತಿಯ ಬೆಳಗುತ್ತ
ತೊಟ್ಟಿಲೊಳಗಿಟ್ಟು ಪಾಡಿದಳು ೪೨

ಮಗ್ಗುಲಾಗುವ ಕಂದ ಮೊಗಚಿ ಬೀಳುವ ರನ್ನ
ಮೊಗ ನೋಡಿ ತಾಯ ನಗುವೋನು । ನಗುವ ರಂಗಯ್ಯನ್ನ
ಮಗನೆಂದು ಬಿಗಿದು ಅಪ್ಪಿದಳು ೪೩

ತೊಟ್ಟಿಲೊಳು ಮಲಗುತ್ತ ಬೊಟ್ಟು ಬಾಯಲಿ ಚೀಪಿ
ಪುಟ್ಟಪಾದವ ಪಿಡಿದು ಕೈಯಲ್ಲಿ । ಕೈಪಿಡಿದು ಉಂಗುಷ್ಟ
ಕೃಷ್ಣ ಜುರುಜುರನೆ ಚೀಪಿ ನಲಿಯುವನು ೪೪

ಜಪತಪಗಳಿಗೆ ಸಿಗದ ಅಪರಿಮಿತ ಮಹಿಮನ್ನ
ಸುಫಲದಾಯಕನ ಗೋಪ್ಯಮ್ಮ । ಗೋಪ್ಯಮ್ಮ ಮಗನೆಂದು
ಗುಪಿತದಲಿ ಪಾಡಿ ನಲಿವೋಳು ೪೫

ಕೊರಳ ಸರವನೆ ಪಿಡಿದು ಅರೆಗಣ್ಣು ನೋಟದಲಿ
ಕಿರುನಗೆಯ ನಗುತ ಶ್ರೀ ಕೃಷ್ಣಾ । ಶ್ರೀ ಕೃಷ್ಣಾ ಮೊಲೆಯುಣುವಾ
ವರಭಾಗ್ಯ ಗೋಪಿ ಪೊಂದಿದಳು ೪೬

ರಂಗ ಹಸಿದಿಹನೆಂದು ಅಂಗನೆಯು ಮೊಲೆಯೂಡಿ
ರಂಗು ಮಾಣಿಕದ ಉಡುಗೆಜ್ಜೆ । ಉಡುಗೆಜ್ಜೆ ನೇವರಿಸಿ
ಬುಂಗಾಯಿ ಮುದ್ದಿಟ್ಟು ನಲಿವೋಳೂ ೪೭

ಬೂಚಿ ಬಂದಿತೊ ರಂಗ ಪಾಚಿಕೊಳ್ಳೆಲೋ ಸ್ವಾಮಿ
ತಾಚೀಯ ಕೊಡುವೆ ಏಳುತಲೆ । ಏಳುತಲೆ ಮೊಲೆ ಉಣಿಸೀ
ಬಾಚಿ ತಲೆ ಹೂವ ಮುಡಿಸೂವೆ ೪೮

ಅರಳೆಯು ಮಾಗಾಯಿ ಕೊರಳ ಮುತ್ತಿನಹಾರ
ವರವಂಟಿ ಮುತ್ತು ಚೌಕಳಿಯು । ಚೌಕಳಿಯು ಉಡಿದಾರ
ಚರಣದಾಭರಣ ರಂಗನಿಗೆ ೪೯

ನೀಲಮಾಣೀಕದೊಜ್ರ ಹರಳೀನುಂಗುರವಿಟ್ಟು
ತೋಳ ಬಾಪುರಿಯ ಕಟ್ಟುತಲಿ । ಕಟ್ಟುತಲಿ ಶೃಂಗರಿಸೀ
ನೀಲದಂಗಿಯನೆ ತೊಡಿಸುವಳು ೫೦

ಅಂಬೆಗಾಲಿಕ್ಕುತಿರೆ ಅಂಬುಜೋದ್ಭವ ಪಿತನು
ತುಂಬಿದಾ ತೊಡೆಯು ಕಣಕಾಲು । ಕಣಕಾಲು ಸೊಬಗುಗಳ
ರಂಭೆ ತಾ ಕಂಡು ನಲಿಯುವಳು ೫೧

ಹಿಡಿಯಲ್ಹೋದರೆ ಕೃಷ್ಣ ಅಂಬೆಗಾಲೋಟದಲಿ
ಪಡೆದವಳ ತಿರುಗಿ ನೋಡುವನು । ನೋಡಿ ಕಿರುನಗೆ ನಗಲು
ಪಿಡಿದೆತ್ತಿ ಮುದ್ದನಾಡುವಳು ೫೨

ಅರವಿಂದ ಮುಖಕಾಂತಿ ಅರಳಿದಾ ನೇತ್ರಗಳು
ಶಿರಿಯು ಚುಂಬಿಸುವ ತುಟಿಕೆಂಪು । ತುಂಟಿಕೆಂಪು ಮುದ್ದಿಸುತಾ
ಸುರಿದಳೂ ಸುಖವ ಗೋಪ್ಯಮ್ಮ ೫೩

ತುಂಬಿದಾ ಗಲ್ಲಗಳು ಕಂಬು ಕಂಠವ ಸೊಬಗು
ಅಂಬುಜನಯ್ಯನಾ ಸಿರಿ ವಕ್ಷ । ಸಿರಿ ವಕ್ಷ ಎದೆಗೊತ್ತಿ
ಚುಂಬಿಸೀ ಗೋಪಿ ನಲಿಯುವಳು ೫೪

ದಟ್ಟಡಿಯನಿಡುವಂಥ ಪುಟ್ಟ ಚರಣಾಕಮಲ
ಸೃಷ್ಟಿಕರ್ತನಿಗೆ ವಶವಲ್ಲ । ವಶವಲ್ಲದಾ ಪಾದ
ಮುಟ್ಟಿ ಧೂಳೊರಸಿ ಮುದ್ದಿಪಳು ೫೫

ರಂಗನ್ನ ಸಿಂಗರಿಸಿ ಅಂಗಳಕೆ ಬಿಡಲಾರೆ
ಅಂಗನೆಯರೆಲ್ಲ ನೊಡುವರು । ನೋಡಿದರೆ ಮುಖಬಾಡಿ
ರಂಗನಿಗೆ ದೃಷ್ಟಿ ತಾಕೀತು ೫೬

ನಂದಗೋಪನ ಗೃಹದಿ ಕಂದಪುಟ್ಟಿಹನಂತೆ
ಮಂದಿಗಳ ಮಗುವಿನ್ಹಾಗಲ್ಲ । ಹಾಂಗಲ್ಲ ಎಂದೆನುತ
ಬಂದು ನೋಡಿವರು ಸುದತಿಯರು ೫೭

ಬಾಲನ್ನ ಶೃಂಗರಿಸಿ ಬೈಲಿಗೇ ಬಿಟ್ಟರೇ
ಬಾಲೆಯರ ಕಣ್ಣಾಲೆ ದೃಷ್ಟೀಯು । ದೃಷ್ಟಿ ತಾಕುವುದೆಂದು
ಶೀಲೆ ತಾ ಹೋರಗೆ ಬಿಡದಿಹಳು ೫೮

ಜಗಕೆ ಅಚ್ಚರಿಯಂತೆ ನಿಗಮ ಗೋಚರನಂತೆ
ಮಗುವಾಗಿ ಪುಟ್ಟಿ ಇಹನಂತೆ । ಇಹನಂತೆ ಎಂದೆನುತ
ಸುಗುಣೆಯರು ಬಂದು ನೋಡುವರು ೫೯

ಅಕ್ಕರದಿ ಗೋಪಿಯರು ಚಿಕ್ಕ ಬಾಲನೆ ಎಂದು
ಸಕ್ಕರೆಯ ಕೊಡುತ ಪಿಡಿದೆತ್ತಿ । ಎತ್ತಿ ತಮ್ಮಾಲಯಕೆ
ರಕ್ಕಸಾಂತಕನ ವೈಯ್ಯುವರು ೬೦

ಕೆನೆಹಾಲು ಕೊಡುವೊರು ಮನದಣಿಯ ನೋಡುವರು
ಚಿನುಮಯಾತ್ಮಕನ ಸಿರಿಸೊಬಗ । ಸಿರಿಸೊಬಗ ನಿಟ್ಟಿಸುತ
ಘನಗುಣನ ಅಪ್ಪಿ ನಲಿಯುವರು ೬೧

ಅಷ್ಟು ಕೆಲಸಗಳಾಯ್ತು ಕೃಷ್ಣ ಬರಲಿಲ್ಲೆಂದು
ಬಿಟ್ಟಿರದೆ ಗೋಪಿ ಬಳಲಿದಳು । ಬಳಲಿ ತಾ ಬೇಡಿದಳು
ಶ್ರೇಷ್ಠ ನಾರಿಯರೆ ಕರೆತನ್ನಿ ೬೨

ಹೊತ್ತಾಯಿತೆಲೊ ಕಂದ ಒತ್ತುತಿದೆ ಮೊಲೆಹಾಲು
ಚಿತ್ತಜಾನಯ್ಯ ಕುಡಿಯಮ್ಮ । ಕುಡಿ ಎಂದು ಪಾಲುಣಿಸಿ
ಎತ್ತಿ ಜೋಗುಳದಿ ಮಲಗಿಸುತ ೬೩

ಸದ್ದು ಮಾಡಬೇಡಿ ಮುದ್ದು ಕಂದನಿಗೀಗ
ನಿದ್ರೆ ಬಂದಿಹುದು ಜಗವೆಲ್ಲ । ಜಗವೆಲ್ಲ ಉದರದಲಿ
ಪೊದ್ದಿಕೊಂಡಿರುವ ಚಿನ್ನನಿಗೆ ೬೪

ಅರೆನಿದ್ರೆಯಿಂದೆದ್ದು ಕಿರಿಕಿರಿಯ ಮಾಡವಲೆ
ಹರಿ ಸುಖದ ನಿದ್ರೆಗೈಯ್ಯೆಂದು । ಗೈಯ್ಯೆಂದು ಗೋಪ್ಯಮ್ಮ
ಸಿರಿಕಾಂತನನ್ನು ತೂಗಿದಳು ೬೫

ಅಂಧಕಾರದ ಒಳಗೆ ಒಂದು ಇಲ್ಲದೆ ವೇಳೆ
ಕಂದ ನೀ ಆಲದೆಲೆ ಮೇಲೆ । ಎಲೆ ಮೇಲೆ ಪವಡಿಸಿರೆ
ಅಂದ್ಯಾರು ನಿನ್ನ ತೂಗಿದರೊ ೬೬

ಶೇಷ ಹಾಸಿಗೆಯಂತೆ ವಾಸುದೇವನು ಅಂತೆ
ಸಾಸಿರಾನಾಮದರಸಂತೆ । ಅರಸಂತೆ ಶ್ರೀ ಕೃಷ್ಣಾ
ಕೂಸಾಗಿ ಇಲ್ಲಿ ಇಹನಂತೆ ೬೭

ಕಡಲೊಳಗೆ ಗೃಹವಂತೆ ಮಡದಿ ಚಂಚಲಳಂತೆ
ಕಡುಕ್ರೂರ ಸರ್ಪಶಯನಂತೆ । ಶಯನಂತೆ ಕಂದಮ್ಮ
ಮೃಡನೊಡೆಯ ಪೊಡವಿಗರಸಂತೆ ೬೮

ಮಚ್ಚನಾಗೀ ಹರಿಯು ತುಚ್ಚತಮನನು ಕೊಂದು
ಅಚ್ಯುತನು ವೇದ ತಾ ತಂದ । ತಾ ತಂದ ಕಾಲಕ್ಕೆ
ಹೊಚ್ಚಿ ತೂಗುವರು ಇಲ್ಲಂತೆ ೬೯

ಗಿರಿಯ ಬೆನ್ನಲಿ ಪೊತ್ತು ತರುಣಿರೂಪವನಾಂತು
ಸುರರಿಗಮೃತವನು ತಾನೆರೆದು । ಎರೆದು ಶ್ರಮ ಪಟ್ಟಾ
ಮರೆಸಿ ತೂಗುವರು ಇಲ್ಲಂತೆ ೭೦

ಧರಣಿಚೋರನ ಕೊಂದು ಘುರ ಘುರನೆ ಚೀರುತಿರೆ
ಎರದು ಬಿಸಿನೀರು ಪಾಲುಣಿಸಿ । ಪಾಲುಣಿಸಿ ತೂಗುವರು
ವರಹನಿಗೆ ಯಾರೂ ಇಲ್ಲಂತೆ ೭೧

ಕಂದನಾ ಮೊರೆ ಕೇಳಿ ಕಂಭದಿಂದಲಿ ಬಂದು
ಸಂದಕಾಲದಲಿ ಅಸುರನ್ನ । ಅಸುರನ್ನ ಕೊಂದಂಥ
ಕಂದನ್ನ ತೂಗ್ವೋರಿಲ್ಲಂತೆ ೭೨

ವ್ರತಗೈದು ಅದಿತಿ ತಾ ಸುತನ ಪಡೆದರೆ ಮಗುವು
ಅತಿಬೇಗ ಬೆಳೆದು ಬಲಿಯಾಗ । ಬಲಿಯಾಗಕ್ಕೋಡಿದರೆ
ಸುತನೆಂದು ತೂಗುವರು ಯಾರುಂಟು ೭೩

ಪುಟ್ಟುತಲೆ ಕೋಪದಲಿ ಇಟ್ಟು ಹೆಗಲಲಿ ಕೊಡಲಿ
ತೊಟ್ಟು ತಿರುಗಿದರೆ ರಂಗನ್ನ । ರಂಗನ್ನ ತೊಟ್ಟಿಲೊಳು
ಇಟ್ಟು ತೂಗುವರು ಯಾರಮ್ಮ ೭೪

ಕೌಸಲ್ಯ ಸುತನೆಂದು ಪೋಷಿಸುವ ಕಾಲದಲಿ
ಶ್ರೀಶ ಶ್ರೀ ರಾಮನ್ನ ಕೌಶಿಕನು । ಕೌಶಿಕನು ಕರೆದೊಯ್ಯೆ
ಆಶೆಯಲಿ ತೂಗಲಿಲ್ಲಂತೆ ೭೫

ಮುದ್ದು ಕೂಸಾಗೀಗ ಸದ್ದುಮಾಡದೆ ಮಲಗು
ಕದ್ದು ವೈದಾರು ತಪಸಿಗಳು । ತಪಸಿಗಳು ಮುನಿಗಳಿಗೆ
ಮುದ್ದುಕೃಷ್ಣನ್ನ ಕೊಡಲಾರೆ ೭೬

ಉಟ್ಟ ಬಟ್ಟೆಯ ಬಿಚ್ಚೆ ಅಷ್ಟು ಜನ ನಗುವೋರು
ಕೆಟ್ಟ ಕೂಸೆಂದು ಜರಿಯುವರು । ಜರಿಯುವರು ಚಿಣ್ಣನ್ನ
ಪುಟ್ಟನೆಂದ್ಯಾರು ತೂಗುವರು ೭೭

ಹರಿಯನೇರುತ ನೀನು ಹರಿದೋಡಿ ಪೋದರೆ
ಹರಿ ನಿನ್ನ ಲಾಲಿಪರು ಯಾರಯ್ಯ । ಯಾರಯ್ಯ ನಾ ಕಾಣೆ
ಹರಸಿ ತೂಗುವೆನು ಮಲಗಮ್ಮ ೭೮

ಜೋ ಜೋ ಪಾಡುವೆ ರಂಗ ಜೋ ಜೋ ಪಾಡುವೆ ಕೃಷ್ಣ
ಜೋ ಜೋ ಎನ್ನ ಭಂಗಾರಿ । ಭಂಗಾರಿ ಸಿಂಗಾರಿ
ಜೋ ಜೋ ಲಾಲಿಸುತ ಮಲಗಮ್ಮ ೭೯

ಅಪ್ಪಾಲು ಅತಿರಸ ಅರಳುಂಡೆ ಕೊಡುವೇನು
ತುಪ್ಪದಲಿ ಕರಿದ ಚಕ್ಕುಲಿಯು । ಚಕ್ಕುಲಿ ಅಪ್ಪಚ್ಚಿ
ಅಪ್ಪಯ್ಯ ಕೊಡುವೆ ಮಲಗಮ್ಮ ೮೦

ಕಾಸಿ ಆಕಳ ಹಾಲು ಕಲ್ಲು ಸಕ್ಕರೆ ಹಾಕಿ
ಕೂಸು ನಿನಗೀಗ ಕೊಡುವೇನು । ಕೊಡುವೆನೇಳುತಲೆ ನಾ
ತಾಸ್ಹೊತ್ತು ನಿದ್ರೆ ಮಾಡಮ್ಮ ೮೧

ಇಷ್ಟು ಲಾಲಿಸಿ ಗೋಪಿ ಕಂದನ್ನ ಮಲಗಿಸುತ
ನೆಟ್ಟನೇ ಮನೆಕೆಲಸಕ್ಹೊರಟಾಳು । ಹೊರಟು ಗಡಿಬಿಡಿಯಿಂದ
ಕಟ್ಟಿದಳು ಸೆರಗು ಕೆಲಸಕ್ಕೆ ೮೨

ಕೃಷ್ಣ ಏಳುವ ಮುಂಚೆ ಅಷ್ಟು ಹಸು ಪಾಲ್ಗರೆದು
ಪೆಟ್ಟಿಗೆಯೊಳಿಟ್ಟು ಮುಚ್ಚಿಡುವೆ । ಮುಚ್ಚಿಡಾದಿರೆ ರಂಗ
ಅಷ್ಟು ಕೊಡು ಎಂದು ಕಾಡುವನು ೮೩

ಬಾಲ ಏಳದ ಮುನ್ನ ಹಾಲು ಕರೆಸುತ ಈಗ
ಮೇಲೆ ನೆಲುವಿನಲಿ ಮರೆ ಮಾಡ್ವೆ । ಮರೆ ಮಾಡದಿರೆ ಕೃಷ್ಣ
ಹಾಲು ಕೊಡು ಎಂದು ಕಾಡುವನು ೮೪

ಕಂದ ಎದ್ದರೆ ಇನ್ನು ಕೈಬಿಡದೆ ಹಠ ಹಿಡಿವ
ಚಂದದಡಿಗೆಗಳ ಮಾಡೂವೆ । ಮಾಡಿ ಹರಿ ಏಳುತಲೆ
ಕಂದನಿಗೆ ಮೊಮ್ಮನುಣಿಸುವೆ ೮೫

ಭರನಿದ್ರೆ ಬಂದಿರಲು ಹರಿಪರಿವೆಯನು ಮರೆತೂ
ತರುಣಿಯರೊಡನೆ ಗೋಪ್ಯಮ್ಮ । ಗೋಪಿ ಮಾತಾಡುತಿರೆ
ಅರಚಿಕೊಂಡಳುತ ಎಚ್ಚೆತ್ತಾ ೮೬

ಓಡಿ ಬರುತಲೆ ಗೋಪಿ ನಾಡಿಗೊಡೆಯನ ಎತ್ತಿ
ನೋಡಿ ಮುಖಕಮಲ ಮುದ್ದಿಟ್ಟು । ಮುದ್ದಿಟ್ಟು ಮೊಲೆಯೂಡಿ
ಮಾಡಿದಳು ಸ್ನೇಹ ಮೈಮರೆದೂ ೮೭

ಕ್ಷೀರಾಬ್ಧಿಶಯನನಿಗೆ ನಾರಿ ಪಾಲುಣಿಪುದನೂ
ಸೇರಿ ನಭದಲ್ಲಿ ಸುರಗಣರೂ । ಸುರಗಣರು ನೋಡುತ್ತಾ
ನಾರಿಭಾಗ್ಯವನೆ ಸ್ತುತಿಸಿದರು ೮೮

ಕ್ಷೀರ ಶರಧಿಯೊಳಂದು ತಾರೇಶ ಉದ್ಭವಿಸೆ
ಕ್ಷೀರಾಬ್ಧಿ ಉಕ್ಕಿತ್ಹರುಷದಲಿ । ಉಕ್ಕಿದಾ ಪಾಲ್ಬಂದು
ಸೇರಿತೊ ಗೋಪಿ ಕುಚಗಳಲಿ ೮೯

ಪಾಲ್ಗಡಲ ದೊರೆತನಗೆ ಸುತೆಯನಿತ್ತುಪಕೃತಿಗೆ
ಶ್ರೀಲೋಲ ಶಿಶುವಾಗಿ ಮಾತೇಯ । ಮಾತೆಯಾ ಪೊಟ್ಟೆಯೊಳು
ಪಾಲಿಸುವ ಮಾವನ್ನ ತಾನಿಟ್ಟು ೯೦

ತರುಣಿ ರೂಪವ ತಳೆದು ಸುರರಿಗಮೃತವನುಣಿಸೆ
ಎರೆಯಲಿಲ್ಲಾರು ತನಗಾಗ । ತನಗಮೃತ ಎಂದೆನುತ
ತರುಣಿ ಹೃದಯದಲಿ ತಂದಿತ್ತಾ ೯೧

ಬಚಿಟ್ಟ ಅಮೃತವನು ಬಟ್ಟ ಕುಚಗಳ ಪಿಡಿದು
ಮುಚ್ಚಿ ಶರಗೀಗ ಕುಡಿಯುವನು । ಕುಡಿಯುವನು ಎಂದೆನುತ
ಎಚ್ಚೆತ್ತು ಸುರರು ನೋಡುವರು ೯೨

ನಿತ್ಯವಲ್ಲದೆ ಸುಧೆಯ ಇತ್ತು ಸುರರಿಗೆ ಅಂದು
ಮತ್ತೀಗ ಗೋಪಿ ಮೊಲೆ ಸುಧೆಯ । ಮೊಲೆ ಸುಧೆಯ ತದ್ರೂಪ
ಸತ್ಯದಲಿ ಭೋಗಿಸಿದ ಸಾರ ಭೋಕ್ತ ೯೩

ಪಾಲ್ಗಡಲ ಅಂಶದಾ ಬಾಲೆ ಮೊಲೆ ಹಾಲಿನಲಿ
ಬಾಲಕೃಷ್ಣನ್ನ ಮುಖಚಂದ್ರ । ಮುಖಚಂದ್ರ ಬಿಂಬಕ್ಕೆ
ಹಾಲು ತಾನಾಗಿ ಉಕ್ಕಿದುದು ೯೪

ಅರೆನಿದ್ದೆಗಣ್ಣಿನಲಿ ಅರೆನೋಟ ಆತುರದಿ
ಭರದಿಂದ ಪಿಡಿದು ಪಾಲ್ಧರವ । ಪಾಲ್ಧರವ ಶ್ರೀ ಕೃಷ್ಣ
ಜುರುಜುರನೆ ಎಲ್ಲವನು ಸವಿದುಂಡ ೯೫

ನಿತ್ಯತೃಪ್ತನು ಆಗ ತೃಪ್ತನಾದವನಂತೆ
ಪೆತ್ತವಳ ನೋಡಿ ನಸುನಗಲು । ನಸುನಗಲು ಮುದ್ದಿಟ್ಟು
ಎತ್ತಿ ಕೆಳಗಿಳಿಸಿದಳು ಗೋಪ್ಯಮ್ಮ ೯೬

ಅಳದೆ ಆಡೆಲೊ ಕಂದ ಆನೆ ಕುದುರೆಯ ಕೊಡುವೆ
ಗಿಳಿಯು ಬಸವಣ್ಣ ಗೊಂಬೆಗಳು । ಗೊಂಬೆಗಳ ನೋಡಮ್ಮ
ಎಳೆಗೂಸು ನೀ ಆಟ ಆಡಮ್ಮ ೯೭

ಪುಟ್ಟ ಕಂದಮ್ಮಗಳು ಎಷ್ಟು ಜಾಣರು ನೋಡು
ಬಿಟ್ಟು ತಾಯ್ ಕೈಯ್ಯಾ ಆಡುವರು । ಆಡದಲೆ ಅವರಂತೆ
ಕೃಷ್ಣಯ್ಯ ಎನ್ನ ನೀ ಕಾಡುವರೆ ೯೮

ವಾರಿಗೆಯ ಮಕ್ಕಳು ಸೇರಿಹರು ಅಂಗಳದಿ
ಮಾರಮಣ ನೀನು ಅವರೊಡನೆ । ಅವರೊಡನೆ ಆಡಮ್ಮ
ತೋರಿದಾ ತಿಂಡಿ ಕೊಡುವೇನು ೯೯

ಚಕ್ಕುಲಿಯ ಮಾಡುವೆನು ಚಿಕ್ಕರಂಗಗೆ ಕೊಡುವೆ
ಅಕ್ಕರದಿ ಅಂಗಿ ಕೊಡಿಸುವೆನು । ಕೊಡಿಸುವೆನು ಬಾಲಯ್ಯ
ಮಕ್ಕಳೊಡಗೂಡಿ ಆಡಮ್ಮ ೧೦೦

ಬಾಲ ನೀ ಹಸಿವೆನಲು ಪಾಲೋಗರವ ಕಲೆಸಿ
ಮೇಲೆ ಸಕ್ಕರೆಯ ಹಾಕೂವೆ । ಹಾಕೂವೆ ಹೆತ್ತುಪ್ಪ
ಬಾಲಕೃಷ್ಣಯ್ಯಗುಣಿಸೂವೆ ೧೦೧

ಕಾಡದಿರು ಕೃಷ್ಣಯ್ಯ ಮಾಡಿರುವೆ ಮಧುಪಾಕ
ಬೇಡಿದಾ ರೀತಿ ಬಡಿಸೂವೆ । ಬಡಿಸಿ ಕಲಿಸೂತ ನಿನಗೆ
ಆಡಾಡ ಬುತ್ತಿ ಉಣಿಸೂವೆ ೧೦೨

ಅಬ್ಜಜಾಂಡವ ಕೋಟಿ ಇಂಬಿಟ್ಟಿ ಹೊಟ್ಟೆಯಲಿ
ಸಂಭ್ರಮಾದಿಂದ ಉಣುತೀಗ । ಉಣುತೀಗ ಶ್ರೀ ಲೋಲ
ತುಂಬಿತೂ ಹೊಟ್ಟೆ ಸಾಕೆಂದ ೧೦೩

ಹಸುಗೂಸಿಗುಣಿಸಾಯ್ತು ಹಸನದಲಿ ನಾನೀಗ
ಹಸುರಿನಾ ಗೆಜ್ಜೆ ಕಟ್ಟುವೆನು । ಕಟ್ಟುವೆನು ಕಮಲಾಕ್ಷ
ಹೊಸಮೊಗವ ನೋಡಿ ನಲಿದೇನು ೧೦೪

ಲಾಲಿಸುತ ಗೋಪ್ಯಮ್ಮ ಭಾಳ ಸಂತೋಷದಲಿ
ಬಾಲನ್ನ ಬಿಗಿದಪ್ಪಿ ಮುದ್ದಿಡುತಾ । ಮುದ್ದಿಡುವ ಸಮಯದಲಿ
ಬಾಲೆಯರು ಬಂದು ಮುತ್ತಿದರು ೧೦೫

ಗೋಪ್ಯಮ್ಮ ಇವನಂಥ ರೂಪುಳ್ಳ ಬಾಲನ್ನ
ಪಾಪಿ ಕಣ್ಣಿಂದ ನೋಡಿಲ್ಲೆ । ನೋಡಿಲ್ಲ ಇನ್ನೆಲ್ಲು
ಶ್ರೀ ಪತಿಯ ತಾರೆ ಮುದ್ದಿಪೆವು ೧೦೬

ಶೀಲೆ ನಿನ್ನ ಮಗನು ಶ್ರೀ ಲೋಲ ಹೌದಂತೆ
ಭೂಲಲನೆ ಮೊರೆಯ ಕೇಳುತಲಿ । ಕೇಳುತಲಿ ರಕ್ಕಸರ
ಸೀಳಬೇಕೆಂದು ಇಹನಂತೆ ೧೦೭

ವಂಚನೆಯ ಕಂಸ ತಾ ಹೊಂಚು ಹಾಕುತ ಖಳರ
ಸಂಚಿನಿಂದಟ್ಟುತಿಹನಂತೆ । ಇಹನಂತೆ ಅವರ ಹರಿ
ಪಂಚತ್ವವೈದಿಸುವನಂತೆ ೧೦೮

ಬಾಲರಂಗನ ತಾರೆ ಬಾಲಕೃಷ್ಣನ ತೋರೆ
ಮೇಲಿನಾನಂದ ಸುರಿದೇವೆ । ಸುರಿದೇವೆ ಎಂದೆನುತ
ಬಾಲೆಯರು ಎತ್ತಿ ನಲಿವೊರು ೧೦೯

ಮುದ್ದು ಚಿನ್ನನ ತಾರೆ ಪದ್ಮನಾಭನ ತೋರೆ
ಪದ್ಮಮುಖೀ ಕೃಷ್ಣ ರೂಪಕ್ಕೆ । ರೂಪಕ್ಕೆ ನಾವೆಲ್ಲ
ಮುಗ್ಧರಾಗಿಹೆವೆ ಎತ್ತೇವೆ ೧೧೦

ಸರ್ಪಶಯನನ ತಾರೆ ಅಪ್ಪಿ ಮುದ್ದಾಡುವೆವೆ
ತುಪ್ಪ ಸಕ್ಕರೆಯ ಕೊಟ್ಟೇವೆ । ಕೊಟ್ಟೇವೆ ಗೋಪ್ಯಮ್ಮ
ಅಪ್ಪ ರಂಗನ್ನ ತಾರಮ್ಮ ೧೧೧

ಜನ್ಮ ಸಾರ್ಥಕವಾಯ್ತು ಜಾತಿ ಉಧೃತವಾಯ್ತು
ಚಿನ್ಮಯನು ನಮಗೆ ಒಲಿದಾನೆ । ಒಲಿದಾನೆ ಗೋಪ್ಯಮ್ಮ
ಕಣ್ತಣಿಯ ನೋಡಿ ನಲಿದೇವೆ ೧೧೨

ಗುಂಡು ಬಿಂದಲಿ ಇಟ್ಟ ದುಂಡು ಕೈಯ್ಯಿಗಳಿಂದ
ಅಂಡಜಾವಾಹನನ ತಾರಮ್ಮ । ತಾರಮ್ಮ ನಾವೆಲ್ಲ
ಪುಂಡರೀಕಾಕ್ಷನ್ನ ನೋಡೇವು ೧೧೩

ರನ್ನ ಮಾಣಿಕದೊಜ್ರ ಚಿನ್ನದುಂಗುರವಿಟ್ಟು
ರನ್ನೆ ಗೋಪ್ಯಮ್ಮ ಬೆರಳುಗಳ । ಬೆರಳುಗಳನಾಡಿಸುತ
ಹೊನ್ನು ತಾ ಗುಬ್ಬಿ ಆಡಿದಳು ೧೧೪

ಬಾಲಬಾಪುರಿ ಇಟ್ಟು ತೋಳನಾಡೆಲೊ ಕಂದ
ತೋಳ್ಬಳೆಯು ವಂಕಿ ಗೊಂಡ್ಯಗಳು । ಗೊಂಡ್ಯ ಕಟ್ಟಿದ ದುಂಡು
ತೋಳಾಟ ನೋಡಿ ನಲಿಯುವೆನು ೧೧೫

ಆನೆ ಆಡಿಸುವೆ ಬಾ ಜಾಣರಂಗಯ್ಯನೇ
ಆನೆ ಬಂತಿಲ್ಲಿ ಮರಿಯಾನೆ । ಮರಿ ಆನೆ ಭಕ್ತರಿಗೆ
ವರವಿತ್ತು ಪೊರೆವಾ ಬಿರುದಾನೆ ೧೧೬

ಸೊಕ್ಕಿದಾ ರಕ್ಕಸರ ಕುಕ್ಕಿ ಕೊಲ್ಲುವ ಆನೆ
ಮಕ್ಕಳಾಟಿಕೆಯ ಮರಿಯಾನೆ । ಮರಿಯಾನೆ ಸಿರಿಯನ್ನು
ಇಕ್ಕಿ ಉರದೊಳಗೆ ಮೆರೆವಾನೆ ೧೧೭

ಜಲದಲ್ಲಿ ಇರುವಾನೆ ಕುಲಗಿರಿಯ ಪೊತ್ತಾನೆ
ನೆಲವನ್ನು ಬಗೆವ ಪಿರಿಯಾನೆ । ಪಿರಿಯಾನೆ ಬಾಲಕನ
ಛಲಕೆ ಸ್ತಂಭದಲಿ ಬಂದಾನೆ ೧೧೮

ವಟುರೂಪ ಆದಾನೆ ಹಟ ಕೊಡಲಿ ಪೊತ್ತಾನೆ
ಆಟವಿಯಾ ಫಲವ ಮೆದ್ದಾನೆ । ಮೆದ್ದಾನೆ ಶುದ್ದಾನೆ
ಹಟ ಬಿಟ್ಟು ಇಲ್ಲಿ ಆಡ್ಯಾನೆ ೧೧೯

ಶಿಶು ಗೋಪಿಗಾದಾನೆ ವಸನವನು ಬಿಸುಟಾನೆ
ಹಸನಾದ ತೇಜಿ ಹತ್ಯಾನೆ । ಹತ್ಯಾನೆ ದುಷ್ಟರನು
ಕೊಸರಿ ಹಿಚುಕುತ್ತಾ ಮೆರೆದಾನೆ ೧೨೦

ತಪಸಿಗಳಿಗೊಲಿದಾನೆ ಗುಪಿತದಲಿ ಮೆರೆವಾನೆ
ಅಪರಿಮಿತ ಮಹಿಮನೆಂಬಾನೆ । ಎಂಬಾನೆ ಕಾಂಬಾನೆ
ಜಪಿಸುವರ ಮನದಿ ನಿಂತಾನೆ ೧೨೧

ನೋಡ ಬನ್ನಿರೆ ಇಲ್ಲಿ ಆಡುವೊ ಕಿರಿಯಾನೆ
ಬೇಡಿದ್ದು ಕೊಡುವ ಮಹಿಮಾನೆ । ಮಹಿಮಾನೆ ಶ್ರೀ ಕೃಷ್ಣ
ಪಾಡಿ ಪೊಗಳೀರೆ ತರುಣಿಯರು ೧೨೨

ಆನೆ ಆಡಿಸಿ ಹರಿಯ ಜಾಣೆ ಮುದ್ದನು ಕೊಟ್ಟು
ಜ್ಞಾನಮಯನನು ಅಪ್ಪುತಲಿ । ಅಪ್ಪಿ ಆಲಂಗಿಸುತ
ಆನಂದಾಬ್ಧಿಯೊಳು ಮುಳುಗಿದಳು ೧೨೩

ಗೋಪಿ ಪಾಲ್ಗರೆವಾಗ ಶ್ರೀ ಪತಿಯು ಬೆನ್ನಿಸಿದು
ತಾ ಪುಟ್ಟ ಪಾತ್ರೆ ಕೈಪಿಡಿದೂ । ಕೈ ಪಿಡಿದು ನೊರೆಹಾಲು
ಗೋಪಿ ತಾರೆಂದು ಕಾಡುವನು ೧೨೪

ಕರೆಯದಾ ಮುನ್ನೆ ನೀ ನೊರೆಹಾಲು ಕೇಳುವರೆ
ಕರುವಿಗೇ ಬೇಡೆ ಶ್ರೀ ಕೃಷ್ಣ । ಕೃಷ್ಣಯ್ಯ ಎನೆ ಗೋಪಿ
ಕರು ಕಣ್ಣಿ ಬಿಚ್ಚಿ ಕುಣಿಯುವನು ೧೨೫

ಕರುವು ಪೂರೈಸದಲೆ ಕರುವ ಬಿಡುವರೆ ರಂಗ
ನೊರೆ ಹಾಲು ಮೊದಲು ನಿನಗೀವೆ । ನಿನಗೀವೆ ಕಾಡದಲೆ
ಸರಿಯವರ ಕೂಡಿ ಆಡ್ಹೋಗು ೧೨೬

ಆಡಿ ಬಂದೆನೆ ಅಮ್ಮ ಹಸಿವೆನ್ನ ಕಾಡುತಿದೆ
ಕೂಡಮ್ಮ ಇಲ್ಲಿ ಮೊಲೆ ಉಣಿಸೆ । ಮೊಲೆ ಉಣಿಸೆ ಎನಗೆಂದು
ಕಾಡಿದನು ಕಂದ ಆನಂದ ೧೨೭

ಘಳಿಗೆಗೆಂಟಾವರ್ತಿ ಮೊಲೆ ಉಣುವೆನೆಂಬುವೆಯಾ
ಬಲು ತುಂಟನಾದಿ ಬಡಿಯೂವೆ । ಬಡಿಯೂವೆ ಗುಮ್ಮನ್ನ
ಎಳಕೊಂಡು ಹೋಗು ಎಂಬೂವೆ ೧೨೮

ಅಮ್ಮಾ ಹೊಡಿಯಲಿ ಬ್ಯಾಡೆ ಗುಮ್ಮನ್ನ ಕರಿಬ್ಯಾಡೆ
ಸುಮ್ಮನಿರುತೇನೆ ದಮ್ಮಯ್ಯಾ । ದಮ್ಮಯ್ಯ ಹಗಲೆಲ್ಲಾ
ಅಮ್ಮೀಯ ಕೇಳೊದಿಲ್ಲಮ್ಮ ೧೨೯

ತಾಯಿ ಮೊಗ ನೋಡಿ ತಾ ನಯನದಲಿ ಜಲ ತಂದೂ
ತೋಯಜಾಂಬಕನು ನಡಗುತ್ತ । ನಡಗುತ್ತ ಅಳುತಿರಲು
ತಾಯಿ ಬಿಗಿದಪ್ಪಿ ಎತ್ತಿದಳೂ ೧೩೦

ಸಿಟ್ಟುಮಾಡಲು ನಾನು ಕೃಷ್ಣ ನೀ ಬೆದರುವಿಯೋ
ಬಿಟ್ಟರೇ ಎನ್ನ ಕಾಡುವೆಯೋ । ಕಾಡುವಿಯೊ ಎಂದೆನುತ
ಕೊಟ್ಟಳು ಮೊಲೆಯ ಸಂತೈಸಿ ೧೩೧

ಕಾಟಪಡಿಸುವುದಿಲ್ಲ ಚೀಟು ಕುಡಿವೆನೆ ಅದುವೆ
ಕೋಟಿ ಬಿಂದುಗಳೂ ಆದಾವೆ । ಆದು ಅದರಿಂದೆನ್ನ
ಸಾಟಿ ಕಾಣದ ಉದರ ತುಂಬೀತೆ ೧೩೨

ಬೆಣ್ಣೆ ಕೊಡುವೆನೊ ಕೃಷ್ಣ ಎಣ್ಣೆಯನು ಹಚ್ಚುವೆನು
ತಣ್ಣೀರು ಬೆರೆಸಿ ಎರೆಯೂವೆ । ಎರೆವೆ ಉಷ್ಣೋದಕವ
ಅಣ್ಣಯ್ಯ ಮೈಯ್ಯ ವರಸೂವೆ ೧೩೩

ಕೃಷ್ಣನ್ನ ಕೆಳಗಿಳಿಸಿ ಉಷ್ಣದೆಣ್ಣೆಯ ತಂದು
ವೃಷ್ಣಿ ವಂಶಜಗೆ ಹಚ್ಚೂವೆ । ಹಚ್ಚುವೆಂಬನಿತರೊಳು
ಕೃಷ್ಣಯ್ಯ ಕಾಣದೆಲೆ ಓಡಿದನು ೧೩೪

ತೈಲ ಕರದಲಿ ಪಿಡಿದು ಬಾಲೆಯರ ಆಲಯದಿ
ಬಾಲನ್ನ ಗೋಪಿ ಹುಡುಕುತ್ತ । ಹುಡುಕುತ್ತ ಅಲೆದಲೆದು
ಬಾಲೆ ಬೆಂಡಾಗಿ ಬಳಲಿದಳು ೧೩೫

ತರಗೆಲೆಯನೇ ಪಿಡಿದು ತರುಮೂಲವಾಶ್ರೈಸಿ
ಮರುತನ್ನ ತಡೆದು ಧ್ಯಾನಿಪರು । ಧ್ಯಾನಿಪರಿಗಸದಳನು
ತರುಣಿಗೆ ಸುಲಭನೆನಿಸುವನೆ ೧೩೬

ಒಮ್ಮೆ ತೋರುತಲಿಹನು ಒಮ್ಮೆ ತೋರದಲಿಹನು
ಅಮ್ಮ ಲಕುಮಿಗೆ ಚರ್ಯ ಆಶ್ಚರ್ಯ । ಆಶ್ಚರ್ಯ ಅಮರೇಶ
ಸುಮ್ಮನೇ ಹುಡುಕಿದರೆ ದೊರಕುವನೆ ೧೩೭

ಸಿರಿಯು ಕೊನೆಗಾಣದಾ ಸುರರಿಗರಿವಾಗದಾ
ಪರಮ ಸೌಂದರ್ಯದಾಕೃತಿಯ । ಆಕೃತಿಯ ಸುತನೆಂದು
ತರಳೆ ಹುಡುಕಿದರೇ ದೊರಕುವನೆ ೧೩೮

ಅಣುಮಹದ್ರೂಪನ್ನ ಗಣಿಸಲಾರದೆ ವೇದ
ಗಣವೆಲ್ಲ ಸೋತು ಹಿಂದಿರುಗೇ । ಹಿಂದಿರುಗೆ ಗೋಪ್ಯಮ್ಮ
ದಣಿಯುವುದು ಅರಿದೇ ಧರೆಯೊಳಗೆ ೧೩೯

ಅಬ್ಜಜಾಂಡಕ್ಕೆಲ್ಲ ಬಿಂಬನಾಗಿಹ ಹರಿಯ
ಬೆಂಬಿಡದೆ ಸುಜ್ಞಾನದಿಂದ ಸ್ತುತಿಸೆ । ಸ್ತುತಿಸೆ ಕಾಣದ ಹರಿಯೂ
ಅಂಬುಜಾಂಬಕಿಗೆ ವಶನಹನೇ ೧೪೦

ಕೋಟಿ ಜನುಮವನೆತ್ತಿ ಕೋಮಲದ ರೂಪವನು
ಸಾಟಿರಹಿತಾಗೆ ಸ್ತುತಿಸಾಲು । ಸ್ತುತಿಸೆ ತೋರುವ ಹರಿಯು
ಸಾಟು ಬಡಿಸದಲೆ ದೊರಕುವನೆ ೧೪೧

ಪುಟ್ಟ ಪಾದಗಳಿಂದ ದಟ್ಟಡಿಯನಿಕ್ಕುತಲಿ
ಕೃಷ್ಣಯ್ಯ ಇಲ್ಲಿ ಬಂದಿಹನೆ ! ಬಂದಿಹನೆ ಎಂದೆನುತ
ಕಷ್ಟದಲಿ ಗೋಪಿ ಹುಡುಕಿದಳು ೧೪೨

ವೇದಗಳು ಕಾಣದಾ ಆದಿ ಮೂರುತಿ ಇಲ್ಲಿ
ಹಾದಿ ತಪ್ಪೀಗ ಬಂದಿಹನೆ । ಬಂದಿಹನೆ ಎಂದೆನುತ
ಬೀದಿಯಲಿ ಕೆಳದೆಯರ ಕೇಳಿದಳು ೧೪೩

ಎರೆವೆ ಶ್ರೀ ಹರಿಗೆಂದು ತೈಲ ತರುವನಿತರೊಳು
ಹರಿ ಎನ್ನ ಕಣ್ಗೆ ಮರೆಯಾಗಿ । ಮರೆಯಾಗಿ ಎಲ್ಲಿಹನೊ
ಹರದಿಯರೆ ನೀವ್ ಕಂಡಿರೇನಮ್ಮ ೧೪೪

ಕಾಳದೈತ್ಯರ ಕುಲಕೆ ಕಾಲನೆಂದೆನಿಸಿದಗೆ
ತೈಲವನೊತ್ತುವನಿತರೊಳು । ಅನಿತರೊಳು ಮರೆಯಾದ
ಬಾಲೆಯರು ನೀವ್ ಕಂಡಿರೇನಮ್ಮ ೧೪೫

ಕದ್ದು ಬೆಣ್ಣೆಯ ಮೆದ್ದು ಕಡೆವಲ್ಲಿ ಕೈ ಚಾಚಿ
ಮುದ್ದು ಕಂದಯ್ಯಾ ಬೇಡುವೆನು । ಬೇಡುವಂಥ ಹರಿಯ
ಇದ್ದಲ್ಲಿ ತೋರ ಬನ್ನೀರೆ ೧೪೬

ಮನೆಯಲ್ಲಿ ಹುಡುಕಿದೆನು ಸನಕಾದಿ ಸ್ತುತನನ್ನು
ಮನೆ ಮನೆಯ ಹುಡುಕ ಬಂದೇನು । ಬಂದೇನು ರಂಗನ್ನ
ಮುನಿವಂದ್ಯ ಎಲ್ಲೂ ಕಾಣಿಸನು ೧೪೭

ಕಷ್ಟಪಡುತಲಿ ಗೋಪಿ ಅಷ್ಟೂ ಗೃಹಗಳ ಹುಡುಕಿ
ನಿಟ್ಟುಸುರು ಬಿಟ್ಟು ಮನೆಗೈದು । ಮನೆಗೈದು ರಂಗನ್ನ
ದೃಷ್ಟಿಕಾಣದಲೆ ಸೊರಗಿದಳು ೧೪೮

ಬಿನಗು ಮೋಹದಿ ಜನನಿ ದಣಿದು ವಿಫಲವ ಕಂಡು
ಮಣಿದು ತಿಳಿದಳು ಮಗನ ಹರಿಯೆಂದು ।
ಹರಿ ಎಂಬ ಸ್ಮೃತಿ ಬರಲು
ಮನದಲ್ಲಿ ದಯವ ತಾಳಿದನು ೧೪೯

ಕಡೆವ ಕಂಭದ ಹಿಂದೆ ಅಡಗಿ ತೋರದೆ ಇದ್ದು
ಪಡೆದವಳಿಗರಿವು ಬರಲೆಂದು । ಬರಲೆಂದು ತನ್ನಿರವ
ತ್ವರಿತದಲಿ ತೋರಿದನು ಗಹಗಹಿಸಿ ೧೫೦

ತಿರುಗಿ ನೋಡುತ ಗೋಪಿ ಕಿರಿಯ ಕಂದಯ್ಯನ
ಸರಸರನೆ ಬಂದು ಬಿಗಿದಪ್ಪಿ । ಬಿಗಿದಪ್ಪಿ ತಕ್ಕೈಸಿ
ಸುರಿದಳು ಸುಖದ ಸೌಭಾಗ್ಯ ೧೫೧

ಊರೆಲ್ಲ ಹುಡುಕಿದರು ಪೋರ ನೀ ಕಾಣದೆಲೆ
ಈ ರೀತಿ ಎನ್ನ ವಂಚಿಪರೆ । ವಂಚಿಪರೆ ರಂಗಯ್ಯ
ನೀರೆರೆವೆ ಬಾ ಎನ್ನ ಕಂದಮ್ಮ ೧೫೨

ವತ್ತಿದಳು ತೈಲವನು ಚಿತ್ತಜಾಪಿತಗಾಗ
ಕಸ್ತುರಿಯ ಬೆರೆಸಿ ಬಿಸಿನೀರು । ಬಿಸಿನೀರ ಮೈಗೆರೆದು
ಎತ್ತಿ ತಂದಾಳು ಕಿರಿ ಮನೆಗೆ ೧೫೩

ಇಂದಿರೇಶನ ಮೈಯ್ಯ ಚಂದದಲಿ ವರೆಸುತಲಿ
ತಂದು ಪರಿಮಳದ ಧೂಪವನು । ಧೂಪವನು ಹಾಕುತಲಿ
ಸುಂದರಾಂಗನನ ಶೃಂಗರಿಸಿ ೧೫೪

ಪಾಲು ಸಕ್ಕರೆ ಬೆರೆಸಿ ಬಾಲರನ್ನಗೆ ಕುಡಿಸಿ
ಬಾಲರಕ್ಷೆಯನು ಇಡುವೆನು । ಇಡುವೆನೂ ರಂಗನಿಗೆ
ಬಾಲೆಯರ ದೃಷ್ಟಿ ತಾಕೀತು ೧೫೫

ಮುಂಗುರುಳು ಬಾಚುತಲಿ ರಂಗನಿಗೆ ಜಡೆಕಟ್ಟಿ
ರಂಗು ಮಾಣೀಕದ ಅರಳೆಲೆಯು । ಅರಳೆಲೆಯು ಮಾಗಾಯಿ
ಶೃಂಗಾರಗೈದು ಸುಖಿಸುವೆನೊ ೧೫೬

ಮುತ್ತಿನಾ ತುರಾಯಿ ಮುಂದಲೆಗೆ ಕಟ್ಟುವೆನು
ಮುತ್ತಿನಾ ವಂಟಿ ಕರ್ಣಕ್ಕೆ । ಕರ್ಣಕ್ಕೆ ಚಳತುಂಬು
ಸತ್ಯವಿಕ್ರಮಗೆ ಶೃಂಗರಿಪೆ ೧೫೭

ಹುಲಿ ಉಗುರು ಮಾಗಾಯಿ ಕೊರಳ ಮುತ್ತಿನ ಹಾರ
ಥಳಥಳಿಪ ವಜ್ರ ಪದಕಗಳು । ಪದಕಗಳ ಹಾರವನು
ಚೆಲುವ ರಂಗಯ್ಯಗ್ಹಾಕುವೆನು ೧೫೮

ತೋಳ ಬಾಪುರಿನಿಟ್ಟು ಮೇಲೆ ಗೋಂಡ್ಯವ ಕಟ್ಟಿ
ಲೀಲೆಯಿಂದೀಗ ನಿಟ್ಟಿಸುತ । ನಿಟ್ಟಿಸುತ ಚಿನ್ನದಾ
ಬಾಲನಿಗೆ ವಂಕಿ ತೊಡಿಸುವೆನು ೧೫೯

ಸಾಗರಾತ್ಮಜೆ ಪತಿಗೆ ನಾಗ ಮುರಿಗೆಯನಿಟ್ಟು
ಯೋಗಿ ವರದನಿಗೆ ಬಿಂದಲಿಯೂ । ಬಿಂದಲಿಯು ಗುಂಡು ಬಳೆ
ಆಗಮನುತಗೆ ಶೃಂಗರಿಪೆ ೧೬೦

ರಂಗನಾ ಬೆರಳುಗಳಿಗುಂಗುರವ ತೊಡಿಸುವೆನು
ರಂಗು ಮಾಣಿಕ್ಯ ನೀಲಗಳು । ನೀಲಗಳು ಥರಥರದಾ
ಭಂಗಾರದಂಗುಲಿಯನಿಡುವೇನು ೧೬೧

ಚಿನ್ನದಾ ಉಡಿದಾರ ಸಣ್ಣ ಕುಸುರಿನ ಗೆಜ್ಜೆ
ಚಿನುಮಯಾತ್ಮಕನ ನಡುವೀಗೆ । ನಡುವೀಗೆ ಶೃಂಗರಿಪೆ
ಬನ್ನಭವ ಬಂಧ ಬಿಡಿಸೆಂದು ೧೬೨

ಗೆಜ್ಜೆ ಪಾಡುಗ ಪುಟ್ಟ ಹೆಜ್ಜೆ ಚರಣಕೆ ಕೊಡಿಸಿ
ಸಜ್ಜನರ ಪ್ರಿಯನ ನೋಡುವೆನು । ನೋಡುವೆನು ಮನದಣಿಯ
ವಜ್ರದಂಗಿಯನೆ ತೊಡಿಸುವೆನು ೧೬೩

ಗಲ್ಲ ಕನ್ನಡಿ ಪೋಲೆ ಚೆಲ್ವ ಕೃಷ್ಣನ ತುಟಿಯು
ಪಲ್ಲವಿಪ ಎಳೆಮಾವು ಕುಡಿಯಂತೆ । ಕುಡಿ ಕೆಂಪು ಮುದ್ದಿಸುತಾ
ಮಲ್ಲಿಗೆ ಪೂವ ಮುಡಿಸೂವೆ ೧೬೪

ಎಳೆಯ ಕೇತಕಿ ಪೋಲ್ವ ಚೆಲುವ ನಾಸಿಕ ಸೊಬಗು
ಥಳಥಳಪ ದಂತ ದಾಳಿಂಬ । ದಾಳಿಂಬ ನಯನಗಳು
ಸಲೆ ಕಮಲ ಕಾಂತಿಯಲಿ ಶೋಭಿಪವು ೧೬೫

ಕಸ್ತುರಿಯ ತಿಲಕವನು ಚಿತ್ತಾಪಹರಗಿಟ್ಟು
ನೆತ್ತಿಯನೆ ಮೂಸಿ ನೇವರಿಸಿ । ನೇವರಿಸಿ ಮುದ್ದಿಸುತ
ಅತ್ಯಂತ ಸುಖವ ಸುರಿಯೂವೆ ೧೬೬

ಚಿನ್ನದಾ ಬಟ್ಟಲೊಳು ಅನ್ನ ತುಪ್ಪವ ಕಲೆಸಿ
ಚಿನ್ನನಿಗೆ ಪಾಲು ಮೊಸುರುಣಿಸಿ । ಮೊಸರುಣಿಸಿ ಕೈ ತೊಳೆಸಿ
ಎನ್ನ ಮನ ತೃಪ್ತಿ ಪಡೆಯುವೆನು ೧೬೭

ಕಪ್ಪು ಹರನಿಗೆ ಮುದ್ದು ಕಡಲಿಗೆ ಹರಿ ಮುದ್ದು
ಸರ್ಪಶಯನನಿಗೆ ಸಿರಿಮುದ್ದು । ಸಿರಿ ಮುದ್ದು ಕೃಷ್ಣಯ್ಯ
ನೀ ಮುದ್ದು ಎಮ್ಮ ಗೋಕುಲಕೇ ೧೬೮

ಶರಧಿಗಾಳವ ಕಾಣೆ ಶರಕೆ ಕರುಣವ ಕಾಣೆ
ಉರಗ ಫಣಿರತ್ನ ತರಕಾಣೆ । ತರಕಾಣೆ ರಂಗನ್ನ
ಸರಿಕಾಣೆ ಮೂರು ಲೋಕದಲಿ ೧೬೯

ಮಡಿಗೆ ಮಜ್ಜನ ಚಂದ ಅಡಿಗೆ ಊಟಕೆ ಚಂದ
ಪಡೆದವರಿಗವರ ಮಗು ಚಂದ । ಮಗು ಚಂದ ಕೃಷ್ಣಯ್ಯ
ಕಡಲಶಯನ ಎನಗೆ ನೀ ಚಂದ ೧೭೦

ಆನೆಗಮನವು ಚಂದ ಅರಸ ರಾಜ್ಯಕೆ ಚಂದ
ದಾನಿಗೆ ಚೆಂದ ಸತ್ಕೀರ್ತಿ । ಸತ್ಕೀರ್ತಿ ಕಂದಮ್ಮ
ನೀನೆಮ್ಮ ಮನಕೆ ಬಲು ಚಂದ ೧೭೧

ಯೋಗಿಗೇ ತಪ ಚೆಂದ ಭೋಗಿಗೇ ಸುಖ ಚೆಂದ
ಆಗಮಕೆ ಚೆಂದ ಹರಿ ಮಹಿಮೆ । ಹರಿ ಮಹಿಮೆ ಕೃಷ್ಣಯ್ಯ
ಸೋಗೆ ನೋಟಗಳು ಬಲು ಚೆಂದ ೧೭೨

ಬಣ್ಣಬಣ್ಣದಿ ಮಗುವ ಬಣ್ಣಿಸುತ ಗೋಪ್ಯಮ್ಮ
ಸನ್ನುತಾಂಗನ ಹಾಲುಕೆನ್ನೆಗಳ । ಕೆನ್ನೆಗಳ ಮುದ್ದಿಟ್ಟು
ಸಣ್ಣವನ ಆಡೆಂದು ಕಳುಹುವಳು ೧೭೩

ತಕ್ಕೈಸಿ ಕಂದನಿಗೆ ಚೊಕ್ಕ ಊಟವನುಣಿಸಿ
ಅಕ್ಕರದಿ ಆಟವಾಡೆಂದು । ಆಡೆಂದು ಅಂಗಳದಿ
ಚಿಕ್ಕವರೊಡನೆ ಕಳುಹಿದಳು ೧೭೪

ಅಣ್ಣನೊಡಗೂಡುತ್ತ ಚಿನ್ನ ನೀ ಆಡಮ್ಮ
ಸಣ್ಣ ಮಕ್ಕಳು ನಿನ್ನ ಜೊತೆ ಸೇರಿ । ಜೊತೆ ಸೇರಿ ಮನೆ ಮುಂದೆ
ಇನ್ನು ನೀ ಆಡಿ ಬಾರಮ್ಮ ೧೭೫

ಆಡಹೋದರೆ ಮಕ್ಕಳಾಡಿಕೊಂಬುವರಮ್ಮ
ನೋಡುತ್ತ ಕಣ್ಣ ಮಿಟುಕಿಸುವರೆ । ಮಿಟುಕಿಸುತ ಎವ ನೋಡಿ
ಮಾಡುವರು ಕೈಯ್ಯ ಸನ್ನೆಯನು ೧೭೬

ಎಲ್ಲ ಮಕ್ಕಳ ಹಾಗೆ ಅಲ್ಲಂತೆ ನೋಡಮ್ಮ
ಕೊಲ್ಲುವೇನಂತೆ ರಕ್ಕಸರ । ರಕ್ಕಸರ ಸದೆ ಬಡಿದು
ಮಲ್ಲನಂತೆಸೆಯುತಿಹೆನಂತೆ ೧೭೭

ಪಡೆದವರು ಬ್ಯಾರಂತೆ ಬಿಡುತ ಬಂದಿಹನಂತೆ
ನಡುರಾತ್ರಿ ಹಾದಿ ಪಯಣಂತೆ । ಪಯಣಂತೆ ಭಯಕಾಗಿ
ಅಡಗಿಕೊಂಡಿಲ್ಲಿಹೆನಂತೆ ೧೭೮

ದೊರೆತನವು ಎನ್ನ ಹಣೆಬರೆಹದಲಿ ಇಲ್ಲಂತೆ
ತುರುವ ಕಾಯುವುದೆ ಥರವಂತೆ । ಥರವಂತೆ ಎನ ಕುಲದ
ಅರಸುತನ ಎನಗೆ ಇಲ್ಲಂತೆ ೧೭೯

ಹುಟ್ಟುತಲೆ ಕಂಸನಾ ಅಟ್ಟುಳಿಗೆ ಇಲ್ಲೆನ್ನ
ಅಟ್ಟಿದಾರಂತೆ ಪಡೆದವರು । ಪಡೆದವರು ನೂಕಲು ಮೊಲೆ
ಕೊಟ್ಟು ನೀ ಎನ್ನ ಪೊರೆದೆಯಂತೆ ೧೮೦

ಗೊಲ್ಲರೆಂಬುವರೆನ್ನ ಎಲ್ಲ ಪೋರರು ನೋಡೆ
ಅಲ್ಲಿ ಕೈ ತಟ್ಟಿ ನಗುವೋರು । ನಗುವೋರೆ ಗೋಪ್ಯಮ್ಮ
ಬಲ್ಲಿದಳು ನೀ ನಿಜ ಪೇಳಮ್ಮ ೧೮೧

ಬಾಲರಾಡುವ ನುಡಿಯ ಕೇಳಬೇಡೆಲೊ ರಂಗ
ಶ್ರೀ ಲೋಲ ನೀನು ಜಗಕೆಲ್ಲ । ಜಗಕೆಲ್ಲ ಬಲ್ಲಿದನು
ಆಲಯವು ನಿನಗೆ ವೈಕುಂಠ ೧೮೨

ಚತುರ ದಶಲೋಕಕ್ಕೆ ಪ್ರಭು ನೀನು ಪೇಳುವೆನೊ
ಅತುಳ ಸಂಪದವು ನಿನಗುಂಟು । ನಿನಗುಂಟು ಎಂದೆನುತಾ
ಶ್ರುತಿತತಿಗಳೆಲ್ಲ ಸಾರುವುವು ೧೮೩

ಪಾಲಾಬ್ಧಿಶಯನನಿಗೆ ಪಾಲಾಸೆಯುಂಟೇನೊ
ಬಾಲಲೀಲೆಯನು ನೀ ತೋರ್ವೆ । ನೀ ತೋರ್ವೆ ರಂಗಯ್ಯ
ಬಾಲರಾ ನುಡಿಗೆ ಬೆದರುವರೆ ೧೮೪

ಲೋಕ ಲೋಕಗಳನ್ನು ಸಾಕುವಾ ದೊರೆ ನೀನು
ಆಕಳಾ ಕರುವು ಕಾಯುವುದು । ಕಾಯುವುದು ಕೌತುಕವೆ
ಶ್ರೀಕಾಂತ ಖಿನ್ನನಾಗುವರೇ ೧೮೫

ಅಚ್ಯುತನು ಜನನಿಯಾ ಉಚ್ಚ ವಾಕ್ಯವ ಕೇಳಿ
ಅಚ್ಚರಿಯ ಪೊಂದಿ ಆನಂದ । ಆನಂದ ಮದವೇರಿ
ಮುಚ್ಚಿ ಕಂಗಳನು ನಸುನಕ್ಕ ೧೮೬

ಎನ್ನ ಪುಣ್ಯದ ಫಲವು ನಿನ್ನ ರೂಪದಿ ಬಂದು
ಎನ್ನ ಮನಕ್ಹರುಷ ಕೊಡುತಿಹುದು । ಕೊಡುತಿಹುದು ಕೃಷ್ಣಯ್ಯ
ಚಿನ್ನರಾ ನುಡಿಗೆ ಬೆದರುವರೆ ೧೮೭

ಅಮ್ಮನಾಡಿದ ಮಾತ ರಮ್ಮೆಯರಸನು ಕೇಳೀ
ಹೆಮ್ಮೆಯನು ತಾಳೀ ಹೊರವಂಟ । ಹೊರವಂಟ ಸರಿಯವರ
ಹಮ್ಮಿನಿಂದಲಿ ಕರೆದು ಹೇಳಿದನು ೧೮೮

ಸುಮ್ಮನಾಡಲಿಬೇಡಿ ಅಮ್ಮ ಪೇಳಿದಳೆನಗೆ
ಬ್ರಹ್ಮಾಂಡ ಕೋಟಿಗರಸಂತೆ । ಅರಸಂತೆ ನಾನಿನ್ನು
ನಿಮ್ಮಗಳ ಸಾಕುವವನಂತೆ ೧೮೯

ಪಾಲಾಬ್ಧಿಶಯನಂತೆ ಪಾವು ಹಾಸಿಗೆಯಂತೆ
ಪಾಲಾಸೆ ಎನಗೆ ಇಲ್ಲಂತೆ । ಇಲ್ಲಂತೆ ಗೋಪಿಯರು
ಪಾಲ್ಕೊಟ್ಟು ಕಲಿಸಿ ಇಹರಂತೆ ೧೯೦

ಅತುಳ ಸಂಪದವಂತೆ ಸತಿ ಎನಗೆ ಉಂಟಂತೆ
ಸುತರೆಲ್ಲ ಅಂಗೋಪಾಂಗದಲಿ । ಅಂಗೋಪಾಂಗದಿ ಪುಟ್ಟಿ
ಕ್ಷಿತಿ ಮೂರರಲ್ಲಿಹರಂತೆ ೧೯೧

ಬೇಡಿಕೊಳ್ಳಲು ಧರಣಿ ಮಾಡಿ ಕರುಣೆಯ ನಾನು
ಖೋಡಿ ರಕ್ಕಸರ ಸಂಹರಿಸೆ । ಸಂಹರಿಸೆ ಪುಟ್ಟುತಲಿ
ಆಡಿಕೊಂಡಿಲ್ಲಿ ಇಹೆನಂತೆ ೧೯೨

ಬಾಲಕೃಷ್ಣನ ನುಡಿಗೆ ಬಾಲಕರು ಸಂತಸವ
ತಾಳುತಲಿ ಹರಿಯ ಮೇಳೈಸಿ । ಮೇಳೈಸಿ ಕುಣಿಯುತಲಿ
ಶ್ರೀಲೋಲನೊಡನೆ ಆಡಿದರು ೧೯೩

ಚಿನ್ನಿಕೋಲು ಚೆಂಡು ಬಣ್ಣದಾ ಬುಗುರಿಯು
ಕಣ್ಣುಮುಚ್ಚಾಲೆ ಆಟಗಳ । ಆಟಗಳ ಕೃಷ್ಣಯ್ಯ
ಚಿಣ್ಣರೊಡಗೂಡಿ ಆಡಿದನು ೧೯೪

ಆಡಿ ಬಂದೆನೆ ಅಮ್ಮ ಅಣ್ಣ ಗೋಪಾಲಕರು
ಕೂಡಿಕೊಂಡೆನ್ನ ಸಂತೈಸಿ । ಸಂತೈಸಿ ಸಂತೋಷ
ಮಾಡುತ್ತ ಪಾಡಿ ಕುಣಿದೇವೆ ೧೯೫

ಕೋಗಿಲೆಯ ಆಟವನು ಹೇಗೆ ಆಡಿದೆ ರಂಗ
ಕೂಗಮ್ಮ ಒಮ್ಮೆ ಎನ್ನೆದುರು । ಎನ್ನೆದುರು ಮಧುರಸ್ವರ
ಕೋಗಿಲೆಯ ಧ್ವನಿಯ ಕೇಳೇನು ೧೯೬

ನವಿಲು ಆಟವ ಹೇಗೆ ನಲಿದು ಆಡಿದೆ ಕೃಷ್ಣ
ಭವಸಖನೆ ಒಮ್ಮೆ ಕುಣಿಯಮ್ಮ । ಕುಣಿಯಮ್ಮ ನವಿಲಂತೆ
ತವಕದಲಿ ನೋಡಿ ನಲಿದೇನು ೧೯೭

ಗೆದ್ದವರು ಯಾರಮ್ಮ ಪದ್ಮಸಂಭವ ಪಿತನೆ
ಮುದ್ದು ಮಾತಿನಲಿ ಹೇಳಮ್ಮ । ಹೇಳೆನಲು ಗೋಪ್ಯಮ್ಮ
ಗೆದ್ದೆ ನಮ್ಮಯ್ಯ ನಾನೆಂದ ೧೯೮

ಸೋಲಿಸಿದೆ ನಮ್ಮಯ್ಯ ಬಾಲಕರನೆಲ್ಲರನು
ಮೇಲಾದೆ ನಾನು ಆಟದಲಿ । ಆಟದಲಿ ಸೋತವರು
ಆಲಯಕೆ ಅಳುತ ಓಡಿದರು ೧೯೯

ಹೊಡೆದು ಬಡಿದವರನ್ನು ಕೆಡಿಸಿದೆಯೊ ಆಟದಲಿ
ತುಡುಗತನ ಬೇಡ ಶ್ರೀ ಕೃಷ್ಣ । ಶ್ರೀ ಕೃಷ್ಣ ಬಾಲಕರ
ಪಡೆದವರು ನಿನ್ನ ಬೈಯ್ಯುವರು ೨೦೦

ಚಿಣ್ಣರೊಡಗೂಡಿ ನಾ ಸುಮ್ಮನಾಡಿದೆನಮ್ಮ
ಸಣ್ಣಮಕ್ಕಳನು ಬೈಲಿಲ್ಲೆ । ಬೈದು ಹೊಡೆಯಾಲಿಲ್ಲ
ಅಣ್ಣಯ್ಯನನ್ನು ಕೇಳಮ್ಮ ೨೦೧

ಪರಿ ಪರಿ ಆಟಗಳ ಪರಿವೆಯಲಿ ಮಣ್ಣೆರಚಿ
ಹರಿ ನೀನು ಮಣ್ಣ ತಿಂದ್ಯಂತೆ । ತಿಂದೆ ಎನ್ನುತ ಎನಗೆ
ಅರುಹಿದರು ಬಾಲಕರು ದೂರುತ್ತ ೨೦೨

ಥರವೆ ಬಾಲಯ್ಯ ಈ ತೆರ ನೀನು ಆಡುವುದು
ಬರಿದೆ ನಾ ಸುಮ್ಮನಿರಲಾರೆ । ಇರಲಾರೆ ರಂಗಯ್ಯ
ದುರುಳತನ ನಿನಗೆ ಸರಿಯಲ್ಲ ೨೦೩

ಮಾತೆಯಾ ವಚನಕ್ಕೆ ಮರು ಮಾತನಾಡದೆ
ಕಾತುರದಿ ಕೃಷ್ಣಯ್ಯ ಕಣ್ಣೀರು । ಕಣ್ಣೀರು ಸುರಿಸುತ್ತ
ಯಾತಕೆನ ಮೇಲೆ ದೂರಮ್ಮ ೨೦೪

ಸುಳ್ಳು ಹೇಳುವ ಮಾತ ಸಹಿಸಲಾರೆನೆ ಕೇಳು
ಇಲ್ಲೆ ಬಾಯ್ದೆರೆವೆ ನೋಡಮ್ಮ । ನೋಡಮ್ಮ ಎಂದೆನುತ
ಪುಲ್ಲಾಕ್ಷ ಪ್ರತಿಯಾಗಿ ಪೇಳಿದನು ೨೦೫

ಕರೆದು ಕೃಷ್ಣನ ತೊಡೆಯ ಮೇಲೆ ಮಲಗಿಸಿಕೊಂಡು
ತೆರೆ ನಿನ್ನ ವದನ ಎಂದೆನಲು । ಎಂದೆನಲು ಗೋಪ್ಯಮ್ಮ
ಥರಥರನೆ ನಡುಗಿ ಬಾಯ್ತೆರೆದು ೨೦೬

ಕೃಷ್ಣಮೂರುತಿ ತನ್ನ ಪುಟ್ಟ ಬಾಯ್ತೆರೆಯುತಿರೆ
ದೃಷ್ಟಿಯಿಂದಾಗ ನೋಡಿದಳು । ನೋಡಿದಳು ವದನದಲಿ
ಸೃಷ್ಟಿಯಾ ಸೊಬಗು ಗೋಪ್ಯಮ್ಮ ೨೦೭

ತೋರಿದನು ಉದರದಲಿ ನಾರಿ ಗೋಪ್ಯಮ್ಮಗೆ
ವಾರಿಜಾನಯನ ಬ್ರಹ್ಮಾಂಡ । ಬ್ರಹ್ಮಾಂಡ ಕೋಟಿಗಳ
ವಾರಿಜೋದ್ಭವನ ಲೋಕಗಳ ೨೦೮

ಹದಿನಾಲ್ಕು ಲೋಕಗಳು ಅದರೊಳಗೆ ಗೋಕುಲವು
ಸುದತಿ ಯಶೋದೆ ತನ ಸಹಿತ । ತನ ಸಹಿತಾ ಕಂಡು
ಬೆದರಿ ಬೆರಗಾಗಿ ನೋಡಿದಳು ೨೦೯

ಅಚ್ಚುತನೆ ಸಾಕಿನ್ನು ಮುಚ್ಚೊ ನಿನ್ನೊದನವನು
ಹುಚ್ಚು ಬಾಲಕರ ನುಡಿ ಕೇಳಿ । ನುಡಿ ಕೇಳಿ ಅಚ್ಚರಿಯ
ಎಚ್ಚರಿಕೆ ಮರೆದು ನೋಡಿದೆನು ೨೧೦

ಸೃಷ್ಟಿ ಎಲ್ಲವು ನಿನ್ನ ಪೊಟ್ಟೆಯೊಳಗಡಗಿರಲು
ಮುಷ್ಟಿ ಮಣ್ಣೀನ ಮಾಡುವುದು । ಮಾಡುವುದು ನಿನಗೇನಲು
ಕೃಷ್ಣಯ್ಯನಾ ಲೀಲೆ ಅರಿದಲ್ಲ ೨೧೧

ಒಂದು ದಿನ ಮಡಿಯುಟ್ಟು ನಂದಗೋಪನು ಒಳಗೆ
ಸುಂದರದ ಸಾಲಿಗ್ರಾಮಗಳ । ಸಾಲಿಗ್ರಾಮದ ಪೂಜೆ
ಮಂದಿರದಿ ಮಾಡುತಿರಲಾಗ ೨೧೨

ನೇತ್ರಗಳ ಮುಚ್ಚುತಲಿ ಗಾತ್ರ ಮಧ್ಯದಿ ಧ್ಯಾನ
ಸ್ತೋತ್ರ ಮಾಡುತ್ತ ಹರಿಯ ಸ್ಮರಿಸುತ್ತ । ಸ್ಮರಿಸುತಿರೆ ಮೆಲ್ಲನೆ
ಕ್ಷೇತ್ರಜ್ಞ ಹರಿಯು ತಾ ಬಂದ ೨೧೩

ಒಂದು ಸಾಲಿಗ್ರಾಮ ತಂದಿಟ್ಟು ಅಂಗಳದಿ
ಚೆಂದದಲಿ ಗೋಲಿ ಆಟವನು । ಆಡಿದನು ಶ್ರೀ ಕೃಷ್ಣ
ತಂದೆಗೆ ಮರೆಯಾಗಿ ನಗುತಿರ್ದ ೨೧೪

ನಂದಗೋಪನು ತನ್ನ ಕಣ್ತೆರೆದು ನೋಡುತ್ತಾ
ಒಂದು ಇಲ್ಲದೆ ಇರಲು ಬೆರಗಾಗಿ । ಬೆರಗಾಗಿ ಮೆಚ್ಚಿದನು
ನಂದನ ಲೀಲೆ ಘನವೆಂದು ೨೧೫

ದಧಿ ಕಡೆವ ಸಮಯದಲಿ ಮಧುಸೂದನನು ಪೋಗಿ
ಹದವಾದ ಬೆಣ್ಣೆ ಕೊಡು ಎನುತ । ಕೊಡು ಎನುತ ಹಟಮಾಡಿ
ಸುದತಿ ಗೋಪಿಯನು ಕಾಡಿಸಿದ ೨೧೬

ಪಾಲುಕ್ಕುತಿರೆ ಒಳಗೆ ಬಾಲೆ ಅವಸರದಿಂದ
ಬಾಲನಿಗೆ ಬೆಣ್ಣೆ ತಾ ಕೊಡದೆ । ಕೊಡದೆ ಒಳ ಪೋಗುತಿರೆ
ಶ್ರೀ ಲೋಲ ಕೋಪವ ತಾಳಿದನು ೨೧೭

ಕಡೆದ ಬೆಣ್ಣೆಯ ಕದ್ದು ಗಡಿಗೆಯನು ಉರುಳಿಸುತಾ
ಕಡಗೋಲು ನೇಣ ಕೈ ಪಿಡಿದು । ಕೈ ಪಿಡಿದು ಓಡುತಿರೆ
ಧಡಧಡನೆ ಬಂದು ನೋಡಿದಳು ೨೧೮

ಚೆಲ್ಲಿ ಮಜ್ಜಿಗೆ ಬೆಣ್ಣೆ ಎಲ್ಲವನು ಕದ್ದೋಡಿ
ಅಲ್ಲಿ ಮಾರ್ಜಾಲ ಕಪಿಗಳಿಗೆ । ಕಪಿಗಳಿಗೆ ತಾ ತಿಂದು
ಎಲ್ಲ ಮಿಕ್ಕದ್ದು ಉಣ್ಣಿಸಿದ ೨೧೯

ಭಾಳ ಕೋಪದಿ ನೋಡಿ ಕೋಲು ಕೈಯಲಿ ಪಿಡಿದು
ಶ್ರೀ ಲೋಲನನ್ನು ಹೊಡೆಯುವೆನು । ಹೊಡೆವೆನೆನ್ನುತ ಗೋಪಿ
ತಾಳದೆ ಬರುತಿರಲು ಓಡಿದನು ೨೨೦

ಒಮ್ಮೆ ಕೈ ಸಿಕ್ಕಂತೆ ಸುಮ್ಮನೇ ನಿಲ್ಲುವನು
ಒಮ್ಮೆ ದೂರದಲಿ ಓಡುವನು । ಓಡುತ್ತ ಬೀದಿಯಲಿ
ಅಮ್ಮನನು ದಣಿಸಿ ಅಲೆಸಿದನು ೨೨೧

ಕೃಷ್ಣನ್ನ ಪಿಡಿವುದಕೆ ಕಷ್ಟಪಟ್ಟುದರಿಂದ
ಕಟ್ಟಿದಾಕೇಶ ಬಿಚ್ಚಿಹುದು । ಬಿಚ್ಚಿಹುದು ನೆರಿಗೆಗಳು
ಉಟ್ಟಂಥ ಸೀರೆ ಜಾರಿಹುದು ೨೨೨

ಮುಖವೆಲ್ಲ ಬಾಡಿಹುದು ಮುಂಗುರುಳು ಬೆವರಿಹುದು
ಅಕಳಂಕ ಮುಖದ ಫಣಿತಿಲಕ । ಫಣಿತಿಲಕ ಕದಲಿಹುದು
ಮುಖದಲ್ಲಿ ಕೆಂಪು ಮೂಡಿಹುದು ೨೨೩

ಕೊರಳ ಮುತ್ತಿನಹಾರ ಥರಥರದ ಪದಗಳು
ತರುಣಿ ಕಂಠದಲಿ ಕದಲಿಹುದು । ಕದಲಿಹುದು ಆಭರಣ
ಪರಿಯ ಪೇಳ್ವುದಕೆ ಅಳವಲ್ಲ ೨೨೪

ಆಗಮಕೆ ಸಿಗಲೊಲ್ಲ ಯೋಗಿ ಜನಕಸದಳನು
ಭಾಗವತ ಪ್ರಿಯ ಜನನೀಯ । ಜನನಿ ದಣಿದುದ ಕಂಡು
ಆಗವಳ ಕೈಗೆ ಸಿಲುಕಿದನು ೨೨೫

ಹೀಗೆ ಬೀದಿಯ ಸುತ್ತಿ ನಾಗಶಯನನು ಬಂದು
ಬಾಗಿಲಾ ಹಿಂಗಡೆ ಅಡಗಿರಲು । ಅಡಗಿದಾ ರಂಗನ್ನ
ಬೇಗನೇ ಬಂದು ಪಿಡಿದಾಳು ೨೨೬

ಜನನಿ ಸ್ಥಿತಿಯನು ಕಂಡು ಚಿನುಮಯಾತ್ಮಕ ತನ್ನ
ಮನದೊಳಗೆ ಮುಗುಳು ನಗೆ ನಗುತ । ನಗು ನಗುತ ಗೋಪೀಗೆ
ಘನ ಬೆದರಿದವನಂತೆ ತೋರಿದನು ೨೨೭

ಬಡಿಯ ಬೇಡಮ್ಮಯ್ಯ ಗಡಿಗೆ ಒಡೆಯುವುದಿಲ್ಲೆ
ಕೊಡು ಬೆಣ್ಣೆ ಎಂದು ಕಾಡೊಲ್ಲ । ಕಾಡೊಲ್ಲವೆಂದೆನುತ
ಕಡು ಭಯದಿ ನಿಂತ ಭಯ ಹಾರಿ ೨೨೮

ನಳಿನ ಮುಖದಾಕೃತಿಗೆ ತಳೆದು ಶಾಂತವ ಗೋಪಿ
ಸುಲಭದಲ್ಲಿ ಕಲಿಸುವೆನು ಬುದ್ಧಿ ಎನುತ । ಎನುತ ಕಟ್ಟಲು ಸುತನ
ಎಳೆದಳು ನೇಣು ಕಡಗೋಲು ೨೨೯

ದುಷ್ಟತನ ಬಹಳಾಯ್ತು ಕಟ್ಟಿ ಹಾಕುವೆ ನಿನ್ನ
ಎಷ್ಟು ಸಹಿಸಲಿ ಎಂದು ಪೇಳುತ್ತ । ಪೇಳುತ್ತ ಮಂಥುವಿಗೆ
ಕಟ್ಟಿದಾ ರಜ್ಜು ಬಿಚ್ಚಿದಳು ೨೩೦

ಕಡಗೋಲು ಹಗ್ಗವನು ನಡುವಿಗೇ ಸುತ್ತುತಿರೆ
ಕಡೆಯಲ್ಲಿ ಎರಡು ಬೆರಳಷ್ಟು । ಬೆರಳಷ್ಟು ಸಾಲದಲೆ
ಮಿಡುಕಿದಳು ಮುಂದು ತೋರದಲೆ ೨೩೧

ಎತ್ತಿದಳು ಹಗ್ಗ ಮತ್ತೊಂದು ಒಳಗಿಂದ
ಸುತ್ತಿದಳು ಹರಿಯ ಸೊಂಟಕ್ಕೆ । ಸೊಂಟಕ್ಕೆ ಬಳಸದಿರೆ
ಚಿತ್ತದಲಿ ಚಿಂತೆ ತಾಳಿದಳು ೨೩೨

ತುರುವು ಕಟ್ಟುವೊ ಹಗ್ಗ ಕರುವ ಕಟ್ಟುವ ಹಗ್ಗ
ತರುತ ಜಲ ಎಳೆವ ಹಗ್ಗವನು । ಹಗ್ಗವನು ಜೋಡಿಸಲು
ಬೆರಳೆರಡು ಸಾಲದಂತಾಯ್ತು ೨೩೩

ಮುಚ್ಚಿತು ಸುಜ್ಞಾನ ಅಚ್ಚರಿಯ ಪೊಂದಿದಳೂ
ಅಚ್ಚುತನ ಮಹಿಮೆ ತಿಳಿಯದಲೆ । ತಿಳಿಯದಲೆ ಬೆರಗಾಗಿ
ನಿಶ್ಚಲದಿ ಕುಳಿತು ಬಳಲಿದಳು ೨೩೪

ಭಕ್ತರಾ ಸ್ತುತಿಗೊಲಿದು ಭಕ್ತಿಪಾಶಕೆ ಸಿಲುಕಿ
ಭಕ್ತರಾ ಮನದಿ ನೆಲಸುವುದು । ನೆಲಸುವುದು ಶ್ರೀ ಹರಿಯ
ಚಿತ್ತವಲ್ಲದಲೆ ಬೇರುಂಟೆ ೨೩೫

ಮನಬಂದ ತೆರದಂತೆ ಘನ ಮಹಿಮ ಚರಿಸುವನು
ಜನನಿಯ ಯತ್ನಕ್ಕೆ ಸಿಲುಕುವೆನೆ । ಸಿಲುಕುವೆನೆ ಸನಕಾದಿ
ಮುನಿ ಯೋಗಿಗಳಿಗೆ ದುರ್ಲಭನು ೨೩೬

ಕೋಟಿ ಬ್ರಹ್ಮಾಂಡಗಳ ಸಾಟಿ ಇಲ್ಲದೆ ಪೊತ್ತ
ಹಾಟಕಾಂಬರನ ಉದರವನು । ಉದರವನು ಕಟ್ಟುವುದು
ಬೂಟಕವು ಇಂಬು ದೊರಕೀತೆ ೨೩೭

ಸೋತವಳ ಮುಖ ನೋಡಿ ಪ್ರೀತಿಯಲಿ ಮನ ಮಾಡಿ
ಕೌತುಕದಿ ಮುಗಳು ನಗೆ ನಗಲು । ನಗೆ ನಗುಲು ಜನನೀಯು
ಕಾತುರದಿ ಮರಳಿ ಕಟ್ಟಿದಳು ೨೩೮

ಭರದಿ ಯತ್ನದಿ ಎನ್ನ ಸೆರೆ ಹಿಡಿಯಬೇಕೆಂದು
ಪರಿಪರಿಯ ಶ್ರಮವ ಪಟ್ಟಿಹಳು । ಪಟ್ಟಿಹಳು ಎಂದೆನುತ
ಕರುಣದಿಂದಾಗ ಸಿಲುಕಿದನು ೨೪೦

ಕಟ್ಟುಹಾಕಿದೆನೀಗ ಕೃಷ್ಣ ನಿನ್ನನು ಎಂದು
ದುಷ್ಟತನ ಮಾಡದಿರು ಎನುತ । ಎನುತ ನಾನೀ ಪರಿಯು
ಪಟ್ಟ ಶ್ರಮ ಸಾರ್ಥಕಾಯ್ತೆಂದ್ಲು ೨೪೧

ಅಂಬುಜೋದ್ಭವ ಪಿತನ ಅಂಬುಜಾಂಬಕಿ ಬಿಗಿದ
ಸಂಭ್ರಮವ ನೋಡೆ ನಭದಲ್ಲಿ । ನಭದಲ್ಲಿ ಸುರಗಣರು
ತುಂಬಿ ಕೌತುಕವ ಪೊಗಳಿದರು ೨೪೨

ಸಿಲುಕ ವೇದಂಗಳಿಗೆ ಸಿಲುಕ ಸಿರಿ ಯೋಚನೆಗೆ
ಸಿಲುಕ ಬ್ರಹ್ಮಾದಿ ಸುರ ಸ್ತುತಿಗೆ । ಸುರ ಸ್ತುತಿಗೆ ಸಿಲುಕದವ
ಸಿಲುಕಿಹನು ಜನನಿ ಬಂಧನಕೆ ೨೪೩

ನಾಶರಹಿತನು ಭಕ್ತಿಪಾಶ ಒಂದಲ್ಲದಲೆ
ತಾಸಿಗನು ಎಂಬೊ ಬಿರುದಿತ್ತು । ಬಿರುದಿರಲು ರಜ್ಜುವಿನ
ಪಾಶ ಎರಡನೆಯದಾಯ್ತು ಶ್ರೀ ಹರಿಗೆ ೨೪೪

ಭಕ್ತಿಪಾಶವು ಒಂದು ಮುಕ್ತಿಪಾಶವು ಒಂದು
ಮತ್ತೀಗ ಜನನಿ ಬಿಗಿದಂಥ ಬಿಗಿದು ಸುತ್ತಿರುವಂಥ
ವ್ಯಕ್ತದಾ ರಜ್ಜು ಪಾಶೊಂದು ೨೪೫

ಏನು ಧನ್ಯಳೊ ಗೋಪಿ ಆನಂದಮಯನನ್ನು
ಮೌನಿ ತಪಗಳಿಗೆ ಸಿಲುಕದನ । ಸಿಲುಕದನ ಸುತನೆಂದು
ಆನಂದದಿಂದ ಕಟ್ಟಿದಳು ೨೪೬

ದುಷ್ಟಜನ ಸಂಹರನ ದುಷ್ಟನೆನ್ನುತ ಬೈದು
ಕಟ್ಟಿಹಳು ದೇವ ಗಣ ನುತನ । ಗಣ ನುತನ ಎಂದೆನುತ
ವೃಷ್ಟಿ ಸುರಿಸಿದರು ಸುಮನಗಳ ೨೪೭

ಪಾಪ ಸಂಹರವನ್ನು ರಾಪು ಮಾಡುವೆನೆಂದು
ಕೋಪದಿಂ ಬಿಗಿದು ಕಟ್ಟಿಹಳು । ಕಟ್ಟಿಹಳು ಎಂದೆನುತ
ಶ್ರೀ ಪತಿಯ ಈ ಪರೀ ಸ್ತುತಿಸಿದರು ೨೪೮

ಕಟ್ಟಿದಾ ಕೃಷ್ಣನ್ನ ಥಟ್ಟನೇ ಎಳತಂದು
ಕಟ್ಟಿಹಳು ಒರಳಿಗಾಕ್ಷಣದಿ । ಆ ಕ್ಷಣದಿ ಕೆಲಸಕ್ಕೆ
ದಿಟ್ಟಿ ತಾ ಒಳಗೆ ತೆರಳಿದಳು ೨೪೯

ಒರಳು ಸಹಿತದಿ ಕೃಷ್ಣ ಬರುತ ಹಿತ್ತಿಲ ವಳಗೆ
ತರುದ್ವಯದ ಮಧ್ಯೆ ತಾ ಪೋಗೆ । ತಾ ಪೋಗೆ ಒರಳಡ್ಡ
ಬರಲು ಭರದಿಂದ ತಾ ನೆಳೆದ ೨೫೦

ಎಳೆದ ರಭಸಕೆ ಅವಳಿ ತರು ಮೂಲ ಸಡಲುತ್ತ
ಎಳೆಯ ಕೃಷ್ಣನ ಮೇಲುರುಳೆ । ಮೇಲುರುಳೆ ಘನ ಶಬ್ದ
ಭೋರಿಡುತ ಹೊರಟಿತಾ ಕ್ಷಣದಿ ೨೫೧

ಯಮಳಾರ್ಜುನರು ಹರಿಗೆ ನಮಿಸಿ ಅಂಬರಕಡರೆ
ಅಮಿತ ಮಹಿಮನ್ನ ಘನಲೀಲೆ । ಘನಲೀಲೆ ವರ್ಣಿಸುತ
ಸುಮನಸರು ಸುಮದ ಮಳೆಗರೆಯೆ ೨೫೨

ಭರದಿ ಶಬ್ದಕೆ ಬೆದರಿ ಹೊರಗೆ ಬಂದಳು ಗೋಪಿ
ತರಳನಾ ಲೀಲೆ ತಾ ಕಂಡು । ತಾ ಕಂಡು ಮೈ ಮರೆದು
ಥರಥರನೆ ನಡುಗಿ ಚೀರಿದಳು ೨೫೩

ಕಂದಯ್ಯನನು ಕಟ್ಟಿ ತಂದುಕೊಂಡೆನೆ ಕುಂದು
ಮುಂದೇನು ಗತಿ ಎಂದೆನುತ । ಎಂದೆನುತಲಿರೆ ಗೋಪ
ಬಂದು ನೊಡಿದನು ಶ್ರೀ ಹರಿಯ ೨೫೪

ಓಡಿಬಂದರು ಎಲ್ಲಿ ನೋಡಲೀ ಪರಿಚರ್ಯ
ಗಾಡಿಕಾರನ್ನ ಘನಲೀಲೆ । ಘನಲೀಲೆ ಅರಿಯದೆಲೆ
ಬಾಡಿ ಬೆಂಡಾಗಿ ಬಳಲಿದರು ೨೫೫

ಮೆಲ್ಲನೇ ಬಂದೆತ್ತಿ ಮಲ್ಲಾಕ್ಷನನು ಗೋಪ
ನಲ್ಲೆಯಾ ಕೈಗೆ ಕೊಡಲಾಗ । ಕೊಡಲು ಬಂಧನ ಬಿಡಿಸಿ
ಚೆಲ್ಲಿದರೆ ಎತ್ತಿ ಆರತಿಯಾ ೨೫೬

ರಕ್ಷೆ ಇಟ್ಟಳು ಆಗ ದಕ್ಕಿದನು ಸುತನೆಂದು
ಪಕ್ಷಿವಾಹನನೆ ಸಲಹಿದನು । ಸಲಹಿದನು ಕೂಸನ್ನ
ರಕ್ಷಿಸಿದ ಕುತ್ತು ಪರಿಹರಿಸಿ ೨೫೭

ಪುಟ್ಟಿದಾ ದಿನದಿಂದ ಕಷ್ಟಗಳು ಬಹಳಾಯ್ತು
ಪುಟ್ಟ ಕೃಷ್ಣಯ್ಯನಿಗೆ ಗೋಕುಲದಿ । ಗೋಕುಲದಿ ಎಂದೆನುತ
ನಿಟ್ಟುಸುರ ಬಿಟ್ಟು ಮರುಗಿದಳು ೨೫೮

ಬಂದಂಥ ಎಡರುಗಳು ಹಿಂದೆ ನಾ ಮಾಡಿದಾ
ಚೆಂದದಾ ಪುಣ್ಯ ಫಲದಿಂದ । ಫಲದಿಂದ ಪಾರಾಗಿ
ಕಂದನ್ನ ಪೊರೆದು ಸಲಹೀತು ೨೫೯

ಒಮ್ಮೆ ಶ್ರೀ ಹರಿ ಮಹಿಮೆ ಸನ್ಮನದಿ ತಿಳಿಯುವಳು
ಒಮ್ಮೆ ಮರುಳಾಗಿ ಮಗನೆಂದು । ಮಗನೆಂದು ಭ್ರಮಿಸುವಳು
ಬ್ರಹ್ಮಾದಿ ವಂದ್ಯನ್ನ ಗೋಪಮ್ಮ ೨೬೦

ಗೊಲ್ಲತೀಯರ ಮನೆಗೆ ಮೆಲ್ಲನೈದುತ ಕೃಷ್ಣ
ಚೆಲ್ಲುತ್ತ ಪಾಲು ಕೆನೆ ಮೊಸರ । ಕೆನೆ ಮೊಸರ ಮೆಲ್ಲುತ್ತಾ
ಚೆಲ್ಲಾಟವಾಡತೊಡಗಿದನು ೨೬೧

ಕತ್ತಲಾ ಗುಹೆಯಲ್ಲಿ ರತ್ನ ಬಳೆ ಪ್ರಭೆಯಲ್ಲಿ
ಮೆತ್ತಗಿಳಿಸುವನು ನೆಲುವಿಂದ । ನೆಲುವಿಂದ ದಧಿ ಘೃತವ
ಚಿತ್ತಜಾಪಿತನು ತೆಗೆದುಂಬ ೨೬೨

ಬಾಲಕರ ಒಡಗೂಡಿ ಬಾಲೆಯರ ಮನೆಪೊಕ್ಕು
ಪಾಲು ಮೊಸರುಗಳು ನಿಲುಕದಿರೆ । ನಿಲುಕದಿರೆ ಬಾಲಕರ
ಮೇಲ್ಹತ್ತಿ ಇಳಿಸಿ ಕುಡಿಯುವನು ೨೬೩

ಎಳೆಯ ಮಕ್ಕಳ ತೊಟ್ಟಿಲೊಳಗಿಟ್ಟು ಗೋಪಿಯರು
ಒಳಗೆ ಕಾರ್ಯದಲಿ ಇರುತಿರಲು । ಇರುತಿರಲು ಚಿವುಟುತ್ತಾ
ಅಳಸಿ ಮಕ್ಕಳನು ಮರೆಯಾಗ್ವ ೨೬೪

ಬಡಿದು ಭಾಂಡವ ಚೆಲ್ಲಿ ಗಡಿಗೆ ವಡೆದಂಗಳದಿ
ಪಿಡಿಯಲೆತ್ನಿಸಲು ಗೋಪಿಯರು । ಗೋಪಿರ ಕೈ ಸಿಗದೆ
ಹೊಡೆದು ಚಪ್ಪಾಳೆ ನಸುನಗುವ ೨೬೫

ಚೋರತನದಲಿ ಪೋರ ಗೋಪಿಯರ ಮನೆ ಪೊಕ್ಕು
ಸೇರದಿರೆ ಕೈಗೆ ದಧಿ ಭಾಂಡ । ದಧಿ ಭಾಂಡ ಕೋಲ್ತಿವಿದು
ಧಾರೆಗೇ ಬಾಯಿ ಒಡ್ಡುವನು ೨೬೬

ಸಂಜೆ ಹೊತ್ತಿಗೆ ಹೋಗಿ ಸಣ್ಣಕರುಗಳ ಬಿಚ್ಚಿ
ಕಂಜಾಕ್ಷ ಹಸುವ ಹಾಲುಣಿಸಿ । ಹಾಲುಣಿಸಿ ಗೋಪಿಯರು
ಅಂಜಿಸೇ ಓಡಿ ಬರುತಿಹನು ೨೬೭

ಬೆಣ್ಣೆ ಮೆಲ್ಲುತ ಕೃಷ್ಣ ಸಣ್ಣ ಪ್ರಾಯದಲಿರುವ
ಕನ್ನಯರ ಗಲ್ಲಕೊರಸುತಲಿ । ವರೆಸುತಲಿ ಮುದ್ದಿಟ್ಟು
ಕಣ್ಣು ಸಂಜ್ಞೆಯನು ಮಾಡುವನೆ ೨೬೮

ತುಡುಗ ಕೃಷ್ಣನು ಸಿಕ್ಕ ಹಿಡಿವೆನೆಂಬನಿತರೊಳು
ಪಿಡಿದು ಗೋಪಿಯರ ಅಪ್ಪುತಲಿ । ಅಪ್ಪಿ ಕುಚ ಮುದ್ದಿಟ್ಟು
ಹಿಡಿತಕ್ಕೆ ಸಿಗದೆ ಓಡುವನೆ ೨೬೯

ಏಕಕಾಲದಿ ಎಲ್ಲ ಗೋಪಿಯರ ಮನೆಯಲ್ಲಿ
ಸಾಕು ಮಾಡುವನು ಬಲು ತುಂಟ । ತುಂಟತನದಿಂದವರ
ಬೇಕೆಂದು ಬಹು ಗುಲ್ಲು ಮಾಡುವನು ೨೭೦

ಯಾರಿಗೂ ಅಳವಡದ ಚಾರುಚರಿತನ ಲೀಲೆ
ಘೋರವಾಯಿತು ಗೊಲ್ಲ ಭಾಮೆಯರಿಗೆ । ಭಾಮೆಯರು ಕೃಷ್ಣನ್ನ
ದೂರಿದರು ಚೋರ ಪೋರನೆಂದು ೨೭೧

ಸೇರಿ ಗೋಪಿಯರೆಲ್ಲ ಪೋರ ಕೃಷ್ಣನ ಬಾಧೆ
ಸೈರಿಸಲಾರದೈತಂದು । ತಂದು ಗೋಪಿಯ ಮುಂದೆ
ದೂರಿದರು ಎಲ್ಲಾ ಒಂದೊಂದೆ ೨೭೨

ತನ್ನ ತಾಯಿಯ ಹಿಂದೆ ಬೆನ್ಹಿಡಿದು ನಿಂತಿರುವ
ಚಿಣ್ಣನ್ನ ತೋರಿ ಗೋಪಿಯರು । ಗೋಪಿಯರು ಪೇಳುವರು
ನಿನ್ನ ಮಗನಾಟ ಸೈರಿಸೆವೆ ೨೭೩

ಮಾಯಕಾರನು ಕೃಷ್ಣ ಆಯವರಿಯೆವೆ ನಾವು
ಬಾಯ ಬಿಡಿಸುವನು ಬಲು ಭಂಡ । ಬಲು ಭಂಡತನವಿನ್ನು
ನ್ಯಾಯವುಂಟೇನೇ ಗೋಪಮ್ಮ ೨೭೪

ಉಳಿಸಲಾರವೆ ಕೇಳು ನೆಲುವಿನಾ ಪಾಲ್ಮೊಸರ
ಒಳಪೊಕ್ಕು ಎಲ್ಲಾ ಕುಡಿವೋನೆ । ಕುಡಿಯುವನೆ ಗೋಪ್ಯಮ್ಮ
ಎಳೆಯ ಮಕ್ಕಳನು ಬಡಿವೋನೆ ೨೭೫

ಪಾಲುಗಡಿಗೆಯ ನಡಿವಿನಾಲಯದಿ ಒಡೆದಿಕ್ಕಿ ತ
ನ್ನಾಲಯಕೆ ಓಡಿಬರುತಿಹನೆ । ಬರುತಿಹನೆ ಕೈಗೆ ಸಿಗದೆ
ಲೀಲೆಯಿದು ನಿನಗೇ ಸರಿಯೇನೆ ೨೭೬

ನಡುರಾತ್ರಿಯಲಿ ಎನ್ನ ಒಡೆಯನಂದದಿ ಬಂದು
ಸಡಗರದಿ ಮಂಚ ಏರುವನೆ । ಏರುವನೆ ಬೆಳಗಾಗೆ
ತುಡುಗನಂದದಲಿ ತೋರುವನೆ ೨೭೭

ಭಂಡು ಮಾಡುವರಲ್ಲೆ ಕಂಡರೇ ನಮ್ಮವರು
ಭಂಡತನ ಬಿಡಿಸೆ ಗೋಪ್ಯಮ್ಮ । ಗೋಪ್ಯಮ್ಮ ನಿನ್ನ ಮಗನ
ಪುಂಡಾಟಕ್ಕೆದುರು ಇನ್ನಿಲ್ಲೆ ೨೭೮

ತಾಳಲಾರೆವೆ ಬಾಧೆ ಹೇಳಲಾರೆವೆ ಇನ್ನು
ಬಾಲಕೃಷ್ಣನ ತುಡುಗಾಟ । ತುಡುಗಾಟ ಬಿಡಿಸಮ್ಮ
ಬಾಳುವುದು ಎಂತು ನಾವಿನ್ನು ೨೭೯

ಸರಿಯಲ್ಲ ನಿನ ಮಗನ ಪರಿಪರಿಯ ತುಂಟಾಟ
ಸರಿಯವರು ನೋಡಿ ನಗುವ್ರೋರೆ । ನಗುವ್ರೋರೆ ನೆರೆಹೊರೆಯ
ತರಳರೂ ಕಲಿತು ಕೆಡುವ್ರೋರೆ ೨೮೦

ಮುದ್ದಿಸೀ ಮನೆಯಲ್ಲಿ ಮುದ್ದೆ ಬೆಣ್ಣೆಯ ಕೊಟ್ಟು
ಕದ್ದು ತಿನ್ನುವುದು ಕಲಿಸಿದೆ । ಕಲಿಸಿದೇ ನಿನಗವನು
ಮುದ್ದಿನಾ ಮಗನು ನಮಗೇನೆ ೨೮೧

ನಮ್ಮ ಮಕ್ಕಳ ಹಾಗೆ ಸುಮ್ಮನಿರುವವನಲ್ಲ ನಿ
ನ್ನ ಮಗ ಕೇಳೆ ಗೋಪ್ಯಮ್ಮ । ಗೋಪ್ಯಮ್ಮ ನಿನಗಿದು
ಸಮ್ಮತವೆ ಪೇಳೆ ನ್ಯಾಯದಲಿ ೨೮೨

ಕೇಳದಿದ್ದರೆ ಬುದ್ಧಿ ಬಾಲಕೃಷ್ಣನ ನೀನು
ಆಲಯದ ಹೊರಗೆ ಕಳುಹಾದೆ । ಕಳುಹಾದೆ ಒಳಗಿರಿಸು
ಕೀಳು ದುರ್ಬುದ್ಧಿ ಥರವಲ್ಲ ೨೮೩

ಇಂತು ಬಹು ಕೋಪದಲ್ಲಿ ಕಾಂತೆಯರು ದೂರಿಡುತ
ನಿಂತಿರಲು ಗೋಪಿ ಕೃಷ್ಣನ್ನ । ಕೃಷ್ಣನ್ನ ಕೈ ಪಿಡಿದು
ಕಂತುಪಿತ ನೀ ನಿಜವ ಪೇಳೆನಲು ೨೮೪

ಒಂದು ಅರಿಯದ ತೆರದಿ ಕುಂದೆನಗೆ ಬಂತೆಂದು
ತಂದ ನಯನದಲಿ ಜಲಬಿಂದು । ಜಲಬಿಂದು ಜಾರುತಿರೆ
ಕಂದಮ್ಮ ನುಡಿದ ತೊದಲುತ್ತ ೨೮೫

ಇಲ್ಲಮ್ಮ ನಾರಿಯರು ಎಲ್ಲ ಸುಳ್ಳಾಡುವರು
ಬಲ್ಲವಳೆ ಕೇಳು ಪೇಳುವೆನು । ಪೇಳುವೆನು ಮನಿಬಿಟ್ಟು
ಎಲ್ಲು ಹೋಗಿಲ್ಲೆ ನಾನಿನ್ನು ೨೮೬

ಹಸುಕಂದ ನಾ ಗಡಿಗೆ ಮೊಸರೆಲ್ಲ ಕುಡಿಯುವನೆ
ಹುಸಿಯನಾಡುವರು ಎನ ಮೇಲೆ । ಎನ ಮೇಲೆ ತಾವ್ನುಡಿದು
ವಶವಲ್ಲ ಇವರ ಸುಳ್ಳಾಟ ೨೮೭

ಬಾಲರೊಡಗೂಡಿ ನಾ ಬಯಲೊಳಗೆ ಆಡುತಿರೆ
ಬಾಲೆಯರು ಕಣ್ಣು ಸನ್ನೆಯಲಿ । ಸನ್ನೆಯಲಿ ಕರೆದೆನಗೆ
ಹಾಲು ಕೊಟ್ಟೀಗ ದೂರುವೊರೆ ೨೮೮

ಚಲುವನೆನ್ನುತ ಎನ್ನ ನಿಲಯಕ್ಕೆ ಕರೆದೊಯ್ದು
ಬಲು ಮುದ್ದನಾಡಿ ಅಪ್ಪುತಲಿ । ಅಪ್ಪುತಲಿ ನಿನ ಮುಂದೆ
ಛಲದಿಂದ ದೂರುವುದು ಒಳಿತೇನೆ ೨೮೯

ಭಂಡ ನಾರಿಯರು ತಮ್ಮ ಗಂಡ ಊರೊಳಗಿಲ್ಲ
ಪುಂಡರೀಕಾಕ್ಷ ಬಾರೆಂದು । ಬಾರೆಂದು ತಕ್ಕೈಸಿ
ಭಂಡನೆಂತೆಂದು ದೂರುವರೆ ೨೯೦

ಗಟ್ಟಿ ನಾರಿಯರು ಇವರೆಷ್ಟು ದೂರುವರೆನ್ನ
ಪುಟ್ಟಿಸೀಕೊಂಡು ಮಾತುಗಳ । ಮಾತುಗಳನಾಡುವರು
ಸಿಟ್ಟಾಗ ಬೇಡೆ ಗೋಪ್ಯಮ್ಮ ೨೯೧

ಮುದ್ದು ಮಾತಿನೊಳಿಷ್ಟು ಸುದ್ದಿಯನೆ ಹೇಳುತ್ತ
ಗದ್ಗದ ಸ್ವರದಿ ಅಳುತಿರಲು । ಅಳುತಿರಲು ಕಣ್ಣೊರಸಿ
ಮುದ್ದು ಕಂದನ್ನ ಅಪ್ಪಿದಳು ೨೯೨

ಸುತ ಮೋಹದಿ ಗೋಪಿ ಸತಿಯರಾ ಮುಖ ನೋಡಿ
ಅತಿ ನಿಂದ್ಯ ವಚನ ಆಡುವರೆ । ಆಡುವರೆ ನೀವೆನುತ
ಮತಿವಂತೆ ನಗುತ ಪೇಳಿದಳು ೨೯೩

ಕೊಡಲು ಮನೆಯೊಳು ಹಾಲು ಕುಡಿಯದಲೆ ಚೆಲ್ಲುವನು
ಕೊಡ ಕೊಡದ ಹಾಲು ಕುಡಿಯುವನೆ । ಕುಡಿಯುವನೆ ಕಂದಮ್ಮ
ಹುಡಿಗಿಯರ ನೋಡಿ ಮೋಹಿಪನೆ ೨೯೪

ಮಾರನಯ್ಯನು ಇವನು ಆ ಜನ್ಮ ಬ್ರಹ್ಮಚಾರಿ
ಜಾರನೆಂದೆನುತ ದೂರುವಿರೆ । ದೂರುವಿರೆ ಥರವಲ್ಲ
ನಾರಿಯರು ನೀವೇ ತಿಳಿದ್ಹೇಳಿ ೨೯೫

ಎಷ್ಟು ಜನುಮದ ಫಲವೊ ಪುಟ್ಟಿಹನು ಗೋಕುಲದಿ
ಸೃಷ್ಟಿ ಕರ್ತನಿಗೆ ಅಸದಳನು । ಅಸದಳನ ನೀವೀಗ
ದುಷ್ಟನೆಂತೆಂದು ಆಡುವರೆ ೨೯೬

ಚಂದ್ರಮಂಡಲ ಪೋಲ್ವ ಸುಂದರದ ಮುಖ ನೋಡೆ
ಬೆಂದು ಪೋದಾವು ದುರಿತಗಳು । ದುರಿತಗಳು ಓಡಿಸುವೊ
ಇಂದಿರೇಶನ್ನ ದೂರುವರೆ ೨೯೭

ದುಷ್ಟ ನಾರಿಯರು ನಿನ್ನೆಷ್ಟು ದೂರುವರಲ್ಲೊ
ಎಷ್ಟು ಹೇಳಿದರೂ ಬಿಡುವಲ್ಲಿ । ಬಿಡುವಲ್ಲಿ ಮನೆ ಒಳಗೆ
ಶಿಷ್ಟನಾಗಿನ್ನು ಆಡಮ್ಮ ೨೯೮

ಅಮ್ಮಗಳಿರಾ ಕೇಳಿ ನಿಮ್ಮ ಮಕ್ಕಳ ಆಟ
ನಿಮ್ಮಗೇ ಬಲು ಚಂದವಲ್ಲೇನೆ । ನಿಮ್ಮಂತೆ ನಮ್ಮ ಕೂಸು
ಸುಮ್ಮನೇ ದೂರುವುದು ಉಚಿತಲ್ಲ ೨೯೯

ಭಾಳ ಮಕ್ಕಳ ಹೆತ್ತು ಬಾಳುವಿರಿ ಗೌರವದಿ
ಬಾಳೂ ಭಂಡಾಯ್ತು ಕೃಷ್ಣನ್ನ । ಕೃಷ್ಣನೊಬ್ಬನ ಪೆತ್ತು
ಕೇಳುವುದು ಕಠಿಣ ಈ ದೂರು ೩೦೦

ಪೋಗಿರಮ್ಮ ನೀವು ನಾಗಶಯನನು ಬರಲು
ಬಾಗಿಲುಗಳ್ಹಾಕಿಕೊಳ್ಳೀರೆ । ಹಾಕಿಕೊಳ್ಳೀರೆ ಬಿಡದೆ
ಹೀಗೆಲ್ಲ ದೂರು ತರಬೇಡಿ ೩೦೧

ನಾಗವೇಣಿಯರೆಲ್ಲ ಸೋಗುಮಾತನೆ ಕೇಳಿ
ಮೂಗಿನ ಮೇಲೆ ಬೆರಳಿಟ್ಟು । ಬೆರಳಿಟ್ಟು ಬಾಗಿದರು
ಯೋಗಿನುತ ಹರಿಯಾ ತಂತ್ರಕ್ಕೆ ೩೦೨

ಹೋಗಬೇಡೆಲೊ ಕಂದ ಬಾಗಿಲಿಂದಲಿ ಆಚೆ
ನಾಗವೇಣಿಯರು ದೂರುವೊರೋ । ದೂರುವುರು ಪರಿಪರಿ
ಹ್ಯಾಗೆ ಕೇಳುತ್ತ ಸೈರಿಸಲಿ ೩೦೩

ಬೆದರಿಕೆಯ ಹಾಕದಲೆ ಚದುರ ಕೇಳನು ಎಂದು
ಪದುಮಾಕ್ಷಿ ಗೋಪಿ ಬಾಲನಿಗೆ । ಬಾಲನಿಗೆ ಮೊದ ಮೊದಲು
ಹದುಳದಲಿ ಹೇಳಿದಳು ಗದರಿಸದೆ ೩೦೪

ಹೊರಗೆ ಹೋದರೆ ಕೃಷ್ಣ ಕರೆದು ಗುಮ್ಮಗೆ ನಿನ್ನ
ಸೆರೆ ಹಿಡಿದು ಕೊಡುವೆ ಕೇಳಿನ್ನು । ಕೇಳಿನ್ನು ಸೈರಿಸೆನು
ಥರವಲ್ಲ ನಿನ್ನ ಆಟಗಳು ೩೦೫

ಕತ್ತಲೊಳು ಹೊರಗ್ಹೋಗಿ ಸುತ್ತ ಬೇಡೆಲೊ ರಂಗ
ಎತ್ತಿ ವೈದಾವು ಗುಮ್ಮಗಳು । ಗುಮ್ಮಗಳು ಬಹಳುಂಟು
ಸುತ್ತುತಿವೆ ನಿನ್ನ ಅರಸುತಲಿ ೩೦೬

ಅಮ್ಮ ಹೊರಗ್ಹೋಗೊಲ್ಲೆ ಸುಮ್ಮನಿಲ್ಲಿಯೇ ಇರುವೆ
ಗುಮ್ಮಗಳೂ ಹ್ಯಾಗೆ ಇವೆ ಹೇಳೆ । ಇವೆ ಹೇಳೆ ಕೇಳುವೆನು
ದಮ್ಮಯ್ಯ ಎನ್ನ ಕೊಡಬೇಡ ೩೦೭

ಕೇಳೊ ಕೃಷ್ಣಯ್ಯ ನಾ ಪೇಳುವೆನು ಗುಮ್ಮಗಳು
ತಾಳಿರುವ ರೂಪದಾಕೃತಿಯ । ಆಕೃತಿಯ ಧರಿಸುತಲಿ
ಭಾಳ ಕಡೆ ನಿನ್ನ ಹುಡುಕುವವು ೩೦೮

ನಾಲ್ಕು ಮುಖವನೆ ಧರಿಸಿ ನಾನಾ ವರ್ಣವನುಟ್ಟು
ನಾಲ್ಕೆರಡು ಕಣ್ಣು ತೆರೆಯುತಲಿ । ತೆರೆಯುತಲಿ ಒಂದು ಗುಮ್ಮ ಗೋ
ಕುಲದಿ ನಿನ್ನ ಅರಸುವುದು ೩೦೯

ಮೂರು ಕಣ್ಣನೆ ತೆರೆದು ಬೂದಿ ಮೈಯಲಿ ರುಂಡ
ಹಾರ ಕೊರಳಲ್ಲಿ ಧರಿಸುತಲಿ । ಧರಿಸುತಲಿ ಒಂದು ಗುಮ್ಮ
ಹಾರುತ್ತ ನಿನ್ನ ಹುಡುಕುವುದು ೩೧೦

ಮೈಯೆಲ್ಲ ಕಣ್ಣಾಗಿ ಕೈಯ್ಯಲೊಜ್ರವ ಧರಿಸಿ
ಹೊಯ್ಯುತ್ತ ಸುರರ ವೈರಿಗಳ । ವೈರಿಗಳ ಒಂದು ಗುಮ್ಮ
ವೈಯ್ಯುವುದು ನಿನ್ನ ಕಂಡೊಡನೆ ೩೧೧

ಆರು ಮುಖದಾ ಗುಮ್ಮ ಆನೆ ಮುಖದಾ ಗುಮ್ಮ
ಚೀರುವುದು ಹೊರಗೆ ತಿರುಗತಲಿ । ತಿರುಗತಲಿ ನಿನ್ನಂತ
ಪೋರರನು ಎತ್ತಿ ವೈಯ್ಯುವುದು ೩೧೨

ಘೋರ ಗುಮ್ಮನು ಒಂದು ಏರಿ ಕೋಣನ ಬಂದು
ಘೋರ ಪಾಪಿಗಳ ಪಾಶದಲಿ । ಪಾಶದಲಿ ಕಟ್ಟುತಲಿ
ತೋರದಲೆ ಕರುಣ ಓಡುವುದು ೩೧೩

ಪುಟ್ಟಗುಮ್ಮಗಳಾಟ ಕೃಷ್ಣ ಪೇಳುವೆ ಕೇಳು
ಕಟ್ಟಿ ಕೌಪೀನ ಜಟಿಗಳನು । ಜಟಿಗಳನು ಗಡ್ಡಗಳ
ಬಿಟ್ಟುಕೊಂಡಿಹವು ನಿನ್ನ ಪಿಡಿಯೆ ೩೧೪

ಕೆಲವು ಗುಮ್ಮಗಳುಂಟು ತುಳಸಿ ಪದ್ಮಾಕ್ಷಿಗಳ
ಹೊಳೆವೊ ದ್ವಾದಶ ನಾಮ ಧರಿಸುತಲಿ ।
ಧರಿಸಿ ಕಾವಿಯ ಹೊದ್ದು
ಕಳವುದಕೆ ನಿನ್ನ ತಿರಗುವುವು ೩೧೫

ಹೇಳುವೆನು ಕೇಳಿನ್ನು ಹಲವಾರು ಗುಮ್ಮಗಳು
ಕಾಲಲ್ಲಿ ಗೆಜ್ಜೆ ಕಟ್ಟುತಲಿ । ಕಟ್ಟುತಲಿ ಕೈಯೊಳಗೆ
ತಾಳಗಳ ಪಿಡಿದು ಕುಣಿಯುವುವು ೩೧೬

ಮುಚ್ಚಿಪಾ ನೇತ್ರಗಳ ಬಿಚ್ಚದಲೆ ಮೈ ಮರೆತು
ಹುಚ್ಚು ಹುಚ್ಚಾಗಿ ಕುಣಿಯುವುದು । ಕುಣಿವಾಗ ನೀ ಸುಳಿಯೆ
ಎಚ್ಚತ್ತು ನಿನ್ನ ಪಿಡಿಯುವುವು ೩೧೭

ಹೆದರಬೇಡಲೊ ಕಂದ ಅದುಭುತದ ಗುಮ್ಮೊಂದು
ಅದರ ವಿಧವೀಗ ಪೇಳುವೆನು । ಪೇಳಲೆನ್ನಳವಲ್ಲ
ಅದು ಎಲ್ಲ ಗುಮ್ಮಕರ ಸಂತೆ ೩೧೮

ಘೋರ ಕೇಶಗಳಂತೆ ಕೋರೆ ದಾಡೆಗಳಂತೆ
ಹಾರ ಕೊರಳೊಳಗೆ ಕರುಳಂತೆ । ಕರುಳಂತೆ ಧರಿಸುತಲಿ
ಚೀರಿ ಬಾಯ್ತೆರೆದು ಇಹುದಂತೆ ೩೧೯

ಗುಡ್ಡೆ ಕೆಂಗಣ್ಣಂತೆ ದೊಡ್ಡ ಆಕೃತಿಯಂತೆ
ಹೆಡ್ಡ ರಕ್ಕಸನ ಉದರವನು । ಉದರ ಬಗೆದಸುರರನು
ಅಡ್ಡಾಡಗೊಡದೆ ಇಹುದಂತೆ ೩೨೦

ತೆರೆದು ನಾಲಗೆಯನ್ನು ಧರಿಸಿ ಕೋಪಾಕೃತಿಯ
ಸರಿ ಇಲ್ಲದಂತೆ ಜಗದೊಳಗೆ । ಜಗದೊಳಗೆ ಮೆರೆಯುತ್ತ
ನರನಲ್ಲ ಮೃಗವಲ್ಲದಂತಿಹುದು ೩೨೧

ಭಾಳ ಗುಮ್ಮಗಳಾಟ ಹೇಳಿದೆನೊ ನಿನಗೀಗ
ಬಾಲಕಂದಮ್ಮ ಹೊರಗ್ಹೋಗಿ । ಹೊರಗ್ಹೋಗಿ ಆಡದಲೆ
ಆಲಯದಿ ಸುಮ್ಮನಾಡಮ್ಮ ೩೨೨

ಒಮ್ಮೆ ನೋಡುವೆನಮ್ಮ ಗುಮ್ಮ ಹ್ಯಾಗಿವೆ ಎಂದು
ಅಮ್ಮ ಕಳುಸಮ್ಮ ನೀ ಹೊರಗೆ । ಹೊರಗ್ಹೊಗಿ ಹೆದರದಲೆ
ಬ್ರಹ್ಮಾಂಡ ತಿರುಗಿ ಬಹೆನೀಗ ೩೨೩

ನೀನು ಪೇಳಿದ ಗುಮ್ಮಗಳು ಎನ್ನ ಕೊಂಡೊಯ್ದು
ಏನು ಮಾಡುವುದು ಪೇಳಮ್ಮ । ಪೇಳಮ್ಮ ಹೆದರದಲೆ
ಕೇಳುವೆನು ಸಿಗೆನು ಅವುಗಳಿಗೆ ೩೨೪

ಕೃಷ್ಣಯ್ಯ ನಿನ್ನ ಆ ಕೆಟ್ಟ ಗುಮ್ಮಗಳ್ವ್ಯೊದು
ಕಟ್ಹಾಕಿ ಪುಟ್ಟ ಮನೆಯಲ್ಲಿ । ಮನೆಯಲ್ಲಿ ಹೊರಬಿಡದೆ
ಇಟ್ಟು ಸೆರೆ ನೋಡಿ ದಣಿಯುವುವು ೩೨೫

ಹಿರಿಯ ಗುಮ್ಮನ ವಾರ್ತೆ ಹೊಸತಲ್ಲ ಕೇಳಮ್ಮ
ತರಳರಲಿ ಬಹಳ ಕರುಣಂತೆ । ಕರುಣಂತೆ ಆ ಗುಮ್ಮ
ದುರುಳರಿಗೆ ಬಹಳ ಕ್ರೂರಂತೆ ೩೨೬

ಎಲ್ಲ ಗುಮ್ಮವು ಬರಲಿ ಹಮ್ಮು ಮುರಿಯುವೆನಮ್ಮ
ಇಲ್ಲಿ ಬರಲೀಗ ಹಿಡಿಯುವೆನು । ಹಿಡಿಯುವೆನು ಬಡಿಯುವೆನು
ಬಲ್ಲಿದನೆ ನಾನು ಜಗಕೆಲ್ಲ ೩೨೭

ಅದುಭುತದ ಗುಮ್ಮಗಳ ವಿಧ ವಿಧವ ಪೇಳುತ್ತ
ಹೆದರಿಸಲಿ ಬೇಡಮ್ಮ ಎನ ಮುಂದೆ । ಎನ ಮುಂದೆ ನೀನೀಗ
ಅದು ಎನ್ನ ಏನು ಮಾಡ್ಯಾವೆ ೩೨೮

ಆರಿಗೂ ಸಿಗಲಾರೆ ಆರಿಗೂ ಅಳವಲ್ಲ
ಈ ರೀತಿ ಎನ್ನ ಬೆದರಿಪುದು । ಬೆದರಿಪುದು ಥರವಲ್ಲ
ಈರೇಳು ಲೋಕದೊಡೆಯನ್ನ ೩೨೯

ಕೇಳಿದೆನು ಸಾಕಷ್ಟು ಗುಮ್ಮಗಳ ಕಥೆಯನ್ನು
ವೇಳೆಯಾಯಿತು ಎನ್ನ ಕಳುಹಮ್ಮ । ಕಳುಹಮ್ಮ ಎಂದೆನುತ
ಶ್ರೀಲೋಲ ತವಕಪಡುತಿರ್ದ ೩೩೦

ಪುಟ್ಟ ಕರುಗಳ ವನಕೆ ಅಟ್ಟಿಕೊಂಡ್ಹೋಗುವೆನೆ
ಕಟ್ಟಿಕೊಡು ಬುತ್ತಿ ಅಮ್ಮಯ್ಯ । ಅಮ್ಮಯ್ಯ ಬಾಲಕರು
ಒಟ್ಟುಗೂಡುತಲಿ ಪೋಗುವೆವೆ ೩೩೧

ಭೀಕರದ ರಕ್ಕಸರು ಗೋಕುಲದಿ ಮೈಮರಸಿ
ವ್ಯಾಕುಲವ ಪುಟ್ಟಿಸುವರಂತೆ । ಪುಟ್ಟಿಸುವ ದೈತ್ಯರನು
ಜೋಕೆಯಲಿ ಗುರುತಿಸುತ ಕೊಲ್ಲುವೆನೆ ೩೩೨

ಬೃಂದ ಎನ್ನುವ ವನವು ಅಂದವಾಗಿಹುಂದಂತೆ
ಚಂದದಾ ಯಮುನೆ ದಡವಂತೆ । ದಡವಂತೆ ನಾವಲ್ಲಿ
ಮಂದಿರವ ಮಾಡಬೇಕಂತೆ ೩೩೩

ಕಾಳಿಂದಿ ಉದಕ ಬಹು ನೀಲವರ್ಣದ ಸೊಬಗು
ಬಾಲಕೃಷ್ಣನ್ನ ಮೈಕಾಂತಿ । ಮೈಕಾಂತಿ ಪೋಲುತಲಿ
ಮೇಲಾಗಿ ಶೋಭಿಸುತ ಇಹುದಲ್ಲಿ ೩೩೪

ಗೋವುಗಳ ಮೇಯಿಸಲು ಗೋವರ್ಧನಾ ಗಿರಿಯು
ಪಾವನದ ಗರಿಕೆ ಸೊಂಪಾಗಿ । ಸೊಂಪಾಗಿ ಬೆಳೆದಿಹುದು
ಗೋವರ್ಕಳಲ್ಲಿ ತಿರುಗುವರು ೩೩೫

ತರಳರನು ಒಡಗೂಡಿ ತುರುಕರುವ ಹೊಡಕೊಂಡು
ಧರಿಸಿ ಕರದಲ್ಲಿ ವೇಣುವನು । ವೇಣು ಊದುತ ಕೃಷ್ಣ
ತುರುವ ಕಾಯುವುದು ಬಲು ಚಂದ ೩೩೬

ಸುತ್ತಿ ಬಂದನು ಕೃಷ್ಣ ವನದೊಳಗೆ ತುರುಕಾಯ್ದು
ಹೊತ್ತು ಮೀರಲು ಮನೆಗೆ ತಾ ಬಂದು ।
ತಾ ಬಂದು ಬಳಲುತಲಿ
ಹೆತ್ತ ಜನನಿಯ ಸಾರಿ ಬಳಿ ನಿಂತ ೩೩೭

ಅಮ್ಮ ಹಸಿದೆನೆ ಈಗ ಕೊಡು ಎನಗೆ ನೊರೆ ಹಾಲ
ದಮ್ಮನೇ ದಣಿದೆ ರಕ್ಕಸರ । ರಕ್ಕಸರ ಸದೆ ಬಡಿದು
ಹಮ್ಮೈಸಿಕೊಂಡು ಬಂದಿಹೆನೆ ೩೩೮

ಏನು ಮಾಡಿದೆ ರಂಗ ನೀನು ವನದಲಿ ಪೇಳು
ಕಾನನದ ಲೀಲೆ ಕೇಳುವೆನು । ಕೇಳಿ ಪಾಲುಣಿಸುವೆನು
ಬಾಲಕೃಷ್ಣಯ್ಯ ಪೇಳಿನ್ನ ೩೩೯

ಹೇಳಲೇನೆಲೆ ತಾಯೆ ಕಾಳಿಂದಿ ಮಡುವಿನಲಿ
ಕಾಳಿಂಗನಾ ಹೆಡೆಯ ಮೆಟ್ಟಿದೆನು । ಮೆಟ್ಟಲಾ ಕನ್ಯೆಯರು
ಕೇಳೀದಂತ್ವರವ ಕೊಟ್ಟೇನೇ ೩೪೦

ಉಡುರಾಜ ಪ್ರಭೆಯಲ್ಲಿ ದಡದ ಮರಳಲಿ ಕುಳಿತು
ಹಿಡಿದು ಕೊಳಲನ್ನು ಊದಿದೆನೆ । ಉದಿದಾ ಸ್ವರ ಕೇಳಿ
ನಡೆದು ಬಂದಾರೆ ಗೋಪಿಯರು ೩೪೧

ಕೊಳಲ ನಾ ಊದುತಿರೆ ಹೊಳೆಯು ಹರಿಯದೆ ನಿಂತು
ಮೊಳೆತವಾಕ್ಷಣದಿ ಕುಡಿ ಚಿಗುರು । ಕುಡಿ ಚಿಗುರು ಪಲ್ಲವಿಸಿ
ಗಿಳಿ ಕೋಗಿಲೆಗಳು ಕುಣಿದಾವು ೩೪೨

ಹಗರಣದ ನಾದಕ್ಕೆ ತಗಲಿ ಮನ ಗೋವುಗಳು
ಅಗಿಯದೇ ಹುಲ್ಲು ನಿಂತಾವೆ । ನಿಂತಾವೆ ಕೇಳುತಲಿ
ಜಗವೆಲ್ಲ ಗಾನಮಯವಾಯ್ತು ೩೪೩

ಆಡಿದೆನೆ ಗೋಪ್ಯಮ್ಮ ಕೂಡಿ ಗೋಪಿಯರೊಡನೆ
ನೋಡಿದರು ಮೇಲೆ ಸುರವೃಂದ । ಸುರವೃಂದ ಹರುಷದಲಿ
ಸುರಿಸಿದರು ಪರಿಪರಿಯ ಪುಷ್ಪವೃಷ್ಟಿ ೩೪೪

ಭಾಸುರಾಂಗಿಯರೆಲ್ಲ ಆಶಿಸಿದ ತೆರದಲ್ಲಿ
ರಾಸಕ್ರೀಡೆಯನಾಡಿ ಸುಖವಿತ್ತೆ । ಸುಖವಿತ್ತು ಜಲಕ್ರೀಡೆ
ಘಾಸಿಗೊಳಿಸದಲೆ ಆಡಿದೆನೆ ೩೪೫

ಬಾಲೆಯರು ಲೀಲೆಯಲಿ ಜಲದಿ ಮೀಯುವೆವೆಂದು
ಸಲಿಲ ತೀರದಿ ವಸ್ತ್ರ ಬಿಚ್ಚಿಡಲು ಬಿಚ್ಚಿಟ್ಟ ವಸ್ತ್ರಗಳ
ಹೇಳದಲೆ ಕೊಂಡೊಯ್ದು ಮರವೇರ್ದೆ ೩೪೬

ಅಭಿಮಾನ ತ್ಯಜಿಸದಲೆ ಲಭಿಸದ್ವಸ್ತ್ರವು ಎನಲು
ಅಬಲೆಯರು ಎರಡು ಕೈ ಎತ್ತಿ । ಕೈ ಎತ್ತಿ ಮೊರೆಯಿಡಲು
ಶುಭವಾಗಲೆಂದಿತ್ತೆ ವಸ್ತ್ರಗಳ ೩೪೭

ಸುರಪನಾಹುತಿಯನ್ನು ಗಿರಿರಾಜಗೆರೆಯುತಿರೆ
ಸುರಿಸಿದನು ದೇವೇಂದ್ರ ಘನವೃಷ್ಟಿ । ಘನವೃಷ್ಟಿ ಭಯ ಬಿಡಿಸಿ
ಗಿರಿಯನೆತ್ತಿದೆನು ಬೆರಳಿನಲಿ ೩೪೮

ಕರುವಾಗಿ ಬಂದಂಥ ದುರುಳನ್ನ ಸಂಹರಿಸಿ
ಉರಿವ ದಾವಾಗ್ನಿ ನುಂಗಿದೆನೆ । ನುಂಗಿದೆನೆ ಸಜ್ಜನರ
ಪರಿಪರಿಯ ಕಷ್ಟ ಬಿಡಿಸದೆನೆ ೩೪೯

ತುರುಕರುಗಳನ್ನು ಅಜನು ಗಿರಿಯ ಗುಹೆಯೊಳಗಿಟ್ಟು
ಹೊರಗೆ ಬರದಂತೆ ಮಾಡಿರಲು । ಮಾಡಿರಲು ಒಂದೊರುಷ
ಗುರುತು ಸಿಗದಂತೆ ಸಲಹಿದೆನೆ ೩೫೦

ವನವನವ ತಿರುಗುತ್ತ ವನಿತೆರೊಡನಾಡುತ್ತ
ದನಗಳನೆ ಕಾಯ್ದು ದಣಿಯುತ್ತ । ದಣಿಯುತ್ತ ರಕ್ಕಸರ
ಹಣಿಯುತ್ತ ಬಳಲಿ ಬಂದಿಹೆನೆ ೩೫೧

ಬಾಲತನದಲಿ ಗೈದ ಭಾಳ ಕಾರ್ಯಗಳನ್ನು
ಪೇಳಲಳವಲ್ಲ ನನಗಿನ್ನು । ನನಗಿನ್ನು ಭೂದೇವಿ
ಗೋಳಿಟ್ಟ ಮೊರೆಯ ಲಾಲಿಸಿದೆ ೩೫೨

ಇಷ್ಟು ನಾ ಮಾಡಿದರು ಭ್ರಷ್ಟ ಕಂಸನ ತಾಪ
ದಟ್ಟುಳಿಯ ಬಾಧೆ ಬಿಡಲಿಲ್ಲ । ಬಿಡಲಿಲ್ಲವೆಂದೆನುತ
ವೃಷ್ಣಿ ವಂಶಜರು ಚಿಂತಿಪರು ೩೫೩

ಮಧುರ ಪಟ್ಟಣವಂತೆ ಮಾವನವನೆನಗಂತೆ
ಸದೆವುದಕೆ ಹವಣಿಸುತಿಹನಂತೆ । ಇಹನಂತೆ ನಾನವನ
ವಧಿಸಬೇಕೆಂತೆ ಶೀಘ್ರದಲಿ ೩೫೪

ತಂದೆ ತಾಯಿಗಳನ್ನು ಬಂಧಿಸಿಹನಂತೆ
ಬಂಧನವ ಬಿಡಿಸಬೇಕಂತೆ । ಬೇಕಂತೆ ನಾ ಪೋಗಿ
ದಂದುಗವ ನೀಗಬೇಕಂತೆ ೩೫೫

ಬಿಲ್ಲು ಹಬ್ಬದ ನೆಪದಿ ಕ್ಷುಲ್ಲಕನು ಬರಹೇಳಿ
ಮಲ್ಲರನು ತನ್ನ ಕಾವಲಿಗೆ । ಕಾವಲಿಗೆ ಇರಿಸಿಹನು
ಅಲ್ಲಿಗೇ ನಾ ಹೋಗಬೇಕಂತೆ ೩೫೬

ಕರೆಯ ಬಂದಿಹನಂತೆ ಕರುಣಾಳು ಆಕ್ರೂರ
ಹೊರವಲಯದಲ್ಲಿ ತೇರನ್ನು । ತೇರ ನಿಲಿಸುತ ಅಲ್ಲಿ
ಸಿರಿವರನ ನೆನೆಯುತಿಹನಂತೆ ೩೫೭

ಅಮ್ಮ ನೀ ಪ್ರೀತಿಯಲಿ ಇನ್ನೊಮ್ಮೆ ಕೊಡು ಹಾಲು
ಘಮ್ಮನೇ ಪೋಗಿ ಕಂಸನ್ನ । ಕಂಸನ್ನ ಸಂಹರಿಪೆ
ಒಮ್ಮನದಿ ಹರಸಿ ಕಳಿಸಮ್ಮ ೩೫೮

ತಾಯಿ ಪೋಷಣೆ ಬಲವೆ ಕಾಯುವುದು ಎನ್ನನ್ನು
ಕಾಯ ಕೊಬ್ಬಿರುವ ಕಂಸನ್ನ । ಕಂಸನಾ ಮದವನ್ನು
ಆಯವರಿತು ನಾನು ಅಡಗಿಸುವೆ ೩೫೯

ಬಾಲನಿಗೆ ಹಾಲುಣಿಸಿ ಬಾಲೆ ಹಂಬಲಿಸಿದಳು
ಬಾಲ ನಿನ್ನಗಲಿ ಇರಲಾರೆ । ಇರಲಾರೆ ಅರಘಳಿಗೆ
ಆಲಯವು ಎನಗೆ ಕಾನನವು ೩೬೦

ಕೃಷ್ಣ ನಿನ್ನಗಲಿ ನಾ ಎಷ್ಟು ದಿನ ಕಳೆಯಲಿ
ಬಿಟ್ಟಿರಾಲಾರೆ ಅರೆಘಳಿಗೆ । ಅರೆಘಳಿಗೆ ಎಂದೆನುತ
ನಿಟ್ಟುಸುರು ಬಿಟ್ಟು ಅಳಲಿದಳು ೩೬೧

ಪಾಲಿಸಿದೆ ಎನ್ನ ನೀ ಲಾಲಿಸಿದೆ ಗೋಪ್ಯಮ್ಮ
ಮೇಲೆ ಕಷ್ಟಗಳ ಸಹಿಸೀದೆ । ಸಹಿಸಿದಾ ಉಪಕೃತಿಯ
ಮರೆಯಲಳವಲ್ಲ ಎನ್ನಿಂದ ೩೬೨

ಚಿಂತಿಸಲಿ ಬೇಡಮ್ಮ ಸಂತಸದಿ ಕಳುಹೆನ್ನ
ಸಂತೈಸಿ ಜನನಿ ಜನಕರನು । ಜನನಿ ಜನಕರ ಬಿಡಿಸಿ
ಹಿಂತಿರುಗಿ ಬೇಗಾ ಬರುವೇನು ೩೬೩

ಕೃಷ್ಣ ಹೊರಡುವ ಸುದ್ದಿ ಮುಟ್ಟಿ ಗೋಪಿಯರೆಲ್ಲ
ಕೆಟ್ಟೆವು ನಾವೆಂದು ಕಂಗೆಟ್ಟು । ಕಂಗೆಟ್ಟು ಸೇರುತಲಿ
ಗುಟ್ಟಾಗಿ ಮಾತನಾಡಿದರು ೩೬೪

ಬಿಡಿರೆ ಕೆಲಸಗಳನ್ನು ನಡಿರೆ ಪೋಗೋಣ ಈಗ
ತಡೆಯೋಣ ಕೃಷ್ಣ ಪಯಣವನು । ಪಯಣ ಪೋಗುವನಂತೆ
ತಡೆಯುವುದು ನಾವೆಂತು ವಿರಹವನು ೩೬೫

ಎಲ್ಲಿಗ್ಹೋಗುವೆ ಕೃಷ್ಣ ನಿಲ್ಲು ನಿಲ್ಲೆಲೊ ದೇವ
ಸಲ್ಲದೋ ನಂಬಿದವರನ್ನು । ನಂಬಿದವರನು ಬಿಟ್ಟು
ಬಿಲ್ಲು ಹಬ್ಬಕ್ಕೆ ಹೋಗುವರೆ ೩೬೬

ನಾರಿಯರೆ ನಾ ಪೋಗಿ ಕ್ರೂರ ಕಂಸನ ಕೊಂದು
ಸೇರುವೆನು ನಿಮ್ಮ ಹಲಬದಲೆ । ಹಲಬದಲೆ ಕಳುಹಿಸಿರಿ
ಕಾರ್‍ಯ ಬಹಳುಂಟು ಮಧುರೆಯಲಿ ೩೬೭

ಇಲ್ಲಿಲ್ಲ ಅಲ್ಲುಂಟು ಎಂಬ ಸೊಲ್ಲನು ಬಿಡಿರೆ
ಎಲ್ಲೆಲ್ಲಿ ತಿಳಿದರಲ್ಲಿರುವೆ । ಅಲ್ಲಿರುವೆ ನೆನೆದಾಗ
ನಿಲ್ಲುವೆನು ನಿಮ್ಮ ಮನದಲ್ಲಿ ೩೬೮

ಅಕ್ರೂರ ತಾನೆಮಗೆ ಕ್ರೂರನೆನಿಸಿದನಲ್ಲೆ
ದಾರಿ ಮೀರುತ ಪೋದ ತೇರನೇರಿ । ತೇರನಲಿ ಕರೆದೊಯ್ದ
ಮಾರಮಣ ಮುದ್ದು ಕೃಷ್ಣನ್ನ ೩೬೯

ಶ್ರೀ ಲೋಲನಗಲಿದಾ ಮೇಲಿನ್ನು ನಮ್ಮಗಳ
ಬಾಳು ವ್ಯರ್ಥಾಯ್ತು ಫಲವೇನು । ಫಲವೇನು ಎಂದೆನುತ
ಗೋಳಿಡುತ ಬಹು ದುಃಖ ಪೊಂದಿದರು ೩೭೦

ಮಾರನಾಟದಿ ಎಮಗೆ ತೋರಿ ಆನಂದವನು
ಈ ರೀತಿ ಈಗ ಮರೆಯಾಗಿ । ಮರೆಯಾಗಿ ನೆನವಿತ್ತು
ಸೇರಿದನೆ ಮಧುರೆ ನಾರಿಯರ ೩೭೧

ಎಷ್ಟು ದಿನಗಳ ಹೊಟ್ಟೆಕಿಚ್ಚು ತೀರಿತೆ ಅವರು
ಗುಟ್ಟಿನಲಿ ತಮ್ಮಿಷ್ಟ ಸಲಿಸಿಗೊಳುತ । ಕೊಳ್ಳುತ್ತ ನಮ್ಮನ್ನು
ಬಿಟ್ಟರೇ ನಡು ನೀರಿನೊಳಗೆ ಇಂದು ೩೭೨

ಬಲರಾಮ ಸಹಿತದಲಿ ಹಲಧರಾನುಜ ಮಧುರೆ
ನೆಲಮುಟ್ಟಿ ಬರುತ ರಜಕನ್ನ । ರಜಕನ್ನ ಸಂಹರಿಸಿ
ವಲಿದನು ಕುಬ್ಜೆ ಗಂಧಕ್ಕೆ ೩೭೩

ಬಿಲ್ಲು ಮುರಿಯುತ ಗಜವ ಸಲ್ಲಿಸುತ ಯಮಪುರಿಗೆ
ಮಲ್ಲರನು ಮುರಿದು ಮುಡುಹಿದನು । ಮಡುಹುತಲಿ ಶ್ರೀ ಕೃಷ್ಣ
ಮೆಲ್ಲನೇ ಬಂದನರಮನೆಗೆ ೩೭೪

ಕಂಸನರಮನೆಯಲ್ಲಿ ಹಂಸಗಮನದಿ ಸುಳಿದು
ಸಂಶಯಾತ್ಮಕನ ಎದುರಲ್ಲಿ । ಎದುರಲ್ಲಿ ಬರುತವನ
ಧ್ವಂಸ ಮಾಡಿದನು ಅಸುರಾರಿ ೩೭೫

ಮೆಟ್ಟಿ ಕಾಲಲಿ ಎದೆಯ ಪುಟ್ಟ ಕೈಯ್ಯಲಿ ಕೊರಳ
ಗಟ್ಟಿಯಾಗ್ಹಿಚಿಕಿ ಅಸುರನ್ನ । ಅಸುರನ್ನ ಕ್ಷಿಪ್ರದಲಿ
ಅಟ್ಟಿದನು ಯಮನ ಪಟ್ಟಣಕೆ ೩೭೬

ಸೆರೆ ಬಿಡಿಸಿ ವಸುದೇವ ದೇವಕಿಯರನು ಕರೆದು
ಎರಗಿದನು ತನ್ನ ಶಿರಬಾಗಿ । ಶಿರಬಾಗಿ ಮುತ್ಯನಿಗೆ
ವರರಾಜ್ಯ ಪಟ್ಟ ಕಟ್ಟಿದನು ೩೭೭

ಮಧ್ವರಾಯರಿಗೊಲಿದ ಮುದ್ದುಕೃಷ್ಣನ ಲೀಲೆ
ವದ್ದು ತಾಪಗಳ ಮುದವಿತ್ತು । ಮುದವಿತ್ತು ರಕ್ಷಿಪುದು
ಶ್ರದ್ಧೆಯಲಿ ಕೇಳಿ ಸಜ್ಜನರು ೩೭೮

ಬಾಲಕೃಷ್ಣನ ಲೀಲೆ ಪೇಳಲಾರಿಗೆ ಅಳವು
ಬಾಲಯತಿಗಳಿಗೆ ತಾ ಒಲಿದು । ತಾ ಒಲಿದು ಉಡುಪಿಯಲಿ
ಬಾಲಕೃಷ್ಣಯ್ಯ ನೆಲಸಿಹನು ೩೭೯

ನಾಗಮರ್ದನ ಲೀಲೆ ಜೊಗುಳವ ಪಾಡುತ್ತ
ತೂಗೆ ತೊಟ್ಟಿಲಲಿ ಹಸುಳೆಗಳು । ಹಸುಳೆಗಳು ಆನಂದ
ವಾಗಿ ನಿದ್ರಿಪವು ಸಟೆಯಲ್ಲ ೩೮೦

ಲೋಕವಾರ್ತೆಯ ತೊರೆದು ವಿವೇಕ ಮತಿಯಲಿ ಇದನು
ಸ್ವೀಕರಿಸಿ ನೋಳ್ಪ ಮನುಜರಿಗೆ । ಮನುಜರಿಗೆ ಕೈವಲ್ಯ
ತಾಕುವುದು ವಾಕು ಶತಸಿದ್ಧ ೩೮೧

ಮಧ್ವರಾಯರು ಎಮಗೆ ಮೂಲಗುರುಗಳು ಕೇಳಿ
ಗೆದ್ದು ಅದ್ವೈತ ಮತಗಳನು । ಮತಗಳನು ಮುರಿಯುತ್ತ
ದ್ವೈತವೇ ಸಿದ್ಧಾಂತವೆನಿಸಿದರು ೩೮೨

ಪೇಳಿದರು ಜಗಸತ್ಯ ಮೇಲೆ ಪಂಚಾಭೇದ
ತಾಳಿಹರು ತರತಮ್ಯ ಸುರರೊಳಗೆ । ಸುರರೊಳಗೆ ನರರೊಳಗೆ
ಶ್ರೀ ಲೋಲನೆ ಜಗಕೆ ಹೆದ್ದೈವ ೩೮೩

ಮುದ್ದುಕೃಷ್ಣನೆ ದೈವ ಮಧ್ವರಾಯರೆ ಗುರುವು
ಶುದ್ಧ ವೈಷ್ಣವರೆ ಬಂಧುಗಳು । ಬಂಧುಗಳು ಎಂದವರು
ಹೆದ್ದಾರಿ ಹಿಡಿದು ಗೆಲ್ಲುವರು ೩೮೪

ತಂದೆ ಮುದ್ದುಮೋಹನರು ನಿಂದು ಹೃತ್ಕಮಲದಲಿ
ಇಂದಿರೇಶನ್ನ ಜೋಗುಳವ । ಜೋಗುಳವ ನುಡಿಸಿಹರು
ಮಂದಮತಿ ಇದು ಎನ್ನ ನುಡಿಯಲ್ಲ ೩೮೫

ಚಿತ್ತನಿರ್ಮಲರಿದನು ಬಿತ್ತಿ ಲೋಕದ ಒಳಗೆ
ಹೆತ್ತ ತಾಯ್ಮಕ್ಕಳಿಗೆ ಪೇಳುವುದು । ಪೇಳೀ ಜೊಗುಳ ಪಾಡಿ
ಮತ್ತೆ ತಪ್ಪುಗಳ ಮನ್ನಿಪುದು ೩೮೬

ತಂದೆ ಮುದ್ದುಮೋಹನ್ನರೆಂಬೋ ಶ್ರೀ ಗುರುಚರಣ
ದ್ವಂದ್ವಗಳಿಗಿದನು ಅರ್ಪಿಸುವೆ । ಅರ್ಪಿಸುವೆ ಭಕ್ತಿಯಲಿ
ಕುಂದನೆಣಿಸದಲೆ ಪಾಲಿಸಲಿ ೩೮೭

ಜಯ ಮುದ್ದುಕೃಷ್ಣನಿಗೆ ಜಯ ಬಾಲರನ್ನನಿಗೆ
ಜಯ ಜಯತು ಗೋಪಿ ಕಂದನಿಗೆ । ಕಂದ ಆನಂದನಿಗೆ
ಜಯವೆಂದು ಪಾಡಿ ನಮಿಸೂವೆ ೩೮೮

ಮಂಗಳಂ ಗೋಪಾಲಕೃಷ್ಣವಿಠ್ಠಲ ಹರಿಗೆ
ಮಂಗಳಂ ಜಗವ ಪೊರೆವನಿಗೆ । ಪೊರೆವನಿಗೆ ಸಿರಿವರಗೆ
ಮಂಗಳಂ ಸುಜನರನು ರಕ್ಷಿಪನಿಗೆ ೩೮೯

## ಶ್ರೀ ವೆಂಕಟೇಶ ಸ್ತೋತ್ರ (೧)

### ೨೬೪

ವಂದೇ ಶ್ರೀ ಕಮಲಜಾದಿ ವೃಂದ ಯತಿ ಗುರು
ವಂದಿತಾ ಚರಣಕಮಲ
ಸಿಂಧೂಜ ಶತರವಿತೇಜ ಸಿರಿಕರಿವರದಾ
ಪಾಲಿಸೈ ವೆಂಕಟೇಶ ೧

ಮಾತಾಪಿತ್ರಾದಿ ಬಂಧು ಅನುಜ ತನುಜ ಸಖಾ
ದಾತ ಸರ್ವಾರ್ಥರೂಪ
ಜಾತಾದಿ ಅಂತ್ಯದೂರ ಸತತ ಕರುಣಿಸೀ
ಪಾಲಿಸೈ ವೆಂಕಟೇಶ ೨

ಶ್ರೀಶಾ ಸರ್ವಾದ್ಯರೀಶಾ ಪರಿಹರಿಸು ಭವ
ಕ್ಲೇಶ ಸದ್ಭಕ್ತರಾಶಾ
ದಾಸಾದಿ ಜನರ ಪೋಷ ಸಿರಿ ಭೂ ಅರಸಾ
ಪಾಲಿಸೈ ವೆಂಕಟೇಶ ೩

ನಂಬೀದ ಜನರಿಗೊಲಿದು ನವವಿಧ ಭಕುತೀ
ಬೆಂಬಿಡಾದಂತೆ ಇತ್ತು
ಅಂಬೂದಿಶಯನ ಕಾಯೊ ಅಜಸುತವರದ
ಪಾಲಿಸೈ ವೆಂಕಟೇಶ ೪

ಭೋಗೀಶಶಯನ ಸ್ವಾಮಿ ನಾಲ್ಕು ಪೆಸರಿನಾ
ನಾಗಾದ್ರಿಯಲ್ಲಿ ನೆಲಸೀ
ಬಾಗೀದ ಭಕ್ತರೀಗೆ ಭವಹರಿಸುವನೇ
ಪಾಲಿಸೈ ವೆಂಕಟೇಶ ೫

ತೋಂಡಾದಿ ನೃಪರ ವರದ ವರಹ ಗಿರಿಯಲಿ
ಭಾಂಡಕಾರನಿಗೆ ಒಲಿದು
ಚೆಂಡಾಡಿ ವೃಷಭಸುರನ ಶಿರವ ಮೆರೆದೆ ನೀ
ಪಾಲಿಸ್ಯೆ ವೆಂಕಟೇಶ ೬

ಸೌಂದರ್ಯ ಸಾರಭೋಕ್ತ ಶುಕಮುಖ ವಿನುತ
ಇಂದಿರಾರಾಧ್ಯ ಚರಿತ
ಬಂದಂತ ದುರಿತ ಹಂತ ಭಕುತರ ತಾತ
ಪಾಲಿಸ್ಯೆ ವೆಂಕಟೇಶ ೭

ಶ್ರೀ ಪದ್ಮಾವತಿಯ ರಮಣ ಸುರರಘಹರಣ
ವ್ಯಾಪಿ ಜಗದೇಕ ರಮಣ
ಆ ಪಾದಮೌಳಿ ಪೂರ್ಣ ಆನಂದಗುಣ
ಪಾಲಿಸ್ಯೆ ವೆಂಕಟೇಶ ೮

ನಿನ್ಹೊರತು ಕಾಯ್ವರಾರು ನಿಖಿಲ ಜಗದಲೀ
ಮನ್ನಿಸೀ ಮಮತೆಯಿಂದ
ಬೆನ್ಹತ್ತಿ ಇರುವ ಕರ್ಮ ಪರಿಹರಿಸುತಲಿ
ಪಾಲಿಸ್ಯೆ ವೆಂಕಟೇಶ ೯

ಮಚ್ಛಾವತಾರ ಕೂರ್ಮ ವರಹ ನರಮೃಗಾ
ದಾಕ್ಷಿಣ್ಯರಹಿತ ವಟುವೇ
ಶಿಕ್ಷಾ ಕ್ಷತ್ರಿಯರ ಕುಲಕೆ ದಶಶಿರಹರಣ
ಪಾಲಿಸ್ಯೆ ವೆಂಕಟೇಶ ೧೦

ಗೋಪಿಯರ ಕಂದ ಬಾಲಾ ಗೋವ್ರಜ ಪಾಲಾ
ಭಾಪುರೇ ತ್ರಿಪುರ ಶೂಲ
ಪಾಪಿ ಕಲ್ಯಂತಕಾಲ ಕಲ್ಕಿ ನಿರ್ಮಲಾ
ಪಾಲಿಸ್ಯೆ ವೆಂಕಟೇಶ ೧೧

ಅನಿಮಿಷ ಅಮೃತಪೋಷ ಭೂಸತಿ ವಪುಷಾ
ಕನಕ ಕಶ್ಯಪನ ದ್ವೇಷಾ
ಅಣುವೇಷ ಅಗ್ನಿವಾಸ ವನಚರ ತೋಷ
ಪಾಲಿಸೈ ವೆಂಕಟೇಶ ೧೨

ಕಂಸಾದಿ ದೈತ್ಯಹಂತ ಮುನಿನುತ ಚರಿತಾ
ವಂಶಜನ ಮೋಹದಾತ
ಹಿಂಸಾದಿ ಪಾಪ ಜನಿತಾ ನರರ ಛೇದಿತಾ
ಪಾಲಿಸೈ ವೆಂಕಟೇಶ ೧೩

ಭವ್ಯಾಂಗ ಭಾಸುರಾಂಗ ಭವಗಜಸಿಂಗಾ
ಅವ್ಯಾಜಾಕರುಣಪಾಂಗ
ದ್ರವ್ಯಾದಿ ದೈತ್ಯಭಂಗ ಫಣಿ ಫಣ ಭಂಗ
ಪಾಲಿಸೈ ವೆಂಕಟೇಶ ೧೪

ನಿತ್ಯಾತ್ಮ ಸತ್ಯಪಾಲಾ ಕಲಿಮಲಕಾಲ
ಸತ್ಯಾರುಕ್ಮಿಣಿಲೋಲ
ಹತ್ತಾವತಾರಜಾಲಾ ಕವಿಜನ ಲೀಲಾ
ಪಾಲಿಸೈ ವೆಂಕಟೇಶ ೧೫

ಸೃಷ್ಟ್ಯಾದಿ ಅಷ್ಟಕರ್ತಾ ಸುಜನರ ಭರ್ತಾ
ವಿಷ್ಣುವೇ ಸರ್ವಶಕ್ತ
ಅಷ್ಟದಿಕ್ಪಾಲ ಸ್ತುತ್ಯಾ ಅಣು ಘನ ವ್ಯಾಪ್ತಾ
ಪಾಲಿಸೈ ವೆಂಕಟೇಶ ೧೬

ನಾನರಿಯೆ ನಿನ್ನ ಮಾಯಾ ನವವಿಧ ಭಕುತಿ
ಸಾನುರಾಗದಲಿ ಜೀಯಾ
ನೀನಾಗಿ ಪಾಲಿಸೆಯ್ಯಾ ಮನುಮುನಿ ವಿನುತಾ
ಪಾಲಿಸೈ ವೆಂಕಟೇಶ ೧೭

ಶಿರದಲ್ಲಿ ರತ್ನ ಮಕುಟಾ ವರಫಣಿ ತಿಲುಕಾ
ಕರ್ಣಕುಂಡಲದ ಮಾಟ
ವರನಯನಾ ಕರುಣ ನೋಟ ಮಗುಳು ನಗೆ ಮುಖಾ
ಪಾಲಿಸ್ಯೆ ವೆಂಕಟೇಶ ೧೮

ಗಳದೀ ಕೌಸ್ತುಭವು ಹಾರ ಸಿರಿವರವಕ್ಷ
ಎಳೆ ತುಳಸೀ ಮಾಲೆ ಧೀರಾ
ನಳಿತೋಳು ನಾಲ್ಕು ಚತುರ ದರ ಸುದರುಶನ
ಪಾಲಿಸ್ಯೆ ವೆಂಕಟೇಶ ೧೯

ಉಟ್ಟಾ ಪೀತಾಂಬ್ರವರ್ಣ ಪಟ್ಟಿ ನಡುವಿಲಿ
ದೃಷ್ಟಿಗೇ ಲೋಕ ಬೆಳಗೇ
ಶ್ರೇಷ್ಠ ಶ್ರೀ ಚರಣ ಕಮಲಾ ನಗೆಮೊಗ ಚಲುವಾ
ಪಾಲಿಸ್ಯೆ ವೆಂಕಟೇಶ ೨೦

ಆವಾವ ಜನ್ಮ ಫಲವೋ ಅವನಿಗಿಳಿದು ನೀ
ಕಾವೆಯೋ ದಾಸ ಜನರ
ದೇವಾದಿ ದೇವ ನಿನ್ನ ಭಜಿಪೆ ಭಕುತರ
ಪಾಲಿಸ್ಯೆ ವೆಂಕಟೇಶ ೨೧

ಮಧ್ವೇಶ ಆನಂದತೀರ್ಥ ಮುನಿನುತ ತಂದೆ
ಮುದ್ದುಮೋಹನ್ನರಾಧ್ಯ
ಉದ್ಧರಿಸೊ ನಿತ್ಯ ಜೀಯಾ ಕರುಣಿಸು ಸೇವಾ
ಪಾಲಿಸ್ಯೆ ವೆಂಕಟೇಶ ೨೨

ಧಾರ್ವಾಡಪುರದಿ ನಿಲಯಾ ಸಿರಿ ಮರುತ ಪ್ರಿಯಾ
ಪೂರಿಸೀ ಮನದ ಧ್ಯೇಯಾ
ನಿರ್ವಾಣ ಪಾಲಿಸ್ಯೆಯ್ಯಾ ಇದ ನುತಿಪರಿಗೇ
ಪಾಲಿಸ್ಯೆ ವೆಂಕಟೇಶ ೨೩

ಆಪದ್ಭಾಂಧವನೆ ಶೀಲಾ ಗುರುಮನ ನಿಲಯಾ
ಗೋಪಿಕಾಲೋಲ ಜಾಲ
ಗೋಪಾಲಕೃಷ್ಣವಿಠ್ಠಲಾ ಸಲಿಸು ಮನಭಲಾ
ಪಾಲಿಸ್ಯೆ ವೆಂಕಟೇಶ ೨೪

## ಶ್ರೀ ವೆಂಕಟೇಶ ಸ್ತೋತ್ರ(೨)

### ೨೬೫

ವೈಕುಂಠವಾಸ ಹರಿ ಶ್ರೀ ಕಂಠನುತ ನಿನ್ನ
ಸಾಕಾರರೂಪ ತೋರೋ
ಯಾಕಿಂತು ನಿರ್ದಯವು ಈ ಕುಮತಿ ಮೇಲಿನ್ನು
ನೀ ಕರುಣಿಸೀಗ ಕಾಯೊ ೧

ಆಕಾಶರಾಜನ್ನ ವಾಕು ಲಾಲಿಸುತ ನೀ
ಬೇಕೆಂದು ಬೆಟ್ಟದಲ್ಲಿ
ಲೋಕದ ಜನರನ್ನು ಸಾಕುತ್ತ ನಿಂತಿರುವ
ಆಕಳ ಕಾಯ್ದ ದೇವಾ ೨

ಕನಸು ಮನಸೀನಲ್ಲಿ ವನಜಾಕ್ಷ ನಿನ ದಿವ್ಯ
ಘನರೂಪವನ್ನೆ ತೋರೊ
ಅನುಮಾನವ್ಯಾಕಿನ್ನು ಮುನಿವಂದ್ಯ ಎನ್ನನೀ
ಅನುರಾಗದಿಂದ ಸಲಹೋ ೩

ವೆಂಕಟಗಿರಿನಿಲಯ ಮಂಕುಮತಿಯ ಬಿಡಿಸಿ
ಸಂಕಟಗಳನೆ ಹರಿಸೊ
ಶಂಖಚಕ್ರಾಂಕಿತನೆ ಪಂಕಜಪಾದ ಮನ
ಪಂಕಜದೊಳಗೆ ತೋರೊ ೪

ಪದ್ಮಾಕ್ಷ ಪದ್ಮಮುಖ ಪದ್ಮಾನಾಭನೆ ನಿನ್ನ
ಪದ್ಮ ಪಾದವೆ ಗತಿಯೊ
ಪದ್ಮಾವತಿಪ್ರಿಯ ಪದ್ಮಹಸ್ತಾನೆ ನಿನ್ನ
ಪದ್ಮಾದಿ ನಿನ್ನ ತೋರೊ ೫

ಸೃಷ್ಟಿ ಸ್ಥಿತಿ ಲಯಕೆ ಕರ್ತಾನೆ ಎನ್ನ ಮನ
ದಿಷ್ಟಾವ ಸಲಿಸಿ ಕಾಯೋ
ಶಿಷ್ಟಾರ ಸಂಗವನು ಕೊಟ್ಟೊ ನಿನ್ನಯ ಜ್ಞಾನ
ಘಟ್ಟಾನೆ ಮನಕೆ ತೋರೊ ೬

ತತ್ವಾಧಿಪತಿಗಳೊಳು ವ್ಯಾಪ್ತಾನಾಗಿರುತಿರ್ದು
ಮತ್ತಲ್ಲ ಕರ್ಮ ಮಾಳ್ಪೆ
ಎತ್ತಾ ನೋಡಿದರು ಸುರರರ್ಥಿಯಿಂ ಸ್ತುತಿಸುವರೊ
ನಿತ್ಯಾಮೂರುತಿ ನೀ ಎಂದೂ ೭

ನಿಗಮಾದಿ ವೇದದಿಂ ಬಗೆಬಾಗೆ ಸ್ತುತಿಸಿ ಕೊಂ
ಬಗಣೀತ ಮಹಿಮ ದೇವಾ
ಖಗರಾಜ ವಾಹನನೆ ನಗೆಮೊಗದ ಚೆಲುವ ಪ
ನ್ನಗಶಾಯಿ ಸಲಹೊ ಎನ್ನ ೮

ನಿತ್ಯಾ ತೃಪ್ತಾನೆ ಹರಿ ನಿತ್ಯಾ ಪ್ರಾಪ್ತಾನೆ ಸಿರಿ
ನಿತ್ಯಾ ವಿಯೊಗಿ ದೇವಾ
ನಿತ್ಯಾ ಮುಕ್ತಾಶ್ರಯನೆ ನಿತ್ಯ ನಿರ್ವಿಕಾರ
ನಿತ್ಯಾ ಕಲ್ಯಾಣಪೂರ್ಣ ೯

ಜೀವಾಂತರಾತ್ಮಕನೆ ಜೀವಾ ನಿಯಾಮಕನೆ
ಜೀವಾದಿ ಭಿನ್ನ ದೇವಾ
ಜೀವೇಶ ಜೀವರಿಂ ಸೇವ್ಯಾನೆಂದೆನಿಪ್ಪೆ
ಜೀವಾರ ಕರ್ಮಕರ್ತ ೧೦

ಸತ್ವಾರಜೋತಮದಿ ನಿತ್ಯಾ ಸೃಷ್ಟೀಸುತಲಿ
ವ್ಯಾಪ್ತಾನಾಗಿರುವೆ ಜಗದಿ
ಸತ್ಯಾಮೂರುತಿ ಜಗತ್ಕರ್ತಾ ಕಾರಣರೂಪ
ಸತ್ಯಾಧಿಪತಿಯ ವಂದ್ಯ ೧೧

ಆದಿಯಲಿ ಅಸುರ ತಾ ವೇದ ಕದ್ದೊಯ್ಯೆ
ಛೇದೀಸಿ ತಮನ ಕೊಂದೂ
ಮೋದದಲಿ ನಿಗಮ ತಂದಾದರದಿ ಸುತಗಿತ್ತೆ
ಶ್ರೀಧರನೆ ಮಚ್ಛರೂಪಿ ೧೨

ಸುರರೆಲ್ಲ ಕಂಗೆಟ್ಟು ಮೊರೆ ಇಡಲು ನಿನ್ನ ಬಲು
ಕರುಣೆಯಿಂದಾಲಿ ಬಂದೂ
ಗಿರಿ ಎತ್ತಿ ಅಮೃತವ ಸುರರೀಗೆ ತಂದಿತ್ತ
ವರ ಕೂರ್ಮರೂಪಿ ಸಲಹೊ ೧೩

ಆದಿಹಿರಣ್ಯಾಕ್ಷ ಮೇದಿನಿಯ ಕದ್ದೊಯ್ಯೆ
ಛೇದೀಸಿ ಅವನ ಕಾಯಾ
ಆದರಿಸಿ ಧರಣಿಯನು ಆ ದಿವಿಜರಿಗೆ ಇತ್ತೆ
ಆದಿ ವರಾಹ ಕಾಯೊ ೧೪

ದುಷ್ಟಾದಾನವ ಸುತನು ಅಟ್ಟೂಳಿಪಡಿಸುತಿರೆ
ಸೃಷ್ಟೀಶ ಪೊರೆಯೊ ಎನಲು
ಪುಟ್ಟಿ ನೀ ಸ್ಥಂಭದಲಿ ಕುಟ್ಟೀ ಅಸುರನನ್ನು
ಪುಟ್ಟಾನ ಕಾಯ್ದ ನೃಹರಿ ೧೫

ಇಂದ್ರಾಲೋಕಾವನು ಬಲೀಂದ್ರಾನಾಕ್ರಮಿಸಿರಲು
ಪೇಂದ್ರಾ ನೀನಾಗಿ ಬಂದೂ
ಇಂದ್ರಾರಿಗೇಸುತಲ ಚಂದಾದಿತ್ತು ನೀ
ನಿಂದ್ರಾಗೆ ಸ್ವರ್ಗವಿತ್ತೆ ೧೬

ಪಿತನ ಆಜ್ಞೇಗೆ ಪತಿವ್ರತೆ ಮಾತೆ ಶಿರವಳಿದು
ಮತಿವಂತನೆನಿಸಿ ಮೆರೆದೇ
ಖತಿಯಿಂದ ಕ್ಷತ್ರಿಕುಲ ಹತಗೈಸಿ ಮೆರೆದ ಅ
ಪ್ರತಿ ಭಾರ್ಗವಾನೆ ಕಾಯೋ ೧೭

ಸೇತು ಬಂಧನಗೈದು ಖ್ಯಾತ ರಾವಣನೊರಸಿ
ಸೀತೇಯ ತಂದ ರಾಮಾ
ಮಾತೆ ವಚನಕಾಯ್ದೆ ವಾತಾತ್ಮಜನ ಪೊರೆದೆ
ಪ್ರೀತಿಯಿಂದೆನ್ನ ಕಾಯೊ ೧೮

ವನದಲ್ಲಿ ನಿಂತು ಘನಧ್ವನಿಯಿಂದ ಕೊಳಲೂದಿ
ವನಜಾಕ್ಷಿಯರನೆ ಕಾಯ್ದೆ
ಮುನಿವಂದ್ಯ ಶ್ರೀ ಕೃಷ್ಣ ಮುನಿನಾರದಗೊಲಿದೆ
ಸನಕಾದಿ ವಂದ್ಯ ಸಲಹೋ ೧೯

ತ್ರಿಪುರಾಲಲನೆಯಾರ ವ್ರತಭಂಗವನೆಗೈದು
ನಿಪುಣಾನೆಂದೆನಿಸಿ ಮೆರೆದೆ
ಕೃಪಣಾವತ್ಸಲ ಬುದ್ಧ ತ್ರಿಪುರಾರಿ ವಂದ್ಯ ಹರಿ
ಕೃಪೆಮಾಡಿ ಸಲಹೊ ಎನ್ನ ೨೦

ಕಲಿಬಾಧೆ ವೆಗ್ಗಳಿಸೆ ಛಲದಿಂದ ದುಷ್ಟರನು
ತಲೆಯಾ ಚೆಂಡಾಡಿ ಮೆರೆದೆ
ಬಲವಂತ ಹಯವೇರಿ ಕಲಿದೈತ್ಯರನು ಕೊಂದೆ
ನಳಿನಾಕ್ಷ ಕಲ್ಕಿ ಕಾಯೊ ೨೧

ಭಕ್ತಾವತ್ಸಲನಾಗಿ ಮುಕ್ತಾಜೀವರ ಕಾಯ್ವೆ
ಶಕ್ತಾವಂತನೆ ಸ್ವಾಮಿ
ಮುಕ್ತಿದಾಯಕ ನೀನೆ ಮುಕ್ತಾಶ್ರಯನು ನೀನೆ
ಮುಕ್ತಾರಿಗೊಡೆಯ ನೀನೆ ೨೨

ಬಂದೇಯೊ ಭಕ್ತರನು ಚಂದಾದಿಂದಲಿ ಪೊರೆಯ ಬೇ
ಕೆಂದೂ ನೀ ನಾಗಗಿರಿಗೆ
ನಂದಾಕಂದಾನೆ ಹರಿ ಇಂದಿರೆಯರಸ ಬಹು
ಸುಂದಾರ ಶ್ರೀನಿವಾಸ ೨೩

ಹಿಂದೇ ಮಾಡೀದ ಪುಣ್ಯ ಬಂದೂ ತಾ ಒದಗಿಗೋ
ವಿಂದಾನ ಗಿರಿಯ ಯಾತ್ರೇ
ಸಂದೀಸೆ ವೇಂಕಟನ ಸಂದಾರುಶನದಿಂದ
ಬೆಂದೂ ಹೋಗುವುದು ದುರಿತ ೨೪

ಜಯ ಗುರುಗಳಂತರ್ಯ ಜಯ ನಾಗಶಯನ ಹರೆ
ಜಯ ವೆಂಕಟಾದ್ರಿನಿಲಯ
ಜಯ ತಂದೆ ಮುದ್ದುಮೋಹನ ದಾಸವರದ ಜಯ
ಜಯ ಪದ್ಮನಾಭ ಜಯ ಭೋ ೨೫

ಸ್ವಾಮೀ ಕಾಸಾರದತಿ ಪ್ರೇಮಾದಿ ನೆಲಸಿ ಸುರ
ಕಾಮೀತವೀವ ಪ್ರಭುವೇ
ಸ್ವಾಮಿ ಶ್ರೀ ವೇಂಕಟನೆ ನೇಮಾದಿಂದಲಿ ಭಜಿಪೆ
ಕಾಮೀತವೀಯೊ ದೇವಾ ೨೬

ಇಷ್ಟೂ ಬಿನ್ನಪವನ್ನು ಕೃಷ್ಣಾಮೂರುತಿ ಕೇಳಿ
ಕಷ್ಟಾವ ಬಿಡಿಸಿ ಕಾಯೋ
ದಿಟ್ಟಾ ಶ್ರೀ ಗೋಪಾಲಕೃಷ್ಣವಿಠ್ಠಲಾನೆ
ಶ್ರೇಷ್ಠಾ ಶ್ರೀ ಗುರುವರದನೇ ೨೭

## ಸೀತಾಪತಿವಿಠಲ ದಾಸಳ ನಿರ್ಯಾಣ ಪದ

### ೨೬೬

ಪೋದೆಯ ತಾಯಿ ನೀನೀಗ ದಿವ್ಯ
ಮಾಧವನಾ ಪುರ ಸೇರಲು ಬೇಗ ಪ.

ಪುಟ್ಟಿದಾರಭ್ಯದಿ ನಿಷ್ಟೆನೇಮದೊಳಿದ್ದು
ಕಷ್ಟಪರಂಪರೆ ಸಹಿಸುತ ಜಗದಿ
ಹರಿಯ ಕರುಣದಿ ಗುರುಕೃಪೆ ಪಡೆದಿ ೧

ಹಿರಿಯೂರೆನ್ನುವ ಪುರ ವರ ವೇದಾವತಿ ತೀರ
ಪರಮ ಸಾತ್ವಿಕರಲ್ಲಿ ಜನುಮ ತಳೆದಿ
ತುಳಸಿಯ ವರದಿ ಮುದ್ದಿನಿಂ ಬೆಳೆದಿ ೨

ಶಿಷ್ಟ ಸಂಪ್ರದಾಯ ಕಟ್ಟಿನೊಳಗೆ ನಿನ
ಗಷ್ಟಮ ವರುಷದಿ ಮದುವೆಯ ಮಾಡಿ
ಹರುಷವಗೂಡಿ ಹರಿಯ ಕೊಂಡಾಡಿ ೩

ಪತಿ ಕೃಷ್ಣರಾಯರು ಸತಿ ರುಕ್ಮಿಣೀಬಾಯಿ
ಹೆಸರಿನಿಂ ಬಾಳ್ವೆಯ ಬಹು ಅಲ್ಪಕಾಲ
ಕೊಟ್ಟನೆ ಸಿರಿಲೋಲ ಮುಸುಕಿತು ಮಾಯಜಾಲ ೪

ಸಂಸಾರ ಕೈಕೊಂಡು ವಂಶಕೊಬ್ಬನ ಪಡೆದು
ಕಂಸಾರಿ ಕರುಣದಿ ಇರುತಿರೆ ನೀನು
ಪತಿವಿಯೋಗವನು ವಿಧಿ ತಂದೊಡ್ಡಿದನು ೫

ಎರಡು ವರ್ಷದ ಮಗುವ ಕರದಲ್ಲಿ ಕೈಕೊಂಡು
ಪರಿಪರಿ ಕಷ್ಟದಿ ಶಿಶುವ ಬೆಳೆಸಿದೆ
ವಿದ್ಯೆ ಕಲಿಸಿದೆ ಪುತ್ರಗ್ವರಸಿದೆ ೬

ಒಬ್ಬ ಆ ಮಗನರ್ಥಿ ಸಂಸಾರವನೆ ಕಂಡು
ಉಬ್ಬಿ ಹರುಷಾದಲ್ಲಿ ಇರುತಿರೆ ನೀನು
ಮೊಮ್ಮಕ್ಕಳನು ಪಡೆದೆ ನಾಲ್ವರನು ೭

ಪಟುತರ ಪ್ರಾಣೇಶ ಘಟಿಕಾಚಲಾವಾಸ
ಘಟಿಸುತ ಸ್ವಪ್ನದಿ ಸೇವೆಗೈಯ್ಯೆಂದು
ಅಭಯವನಂದು ಕೊಡಲು ದಯಸಿಂಧು ೮

ಮರುದಿನ ಮನೆಯಲ್ಲೆ ಭರದಿ ಸೇವೆಯ ಕೊಂಡು
ಹರಿವಾಯುಗಳನಿಟ್ಟು ಸುತ್ತುವರಿಯುತ್ತ
ಎಡವಿ ಬೀಳುತ್ತ ಪ್ರದಕ್ಷಿಣೆ ಬರುತಾ ೯

ಒಲಿದು ಆ ಭಕ್ತಿಗೆ ವರನೇತ್ರವಿತ್ತನು
ನಳಿನನಾಭನ ಭಕ್ತ ಘಟಿಕಾಚಲನಿಲಯ
ಭಾರತಿಪ್ರೀಯ ದಿವಿಜರ ಒಡೆಯ ೧೦

ಭಕ್ತಿ ವಿರಕ್ತಿ ಜ್ಞಾನವು ಚಿತ್ತದಿ ಮೂಡಿ
ಸೋತ್ತಮರಾದ ಶ್ರೀ ವಿಬುಧರ ದಯದಿ
ಮೋಕ್ಷಸಾಧನದಿ ದಿನಗಳ ಕಳೆದಿ ೧೧

ಶ್ರವಣ ಕೀರ್ತನ ಸ್ಮರಣೆ ಮನನಾದಿಗಳನೆಲ್ಲ
ತವಕದಿ ಕೈಕೊಂಡು ಮೋದದಿ ಮೆರೆದಿ
ಕಷ್ಟವ ಮರೆದಿ ಹರಿಗುರು ದಯದಿ ೧೨

ಪ್ರಥಮ ಯಾಮದಲೆದ್ದು ಜಿತಮನದಿಂದ ಶ್ರೀ
ಪತಿಯ ಸ್ತೋತ್ರಗಳನ್ನು ವದನದಿ ಸತತ
ಪಾಡಿ ಪೊಗಳುತ್ತ ರಾತ್ರಿ ಪರಿಯಂತ ೧೩

ಉಚ್ಚಸ್ವರದಿ ನೀನು ಪಾಡಿದ್ಹಾಡುಗಳಿಂದು
ಅಚ್ಚಳಿಯದೆ ನಮ್ಮ ಸ್ಮರಣೆಯೊಳ್ನಿಂತು
ಹರುಷವನಾಂತು ಮರೆಯುವುದೆಂತು ೧೪

ವೃದ್ಧಾಪ್ಯ ತಲೆದೋರೆ ಇದ್ದೊಬ್ಬ ಪುತ್ರನು
ಪದ್ಮನಾಭನ ಪುರ ಸೇರಿ ನಿನ್ನಗಲಿ
ದುಃಖದಿ ಬಳಲಿ ತೊಳಲಿದೆ ಬಳಲಿ ೧೫

ಪೌತ್ರರಿಬ್ಬರು ನಿನ್ನ ಹೆತ್ತಮ್ಮನಂದದಿ
ಚಿತ್ತದಿ ತಿಳಿದಿನ್ನು ಸಲಹುತ್ತಿರಲು
ಹರಿದಯ ಬರಲು ದುಃಖ ಮರೆಯಲು ೧೬

ಕಲ್ಯಾಣನಗರದಿ ಕಿರಿಯ ಮೊಮ್ಮಗನಿರೆ
ಆಹ್ಲಾದದಿಂದ ನೀನವನಲ್ಲಿ ಇರಲು
ಸದ್ಗುರು ಬರಲು ಜ್ಞಾನವೆರೆಯಲು ೧೭

ಹರಿದಾಸಕೂಟದ ವರ ಅಂಕಿತವ ಕೊಂಡು
ಗುರುಕರುಣವ ಪೊಂದಿ ನೀ ನಮಗೆಲ್ಲ
ಸನ್ಮಾರ್ಗಕ್ಕೆಲ್ಲ ಮೊದಲಾದೆಯಲ್ಲ ೧೮

ಶ್ರೀ ತಂದೆ ಮುದ್ದುಮೋಹನದಾಸರ ದಯದಿ
ಸೀತಾಪತಿವಿಠ್ಠಲನ್ನ ಒಲಿಸಿದೆ
ಧ್ಯಾನದೋಳ್ತಂದೆ ಆನಂದಪಡೆದೆ ೧೯

ಕಂಚಿ ಕಾಳಹಸ್ತಿ ಶ್ರೀ ರಂಗಯಾತ್ರೆಯ
ಸಂಚಿಂತನೇಯಿಂದ ಗೈದೆಯೆ ನೀನು
ಗಳಿಸಿದೆ ಇನ್ನು ಭಕುತಿಯ ಪೊನ್ನು ೨೦

ಉಡುಪಿ ಮಂತ್ರಾಲಯ ಸೇತು ರಾಮೇಶ್ವರ
ಕಡು ಭಕ್ತಿಯಲಿ ತಿರುಪತಿ ಕ್ಷೇತ್ರ ಚರಿಸಿ
ಕಷ್ಟವ ಸಹಿಸಿ ಶ್ರೀ ಹರಿಗೆ ಅರ್ಪಿಸಿ ೨೧

ಕಡುಕೃಪೆಯಿಂದಂದು ಕಣ್ಣನ್ನೆ ಕೊಟ್ಟಂತ
ಮೃಡಪಿತ ಘಟಿಕಾಚಲೇಶನ್ನ ಕೂಡಿ
ಕಣ್ತುಂಬ ನೋಡಿ ತನುವನೀಡಾಡಿ ೨೨

ಅಂತರಂಗದ ಬಿಂಬ ಸರ್ವಾಂತರ್ಯಾಮಿ ಎಂ
ತೆಂಬಂಥ ಚಿಂತನೆ ಸಂತತಗೈದೆ
ಅಭಿಮಾನ ತೊರೆದೆ ದ್ವಂದ್ವ ಸಹಿಸಿದೆ ೨೩

ವ್ರತನೇಮ ಜಪತಪ ಸತತದಿಗೈಯ್ಯುತ್ತ
ಕ್ಷಿತಿವಾರ್ತೆಗೆಳಸಾದೆ ಮನವನ್ನೆ ಸೆಳೆದು
ಹರಿಪಾದಕ್ಕೆರದು ಹಿತವನ್ನೆ ಮರೆದು ೨೪

ಭಾಗವತಾದಿ ಸಚ್ಛಾಸ್ತ್ರ ಶ್ರವಣಗೈದು
ಜಾಗ್ರತಳಾದಿ ಭೂಸುರರ ಸೇವೆಯಲಿ
ಸೂಕ್ಷ್ಮಧರ್ಮದಲಿ ಪುಣ್ಯಗಳಿಸುತಲಿ ೨೫

ಸತತಬಿಂಬಕ್ರಿಯ ವ್ರತವಂದೆ ಕೈಕೊಂಡು
ಜತನದಿ ಮರೆಯದೆ ಪ್ರತಿಕಾರ್ಯದಲ್ಲಿ
ಅರ್ಪಿಸಿ ಹರಿಯಲ್ಲಿ ಇದ್ದೆ ಮೋದದಲಿ ೨೬

ಮುಖ್ಯಪ್ರಾಣನ ದಯ ಮುಖ್ಯಮಾಡುತ ಇನ್ನು
ಅಕ್ಕರೆ ಭಕ್ತಿಯ ತೋರಿದೆ ನೀನು
ಬೆನ್ನು ಬಿಡದವನು ನಿನ್ನ ಸಲಹಿದನು ೨೭

ಭಾರತಿಪತಿ ಮುಖ್ಯಪ್ರಾಣಾಂತರ್ಗತನೆಂಬ
ವಾರುತಿ ಇಲ್ಲದ ವಚನವೆ ಇಲ್ಲಾ
ನಿನ್ನ ಈ ಸೊಲ್ಲ ಮರೆಯಲೊಶವಲ್ಲ ೨೮

ಶ್ರೀ ರಾಮಚಂದ್ರನ ಆರಾಧನೆಯಗೈದು
ಸಾರತತ್ವವ ತಿಳಿದು ಸಾಧಿಸಿ ಪಥವ
ಸಹಸ್ರಾರು ಜಪವ ಗೈದೆ ತಪವ ೨೯

ನೀ ಹಾಡಿದ ಸ್ತೋತ್ರ ನಿನ್ನ ಸನ್ಮಾರ್ಗವ
ನನ್ನೆಯಿಂದಲಿ ಎರೆದೆ ಹೆಣ್ಣು ಮಕ್ಕಳಿಗೆ
ಸ್ಮರಿಸುವರೀಗೆ ಸತ್ಕೀರ್ತಿಯದಾಗೆ ೩೦

ಹರಿ ಗುರು ವರತತ್ವ ದಿವಿಜರಭಿಮಾನಿಗಳ
ನಿರುತದಿ ಚಿಂತಿಸಿ ಸಾಧನಗೈದೆ
ಕಾಲವ ಕಳೆದೆ ಹರಿಪಾದಕ್ಕೆರೆದೆ ೩೧

ಬಿಂಬಾನು ಸಂಧಾನ ಚತುರಳಾಗಿ ನೀನು
ಸಂಭ್ರಮದಿಂದ ಶ್ರೀ ಮಧ್ವಶಾಸ್ತ್ರದಲಿ
ಮನಸ ನೀಡುತಲಿ ಸುಖ ಸುರಿಯಲಿ ೩೨

ಒದ್ದು ತಾಪತ್ರಯ ಸದ್ಗುರು ಕೃಪೆ ಪೊಂದಿ
ಗೆದ್ದೆ ನೀ ಸುಲಭದಿ ಭವದ ಬಂಧನವ ಪಡೆದೆ
ಹರಿ ದಯವ ಕೊಟ್ಟಿತೆ ಮುದವ ೩೩

ಪೇಳಲೋಶವೆ ಹೇ ದಯಾಳು ನಿನ್ನಯ ಗುಣ
ಬಾಳಿದೆ ಧರೆಯೊಳು ತೊಂಬತ್ತೈದೊರುಷ
ವೃದ್ಧಾಪ್ಯದೋಷ ನಿನಗಿಲ್ಲ ಲೇಶ ೩೪

ಇಂದ್ರಿಯಂಗಳು ಎಲ್ಲ ಒಂದು ಕುಗ್ಗದೆ ಒಬ್ಬ
ರಿಂದಲು ಸೇವೆಯ ಕೊಳದೆ ಲವಲವಿಕೆ
ಯಿಂದಿರುವ ಬಯಕೆ ಸಲಿಸೀತೆ ಮನಕೆ ೩೫

ಕಿರಿಯ ಮೊಮ್ಮೊಗ ರಮಾಕಾಂತನಲ್ಲಿರುತಿರೆ
ಕರೆಹೇಳಿ ಕಳುಹಿದ ಹರಿ ತನ್ನ ಪುರಕೆ
ಕ್ಲಿಪ್ತಕಾಲಕ್ಕೆ ಆಗೆ ಮನವರಿಕೆ ೩೬

ತೊರೆದೈದು ದಿನ ಅನ್ನ ಹರಿಧ್ಯಾನಂಗತಳಾಗಿ
ವರ ಗಂಗೆ ವದನದಿ ಪ್ರಾಶನಗೈದು
ಅಭಿಮಾನ ತೊರೆದು ಭ್ರಾಂತಿಯ ಮರೆದು ೩೭

ವರಹಜೆ ತುಂಗ ತೀರದಿ ಪ್ರಾಣನಾಥನ
ಚರಣಮೂಲದಿ ಶಿವಮೊಗ್ಗ ಕ್ಷೇತ್ರದಲಿ
ಹರಿಸ್ಮರಣೆಯಲಿ ಪ್ರಾಣ ಸಲಿಸುತಲಿ ೩೮

ಸ್ವಭಾನುವತ್ಸರ ಭಾದ್ರಪದ ಬಹುಳ
ಇದ್ದ ದಶಮಿ ದಿನ ಗುರುವಾರದಲ್ಲಿ
ಮಧ್ಯರಾತ್ರಿಯಲಿ ತನು ತೊರೆದಿಲ್ಲಿ ೩೯

ಕೇಶವದೂತರು ಮೀಸಲಿಂದಲಿ ನಿನ್ನ
ಘಾಸಿಗೊಳಿಸದೆ ಕರೆದೊಯ್ದರೇನಮ್ಮ
ಪೇಳೆ ಎನ್ನಮ್ಮ ಎಲ್ಲಿ ಪೋದ್ಯಮ್ಮ ೪೦

ಹೆತ್ತಮ್ಮಗಿಂತಲೂ ಹೆಚ್ಚಾಗಿ ನಮ್ಮನ್ನು
ಅರ್ಥಿಯಿಂ ಬೆಳೆಸಿದೆ ಅಭಿಮಾನದಿಂದ
ಅನುರಾಗದಿಂದ ಬಹುಮಾನದಿಂದ ೪೧

ಮೊಮಕ್ಕಳೆಂದರೆ ಬಹು ಪ್ರೀತಿ ನಿನಗಲ್ಲೆ
ಒಮ್ಮೆ ನಾಲ್ವರು ಬಂದು ಇರುವೆವು ನಾವು
ಆಲ್ಪರಿಯುವೆವು ಅಗಲಿ ಸೈರಿಸೆವು ೪೨

ಅರ್ಥಿಲಿ ರಮಾಕಾಂತ ವಿಠಲಾಂಕಿತ ಕೃಷ್ಣ
ಮೂರ್ತಿಯು ಪುತ್ರಗಿಂತಧಿಕದಿ ನಿನ್ನ
ಅಂತ್ಯಕ್ರಿಯವನ್ನ ಮಾಡಿದ ಧನ್ಯ ೪೩

ಶ್ರದ್ಧೆಯಿಂದಗ್ರಜನಿಂದ ಕೂಡುತ ನಿನ್ನ
ಶುದ್ಧಭಾವದಿಗೈದ ಅಂತ್ಯಸೇವೆಯನು
ಸ್ವೀಕರಿಸಿ ನೀನು ಹರಸಿ ಹಿತವನ್ನು ೪೪

ತಿಳಿದು ತಿಳಿಯದೆ ನಾನು ಗೈದಪರಾಧವ
ನಲವಿಂದ ಕ್ಷಮಿಸಿ ನಮ್ಮನು ಮನ್ನಿಸಿದೆ
ಸಹನವ ತಳದೆ ಬಹು ಪ್ರೀತಿಗೈದೆ ೪೫

ಎಲ್ಲ ಪರಿಯಲಿ ನಮ್ಮ ಕ್ಷಮಿಸಿ ಕಾಪಾಡಮ್ಮ
ಬಲ್ಲಿದಳು ನೀನು ಆಶೀರ್ವದಿಸುವುದು
ಸುಖವ ತೋರುವುದು ಕೃಪೆಯ ಮಾಡುವುದು ೪೬

ಅಂಜನೆಕಂದ ನಿನ್ನವನೆಂಬ ಅಭಿಮಾನ
ರಂಜಿಸೆ ಸಹಜದಿ ನಿನ್ನೊಳು ಮಾತೆ
ಜಗದಿ ವಿಖ್ಯಾತೆ ಹರಿಗತಿಪ್ರೀತೆ ೪೭

ಪತಿಗುರು ಪವನ ಹೃದ್ಗತಮೂರ್ತಿ ಚಿಂತನ
ರತಳೆ ನಿನ್ನಯ ಚರಿತೆ ಪೇಳ್ದೆ ತಿಳಿದನಿತು
ತಪ್ಪನು ಮರೆತು ಲಾಲಿಸು ಮಾತು ೪೮

ಗೋಪಾಲಕೃಷ್ಣವಿಠಲನ ಸದ್ಭಕ್ತಳೆ
ಶ್ರೀ ಪಾದಕ್ಕೆರಗಿ ನಾ ಜಯವ ಪಾಡುವೆನು
ಧನ್ಯಳೇ ನೀನು ಮಾನ್ಯಳೆ ನೀನು ೪೯

ಕಳತ್ರ – ಪತ್ನಿ
ಕಾಂತೇಶ – ಕದರು ಮಂಡಲಗಿಯ ಹನುಮಂತ
ಕಾಂತೇಶಪುರ – ಕದರು ಮಂಡಲಗಿ
ಕಾವ – ರಕ್ಷಕ
ಕಾಸಾರ – ಸರೋವರ
ಕುಂಡಲಿ – ಸರ್ಪ
ಕುಟಿಲ ಕುಂತಳ – ಗುಂಗುರು ಕೂದಲು
ಕೂಪ – ಭಾವಿ
ಕೃತ್ತಿವಾಸ – ಜಿಂಕೆಯ ಚರ್ಮ ಹೊದ್ದವನು, ಈಶ್ವರ
ಕೋಲ – ವರಾಹ
ಕೋಲಗಿರಿ – ವರಾಹಗಿರಿ, ತಿರುಮಲೆ
ಕೌತುಕ – ಆಶ್ಚರ್ಯ
ಕ್ಲೇಶ – ಕಷ್ಟ
ಖಗ – ಪಕ್ಷಿ
ಖಗವಾಹನ – ಪಕ್ಷಿವಾಹನನಾದ ಶ್ರೀ ಹರಿ
ಖಧರ – ಬೆಟ್ಟ
ಖದರಜೆ – ನದಿ
ಗಂಡ – ವೀರ
ಗಜ ವೈರಿ – ಸಿಂಹ
ಗತಿ – ಮೋಕ್ಷ, ದಾರಿ
ಗರುವಿಕೆ – ದರ್ಪ
ಗಾತ್ರ – ಶರೀರ
ಗಾರು – ನಿಂದೆ
ಗಾರು ಮಾಡು – ನಿಂದೆ ಮಾಡು, ಅಸಡ್ಡೆ ಮಾಡು
ಗುಪಿತ ಮಾರ್ಗ – ಗುಪ್ತ ಮಾರ್ಗ
ಗೋಜ – ಸಂಬಂಧ
ಚತುರ ಕುಲ – ಶೂದ್ರ, ಯಾದವ
ಚತುರ ಕುಲಜ – ಶ್ರೀ ಕೃಷ್ಣ
ಚಿಣ್ಣತನ – ಬಾಲ್ಯ
ಜಗದುದರ – ಶ್ರೀ ಹರಿ
ಜಗದುದರ ಸೊಸೆ – ಭಾರತೀ ದೇವಿ, ಸರಸ್ವತಿ
ಜತನ – ಜಾಗರೂಕತೆ
ಜಾಣು – ಆಲಸ್ಯ
ಜಿತಮುನಿಗಳು – ಮನಸ್ಸಿನ ಆಸೆಗಳನ್ನು ಗೆದ್ದವರು
ಜಿಷ್ಣು – ಅರ್ಜುನ
ಜಿಷ್ಣು ಸಖ – ಶ್ರೀ ಕೃಷ್ಣ
ಜೀವೋತ್ತಮ – ವಾಯುದೇವರು
ತರಣಿ – ಸೂರ್ಯ
ತರಣಿಜ – ಸುಗ್ರೀವ
ತಾಚಿ – ನಿದ್ರೆ ಮಾಡು
ತಾರೇಶ – ಚಂದ್ರ
ತುರಂಗ – ಕುದರೆ
ತುರಂಗ ರೂಪ – ಹಯವದನ ರೂಪಿ ಶ್ರೀ ಹರಿ
ತುಷ್ಟ – ಸಂತೋಷ
ತುಳು ವಂಶಜ – ಮಧ್ವಾಚಾರ್ಯ
ತ್ರಾಣ – ಬಲ, ಶಕ್ತಿ
ತ್ರಿಕರ್ಮ – ಕರ್ಮತ್ರಯ (ಕಾಯಾ, ವಾಚಾ, ಮನಸಾ)

ತ್ರಿದಶರು – ದೇವತೆಗಳು
ತ್ರಿವಿಧ ಪಾಪ – ಪಾತಕ, ಉಪಪಾತಕ, ಮಹಾಪಾತಕ
ದನುಜ – ರಾಕ್ಷಸ
ದನುಜದಲ್ಲಣ – ರಾಕ್ಷಸ ಧ್ವಂಸಿ
ದಳ – ಸೈನ್ಯ
ದಾತ – ರಕ್ಷಕ
ದ್ವಿಜ – ಪಕ್ಷಿ, ಗರುಡ
ದ್ವಿಜಧ್ವಜ – ಗರುಡ ಧ್ವಜನಾದ ಶ್ರೀ ಹರಿ
ದ್ವಿತೀಯ ಕುಲ – ಕ್ಷತ್ರಿಯ
ದ್ವಿದಳ – ಎರಡು ಸೈನ್ಯಗಳು
ಧಾಮತ್ರಯ – ಶ್ವೇತ ದ್ವೀಪ, ಅನಂತಾಸನ, ವೈಕುಂಠ
ನಂದ ಕಂದ – ಶ್ರೀ ಕೃಷ್ಣ
ನಗ – ಪರ್ವತ
ನಗಧರ – ಶ್ರೀ ಹರಿ
ನರಮೃಗ – ನರಸಿಂಹ
ನಳಿನ ಭವ – ಬ್ರಹ್ಮ
ನಳಿನ ಜಾಂಡ – ಬ್ರಹ್ಮಾಂಡ
ನಾಕ – ಸ್ವರ್ಗ
ನಾಕಜನ – ದೇವತೆಗಳು
ನಾರೀ ಚೋರ – ರಾವಣ
ನಾರಿಚೋರ ಪುರ – ಲಂಕೆ
ನಿಗಮ – ವೇದ
ನೀಲಗಳ – ನೀಲಕಂಠ
ಪಂಚತ್ವ ಐದಿಸು – ಕೊಲ್ಲು
ಪದ್ಮಭವ – ಬ್ರಹ್ಮ
ಪದ್ಮ ಸಂಭವ – ಬ್ರಹ್ಮ
ಪದ್ಮ ಸಂಭವ ಪಿತ ಶ್ರೀ ಹರಿ
ಪನ್ನಗ – ಸರ್ಪ
ಪಯೋಜ – ಕಮಲ
ಪಯೋಜಜ – ಬ್ರಹ್ಮ
ಪಯೋಜಜಾಂಡ – ಬ್ರಹ್ಮಾಂಡ
ಪರೋಪರಿ – ಪದೇ ಪದೇ
ಪರ್ಯಂಕ – ಹಾಸಿಗೆ
ಪಶ್ಚಿಮಾಂಬುಧಿ – ಪಡುವಣ ಕಡಲು
ಪಶ್ಚಿಮಾಂಬುಧಿ ತಡಿ – ಉಡುಪಿ
ಪಶ್ಚಿಮಾಂಬುಧಿ ತಡಿದಾಸ – ಉಡುಪಿಯ ಶ್ರೀ ಕೃಷ್ಣ
ಪಾಕ ಶಾಸನ – ದೇವೇಂದ್ರ
ಪಾವಕ – ಅಗ್ನಿ
ಪಾವಮಾನಿ – ಹನುಮ, ಬೀಮ, ಮಧ್ವ
ಪುಂಡರೀಕ – ಕಮಲ
ಪ್ರಣವ – ಓಂಕಾರ
ಪ್ರಣವ ವರ್ಣ – ಓಂಕಾರ ವಾಚ್ಯನಾದ ಶ್ರೀ ಹರಿ
ಪ್ರಥಮ ಕುಲ – ಬ್ರಾಹ್ಮಣ
ಬಿನುಗು ದೇವರು – ಅಲ್ಪ ಫಲ ಕೊಡುವ ಕ್ಷುದ್ರ ದೇವತೆ
ಬೂಚಿ – ಗುಮ್ಮ
ಭಾರ – ಲಕ್ಷ್ಮೀ ದೇವಿ
ಭಾರಕರ್ತ – ಲಕ್ಷ್ಮಿಯ ಒಡೆಯನಾದ ಶ್ರೀ ಹರಿ

ಭಾವಜ – ಮನಥ
ಭಾವಜನಯ್ಯ – ಶ್ರೀ ಹರಿ
ಭೇದಮತಿ – ಪಂಚ ಭೇದಗಳ ಜ್ಞಾನವುಳ್ಳವನು
ಭೋಗ – ಸರ್ಪ
ಭೋಗರೂಪ – ಸರ್ಪರೂಪಿ
ಮಾ – ಲಕ್ಷ್ಮೀದೇವಿ
ಮಾಮನೋಹರ – ಶ್ರೀ ಹರಿ
ಮುಕ್ತರು – ಪುನರ್ಜನ್ಮ ವಿಲ್ಲದವರು
ಮುಕ್ತಾರಾಶ್ರಯ – ಶ್ರೀ ಹರಿ
ಮುಕ್ತರಾಶ್ರಯ ಪುರ– ವೈಕುಂಠ
ಮೂರಾರು ಎರಡೊಂದು – (೩x೬)+೨+೧=೨೧
ಮೂರುದಶ ಏಳು – ೩x೧೦+೭=೩೭
ಮೂರು ಮೂರ್ತಿ – ರಾಮ, ಕೃಷ್ಣ, ವೇದ ವ್ಯಾಸ
ಮೂರುಯುಗ – ತ್ರೇತ, ದ್ವಾಪರ,ಕಲಿ
ಮೋದತೀರ್ಥ – ಮಧ್ವಾಚಾರ್ಯ
ಯಜ್ಞವಾಟ – ಯಾಗ ಮಂಟಪ
ರವಿ – ಸೂರ್ಯ
ರವಿಜ – ಸೂರ್ಯ ಪುತ್ರರಾದ ಸುಗ್ರೀವ, ಕರ್ಣ ಶನಿ
ರಾಕು – ಗರ್ವ
ರುಜು – ವಿಧೇಯತ
ರುಜುಗಣ – ಹರಿಗೆ ವಿಧೇಯರಾದ ದೇವತೆಗಳು
ವಾಗೀಶ – ಬ್ರಹ್ಮ
ವಾಗೀಶ ಪದ – ಬ್ರಹ್ಮ ಪದವಿ
ವಾಟ – ಮಂಟಪ
ವಾತ – ವಾಯು
ವಾತ ತನಯ – ವಾಯು ಪುತ್ರ
ವಾತ ಸಖ – ಅಗ್ನಿ
ವಾಲಖಿಲ್ಯರು – ವಾನಪ್ರಸ್ಥರಾದ ಋಷಿಗಳು
ವಾಸನ – ಇಂದ್ರ
ವಾಸನಜ – ಅರ್ಜುನ
ವಾಸಿ – ಕ್ಷೇಮ
ವಿಗಡ – ದುಷ್ಟ
ವಿಜಯ – ಅರ್ಜುನ
ವಿಜಯ ಭಾವ – ಶ್ರೀ ಕೃಷ್ಣ
ವಿಧಿ – ಬ್ರಹ್ಮ
ವಿಧಿಕಂದ – ಶಿವ
ವಿಹಂಗ – ಪಕ್ಷಿ
ವಿಹಂಗ ಗಮನ – ಗರುಡ ಗಮನಾದ ಶ್ರೀ ಹರಿ
ವೀತಿ ಹೋತ್ರ – ಅಗ್ನಿ
ವೃಂದಾರಕ – ದೇವತೆಗಳು
ವೃಷ್ಣಿ – ಯದುವಂಶದ ಮೂಲ ಪುರುಷ
ವೃಷ್ಣಿಗಳು – ಯಾದವರು
ವೃಷ್ಣೀಶ – ಯಾದವರೊಡೆಯನಾದ ಶ್ರೀಕೃಷ್ಣ
ವ್ಯಾಜೆ – ನೆಪ
ವ್ಯಾಳ – ಸರ್ಪ

| | | |
|---|---|---|
| ಶಂಬರಾರಿ | – | ಪ್ರದ್ಯುಮ್ನ |
| ಶಂಬರಾರಿ ಪಿತ | – | ಶ್ರೀ ಹರಿ |
| ಶೀತಾಂಶು | – | ಚಂದ್ರ |
| ಶ್ರೀ ವಕ್ಷ | – | ಶ್ರೀ ಹರಿ |
| ಶ್ರೀ ವಕ್ಷ ಸುತ | – | ಬ್ರಹ್ಮ |
| ಸತ್ಯವತಿಸೂನು | – | ವೇದ ವ್ಯಾಸ |
| ಸತ್ಯಾಪ್ರಿಯ | – | ಸತ್ಯಭಾಮೆಯ ಪ್ರಿಯನಾದ ಶ್ರೀಕೃಷ್ಣ |
| ಸಪ್ತ ಸಪ್ತ ಭುವನ | – | ಹದಿನಾಲ್ಕು ಲೋಕ |
| ಸರಸಿಜ | – | ತಾವರೆ |
| ಸರಸಿಜ ಕಂಗೆಡುವ ಕಾಲ | – | ಸಾಯಂಕಾಲ |
| ಸರಸಿಜೋದ್ಭವ | – | ಬ್ರಹ್ಮ |
| ಸರಸಿಜೋದ್ಭವ ಸತಿ | – | ಸರಸ್ವತಿ |
| ಸರಸಿಜೋದ್ಭವ ಸೂತ್ರ | – | ಬ್ರಹ್ಮಸೂತ್ರ, ಜನಿವಾರ |
| ಸರಿತು | – | ನದಿ |
| ಸುಖತೀರ್ಥ | – | ಮೋದತೀರ್ಥ |
| ಸುತ್ರಾಣ | – | ಶ್ರೇಷ್ಠಬಲವನ್ನು ಹೊಂದಿರುವನು |
| ಸುರ ಋಷಿ | – | ನಾರದ |
| ಸುರ ನದಿ | – | ಗಂಗಾನದಿ |
| ಸ್ವರ್ಣ ಗರ್ಭ | – | ಬ್ರಹ್ಮ |
| ಸ್ವಾಪರೋಕ್ಷಿ | – | ಭಗವಂತನನ್ನು ಅಂತರಂಗದಲ್ಲಿ ಕಾಣಬಲ್ಲ ಯೋಗಿ |
| ಹರನ ಹೆಸರಿನ ಪುರ | – | ಶಿವಮೊಗ್ಗ |
| ಹರಿಗಿರಿ | – | ಬದರಿಕ್ಷೇತ್ರ |
| ಹರಿ ಪರ್ಯಂಕ | – | ಶ್ರೇಷ್ಠ ದೇವರು |
| ಹರಿಶಯ | – | ಶೇಷ ದೇವರು |
| ಹಾಟಕ | – | ಚಿನ್ನ |
| ಹಾಟಕಾಂಬರ | – | ಕನಕಾಂಬರ |
| ಹಾಟಕೋದರ | – | ಹಿರಣ್ಯಗರ್ಭ, ಬ್ರಹ್ಮ |
| ಹೃದ್ವನಜ | – | ಹೃದಯ ಕಮಲ |

# ಅನುಬಂಧ–೨

## ಟಿಪ್ಪಣಿಗಳು

### ಕೀ. ೩

**ಆನಂದ ನಿಲಯರು** – ಆನಂದ ನಿಲಯ ಎಂಬ ಹೆಸರಿನ ಮನೆಯಲಿ ವಾಸ ಮಾಡುತ್ತಿದ್ದ ತಂದೆ ಮುದ್ದುಮೋಹನದಾಸರು

### ಕೀ. ೫

**(ಪಲ್ಲವಿ) ಪವಮಾನ ಪಿತ** : ವಾಯುದೇವರ ತಂದೆಯಾದ ಶ್ರೀಹರಿ. 'ಪ್ರಾಣಾದ್ವಾಯು ರಜಾಯತ' ಎಂಬ ಪುರುಷ ಸೂಕ್ತದ ಮಾತಿನಂತೆ ಶ್ರೀ ಹರಿಯ ಉಸಿರಿನಿಂದ ಜನಿಸಿದ ಕಾರಣ ವಾಯು ಹರಿಯ ಪುತ್ರ ಎನಿಸಿಕೊಂಡ.

### ಕೀ. ೮

**(ನು. ೪)** ಇದರಲ್ಲಿ ದಶಾವತಾರದ ಉಲ್ಲೇಖ ಇದೆ.

| | | |
|---|---|---|
| ಸುತಗೆ ವೇದವನಿತ್ತೆ | – | ಮತ್ಸ್ಯಾವತಾರ |
| ಅಮೃತ ಸುರರಿಗಿತ್ತೆ | – | ಮೋಹಿನಿ ಅವತಾರ |
| ಕ್ಷಿತಿಯ ಬಾದೆಯ ಬಿಡಿಸಿ | – | ವರಹವತಾರ |
| ಸುತನ ಬಾಧಿಸುವವನ ಹತ ಮಾಡಿ | – | ನರಸಿಂಹವತಾರ |
| ಇಂದ್ರಗೆ ಗತಿಸಿದ ಪದವಿತ್ತೆ | – | ವಾಮನಾವತಾರ |
| ಕ್ಷಿತಿಯನಾಳ್ವರ ಹತಗೈಸಿದೆ | – | ಪರಶುರಾಮ |
| ಕ್ಷಿತಿಸುತೆಯ ತಂದೆ | – | ಶ್ರೀ ರಾಮ |
| ಪಾಂಡವ ಸುತರ ಕಾಯ್ದೆ | – | ಶ್ರೀ ಕೃಷ್ಣ |
| ವ್ರತವ ಕೆಡಿಸಿ | – | ಬುದ್ಧ |
| ಹತವ ಗೈದೆ | – | ಕಲ್ಕಿ |

## ಕೀ. ೯

**(ನು. ೪) ಕಾರ್ಯಕಾರಣ ಕರ್ತ**

**ಕಾರ್ಯ** : ದೇಹ ಮತ್ತು ಮನಸ್ಸುಗಳಲ್ಲಿ ನೆಲಸಿ ಕ್ರಿಯಾಶೀಲತೆ ಉಂಟುಮಾಡುವ ಶ್ರೀ ಹರಿ

**ಕಾರಣ** : ಸಕಲ ಇಂದ್ರಿಯಗಳ ಕಾರ್ಯಗಳನ್ನು ಮಾಡಿಸುವ ಶ್ರೀ ಹರಿ

**ಕರ್ತ** : ಸೃಷ್ಟಿ ಸ್ಥಿತಿ ಮೊದಲಾದ ಅಷ್ಟ ಕಾರ್ಯಗಳನ್ನು ಮಾಡುವ ಶ್ರೀ ಹರಿ

**ಪ್ರೇರ್ಯ ಪ್ರೇರಕ ರೂಪ** : ದೇಹ, ಇಂದ್ರಿಯ ಮತ್ತು ಮನಸ್ಸಿನ ಕಾರ್ಯಗಳಿಗೆ ಪ್ರೇರಣೆ ನೀಡುವವನು.

## ಕೀ. ೧೨

**ಮುಕ್ತೇಶ** : ಸಾರೂಪ್ಯ, ಸಾಯುಜ್ಯ, ಸಾಲೋಕ್ಯ, ಸಾಮೀಪ್ಯ – ಈ ನಾಲ್ಕು ರೀತಿಯ ಮುಕ್ತರಿಗೂ ಒಡೆಯನಾದ ಶ್ರೀಹರಿ.

**ಮುಕ್ತಾರ್ಥದಾಯಕ** : ಶ್ರೀ ಹರಿಗೆ ಯಾವುದೇ ರೀತಿಯ ಜಗತ್ ಜನ್ಮಾದಿ ಬಂಧನಗಳು ಇಲ್ಲದಿರುವುದರಿಂದ ಅವನು ಮುಕ್ತ. ಅರ್ಥ ಎಂದರೆ ಶಬ್ದಗಳಿಂದ ತಿಳಿಯಲ್ಪಡುವ ಜ್ಞಾನ ಮುಕ್ತನೂ ಜ್ಞಾನಪ್ರದನೂ ಆದ ಶ್ರೀಹರಿ ಮುಕ್ತಾರ್ಥದಾಯಕ.

## ಕೀ. ೨೧

**ಎಂಟಕ್ಷರನುತ** : ಓಂನಮೋ ನಾರಾಯಣಾಯ' ಎಂಬ ಎಂಟು ಅಕ್ಷರಗಳಿಂದ ಸ್ತುತ್ಯನಾದ ಶ್ರೀಹರಿ.

**ಎಂಟುರೂಪಾತ್ಮಕ** : ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ನಾರಾಯಣ, ವರಾಹ, ವಾಮನ ಮತ್ತು ನೃಸಿಂಹ – ಈ ಅಷ್ಟರೂಪಗಳು.

**ಎಂಟು ಮೂರು ತತ್ವ** : ಚತರ್ವಿಂಶತಿ ತತ್ವಗಳು.

**ಪಂಚ ಕರ್ಮೇಂದ್ರಿಯಗಳು** : ವಾಕ್, ಪಾಣಿ, ಪಾದ, ಪಾಯು, ಉಪಸ್ಥ.

**ಪಂಚ ಜ್ಞಾನೇಂದ್ರಿಯಗಳು** : ಶ್ರೋತ್ರ, ಚಕ್ಷು, ತ್ವಕ್, ಜಿಹ್ವಾ, ಘ್ರಾಣ.

**ಪಂಚ ಭೂತಗಳು** : ಆಕಾಶ, ವಾಯು, ತೇಜ, ಜಲ, ಪೃಥ್ವಿ.

**ಪಂಚತನ್ಮಾತ್ರ** : ಶಬ್ದ, ಸ್ಪರ್ಶ, ರಸ, ಗಂಧ, ರೂಪ.

– ಒಟ್ಟು ಇಪ್ಪತ್ತು. ಇದರ ಜೊತೆಗೆ ಅವ್ಯಕ್ತ ತತ್ವ, ಅಹಂಕಾರ ತತ್ವ, ಮಹತತ್ವ ಮತ್ತು ಮನಸ್ತತತ್ವ. ಇವೆಲ್ಲ ಒಂದುಗೂಡಿದರೆ ಇದು ಪರತತ್ವ ಅಥವಾ ಪಂಚವಿಂಶತಿ ತತ್ವ.

**ಅಷ್ಟ ಪ್ರಕೃತಿ** : ಭೂಮಿ, ಅಪ್ಪು, ತೇಜ, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಂಕಾರ.

**ಅಷ್ಟದಿಕ್ಪತಿಗಳು** :

| | |
|---|---|
| ಉತ್ತರ = ಕುಬೇರ | ಈಶಾನ್ಯ = ಮಹೇಶ |
| ದಕ್ಷಿಣ = ಯಮ | ನೈರುತ್ಯ = ನಿಋುರತಿ |
| ಪೂರ್ವ = ಇಂದ್ರ | ಆಗ್ನೇಯ = ಅಗ್ನಿ |
| ಪಶ್ಚಿಮ = ವರುಣ | ವಾಯುವ್ಯ = ಪ್ರವಾಹ ವಾಯು |

**ಅಷ್ಟವಿಧ ಕರ್ತೃತ್ವ** : ಸೃಷ್ಟಿ, ಸ್ಥಿತಿ, ಲಯ, ಜ್ಞಾನ, ಅಜ್ಞಾನ, ನಿಯಮನ, ಬಂಧ, ಮೋಕ್ಷ. – ಶ್ರೀ ಹರಿಯ ಅಷ್ಟಕಾರ್ಯಗಳು.

**ಅಷ್ಟಭಾಗ್ಯ** : (ಎಂಟು ಭಾಗ್ಯಗಳು) : ಹಸ್ತಿ, ಅಶ್ವ, ಛತ್ರ, ಚಾಮರ ಆಂದೋಲ, ಸೈನ್ಯ, ಕೋಶ, ರಾಜ್ಯ

**ಅಷ್ಟಪತ್ನಿಯರು** : (ಶ್ರೀ ಕೃಷ್ಣನ ಎಂಟು ಪತ್ನಿಯರು) : ರುಕ್ಮಿಣಿ, ಸತ್ಯಭಾಮೆ, ಮಿತ್ರವಿಂದೆ, ಕಾಳಿಂದಿ, ಲಕ್ಷಣೆ, ಸತ್ಯಾ, ಭದ್ರಾ, ಜಾಂಬವತಿ

**ಎಂಟೆರಡು ಕಲೆಗಳು** : (ಷೋಡಷ ಕಲೆಗಳು) ಕಣ್ಣು, ಕಿವಿ, ಮೂಗು, ಚರ್ಮ, ನಾಲಗೆ ಮುಖ, ಕೈ, ಕಾಲು, ಆಸನ, ಉಪಸ್ಥ, ಚಿತ್ತ, ಮನ, ಅಹಂಕಾರ, ವಿದ್ಯಾ, ವಾಕ್, ಶಕ್ತಿ – ಇವುಗಳ ಕಾರ್ಯಗಳು

**ಎಂಟು ವಿಧ ಮದ (ಅಷ್ಟ ಮದಗಳು)**

ಅ) ಅನ್ನ ಮದ , ಅರ್ಥಮದ, ಪ್ರಾಯಮದ, ರೂಪಮದ, ತಮ ಸತ್ವ ಮದ, ಧಾತ್ರಿವಶತ್ವ ಮದ, ವೈಭವ ಮದ, ಎದುರಾಳಿ ಇಲ್ಲವೆಂಬ ಮದ,

ಆ) ಕುಲ, ಶೀಲ, ರೂಪ, ಯೌವನ, ಧನ, ವಿದ್ಯೆ, ರಾಜ್ಯ, ವೃದ್ಧಿ– ಇವುಗಳಿಂದ ಉಂಟಾಗುವ ಮದಗಳು.

**ಎಂಟೆರಡು ಒಂದು ಇಂದ್ರಿಯ (ಏಕಾದಶೇಂದ್ರಿಯ)** ಕಿವಿ, ಕಣ್ಣು, ಮೂಗು, ಚರ್ಮ,ರಸನ, ಮುಖ, ಕೈ, ಕಾಲು, ಗುದ, ಉಪಸ್ಥ ಮತ್ತು ಮನಸ್ಸು

### ಕೀ. ೨೪

**(ನು. ೨) ಚಂದ್ರ ಮಂಡಲ ಮಧ್ಯವರ್ತಿ :** ಸೂರ್ಯಮಂಡಲ, ಚಂದ್ರ ಮಂಡಲ, ಅಗ್ನಿ ಮಂಡಲ ಇವುಗಳನ್ನು ಗೋಳಕತ್ರಯ ಎನ್ನುತ್ತಾರೆ. ಪೂಜಾ ಪ್ರತಿಮೆಗಳಲ್ಲಿ ಭಗವಂತನನ್ನು ಆವಾಹನೆ ಮಾಡುವಾಗ ಅವನು ಈ ಗೋಲಕತ್ರಯಗಳಲ್ಲಿ ಇದ್ದಾನೆಂದು ಪರಿಭಾವಿಸಿ ಆವಾಹನೆ ಮಾಡುತ್ತಾರೆ. ಹಗಲಿನಲ್ಲಿ ಸೂರ್ಯಾಂತರ್ಗತ ನಾರಾಯಣ, ಶುಕ್ಲ ಪಕ್ಷದ ರಾತ್ರಿಯಲ್ಲಿ ಚಂದ್ರಾಂತರ್ಗತ ನಾರಾಯಣ, ಕೃಷ್ಣಪಕ್ಷದ ರಾತ್ರಿಯಲ್ಲಿ ಅಗ್ನಿ ಅಂತರ್ಗತ ನಾರಾಯಣ ಎಂದು ಶ್ರೀ ಹರಿಯ ಸಾನ್ನಿಧ್ಯವನ್ನು ದೇವತಾ ವಿಗ್ರಹಗಳಲ್ಲಿ ಪರಿಭಾವಿಸುತ್ತಾರೆ.

### ಕೀ. ೨೬

**(ನು. ೨) ಹೋಮಕುಂಡದಿ ಹುಟ್ಟಿದಾಸತಿ :** ದ್ರುಪದನ ಯಜ್ಞ ಸಂಭವೆಯಾದ ದ್ರೌಪದಿ.

**ನು. ೨. ಸರ್ವಜ್ಞರಾಯರ ಹಾದಿ :** ಪೂರ್ಣಪ್ರಜ್ಞರಾದ ಮಧ್ವಾಚಾರ್ಯರು ಅನುಸರಿದ ವಿಷ್ಣು ಭಕ್ತಿ ಮಾರ್ಗ

**ನು. ೪. ಕಡಲಸುತೆ ಪತಿ :** ಸಮುದ್ರರಾಜನ ಮಗಳಾದ ಲಕ್ಷ್ಮಿಯ ಪತಿ.

**ಕಡಲಸತಿ ಪಿತ :** ಸಮುದ್ರವನ್ನು ಸೇರುವ ಗಂಗಾನದಿಯ ಜನಕನಾದ ಶ್ರೀ ಹರಿ.

**ಕಡಲವಾಸ :** ಕ್ಷೀರ ಸಮುದ್ರವಾಸಿಯಾದ ಶ್ರೀ ಹರಿ.

**ಕಡಲ ಬಂಧನ :** ಸಮುದ್ರಕ್ಕೆ ಸೇತು ಬಂಧ ಮಾಡಿದ ಶ್ರೀ ರಾಮ.

**ಕಡಲ ಮಧ್ಯದಿ ಪುರವ ರಚಿಸಿದೆ :** ಸಮುದ್ರ ಮಧ್ಯದಲ್ಲಿ ದ್ವಾರಕೆ ರಚಿಸಿದ ಶ್ರೀಕೃಷ್ಣ.

**(ನು. ೫) ಅಷ್ಟಯತಿನುತ ಪಾದ :** ಉಡುಪಿಯ ಅಷ್ಟಮಠದ ಯತಿಗಳಿಂದ ಪೂಜಿತನಾದ ಶ್ರೀ ಕೃಷ್ಣ.

### ಕೀ. ೩೧

**ಮನದ ಅಭಿಮಾನಿಗಂತರ್ಯಾಮಿ ಸ್ವಾಮಿ** : ಮನೋಭಿಮಾನಿಯಾದ ರುದ್ರದೇವರ ಅಂತರ್ಗತನಾದ ಶ್ರೀ ಹರಿ.

**ಕೀ. ೩೩. ನು.೨. ಎಂಟು ಜನ ದುಷ್ಟರು.** ಅಷ್ಟಮದಗಳು **ಆರುಜನ ಕಳ್ಳರು**=ಅರಿಷಡ್ವರ್ಗಗಳು ಎಂಟುದಳದಲಿಪ ನೆಂಟರು. ಪಂಚ ಭೂತಗಳು, ಮನಸ್ಸು, ಬುದ್ಧಿ, ಅಹಂಕಾರ, ಈ ಅಷ್ಟ ಪ್ರಕೃತಿಗಳು.

**ಎಂಟೆರೆಡು ಇಂದ್ರಿಯಗಳು.** ದಶೇಂದ್ರಿಯಗಳು.

**(ನು. ೩) ಮೂರುತಾಪ** : ತಾಪತ್ರಯಗಳು : ಆದಿಭೌತಿಕ, ಆದಿದೈವಿಕ, ಆಧ್ಯಾತ್ಮಿಕ.

**ಮೂರುಗುಣ** : ಗುಣತ್ರಯಗಳು– ಸತ್ವ, ರಜ, ತಮ,

**ಮೂರುಮಾರ್ಗ** : ತ್ರಿಗತಿ– ಅರ್ಥಗತಿ, ಕರ್ಮಗತಿ, ದೈವಗತಿ.

**ಮೂರು ಅವಸ್ಥೆಗಳು** –

ಅ) ಜಾಗೃತ್, ಸ್ವಪ್ನ, ಸುಷುಪ್ತಿ,

ಆ) ಜೀವ, ಪರಮ, ಅಂತರಾತ್ಮ,

ಇ) ಕ್ಷರ, ಅಕ್ಷರ, ಪರಮ

**(ನು. ೫) ಮನು ಶಬ್ದ ವಾಚ್ಯ** : ಎಲ್ಲ ಯಜ್ಞಗಳಲ್ಲಿಯೂ ಮಂತ್ರ ಪ್ರತಿಪಾದ್ಯನಾಗಿ, ಮನನಕ್ಕೆ ಯೋಗ್ಯನಾದ್ದರಿಂದ ಶ್ರೀ ಹರಿ ಮನುಶಬ್ದವಾಚ್ಯ ಎನಿಸಿಕೊಳ್ಳುತ್ತಾನೆ. ಕ್ರುತಯುಗದ ಅನಂತರ ಬ್ರಹ್ಮ ಜ್ಞಾನಿಗಳಾದ ಬ್ರಹ್ಮ, ರುದ್ರಾದ್ಯರು ಮನುಗಳು ಎನಿಸಿಕೊಂಡರು.

### ಕೀ. ೪೦

**(ನು.೨) ವಿಶ್ವತೈಜಸ ಪ್ರಾಜ್ಞ** ಜಾಗೃತ್,ಸ್ವಪ್ನ, ಸುಷುಪ್ತಿ– ಈ ಮೂರು ಅವಸ್ಥೆಗಳಲ್ಲಿ ವಿಶ್ವ, ತೈಜಸ, ಪಾಜ್ಞನಾಮಕ ಪರಮಾತ್ಮ ಶರೀರದಲ್ಲಿ ನೆಲೆಸಿದ್ದು ಚೈತನ್ಯವನ್ನು ಪ್ರೇರಿಸುತ್ತಾನೆ. ವಿಶ್ವನಾಯಕ ಪರಮಾತ್ಮ ಕಣ್ಣಿನಲ್ಲಿ ಸ್ಥಿತನಾಗಿ , ಜಾಗ್ರದಾವಸ್ಥೆಗೆ ಪ್ರೇರಕನಾಗುತ್ತಾನೆ. ಜಾಗ್ರದಾವಸ್ಥೆಯ ಅನುಭವವನ್ನೂ ಪಡೆಯುತ್ತಾನೆ. ಪಾಜ್ಞನಾಮಕ ಪರಮಾತ್ಮ ಹೃದಯದಲ್ಲಿದ್ದು ನಿದ್ರೆಗೆ ಪ್ರೇರಿಸುತ್ತಾನೆ. ಸಪ್ನಗಳಿಲ್ಲದ ಅತ್ಯಂತ ಗಹನವಾದ ನಿದ್ರಾವಸ್ಥೆಯೇ ಪ್ರಜ್ಞಾವಸ್ಥೆ.

ತೈಜಸನಾಮಕ ಪರಮಾತ್ಮ ಕಂಠದಲ್ಲಿದ್ದು ಎಚ್ಚರವೂ ಅಲ್ಲದ ನಿದ್ರೆಯೂ ಅಲ್ಲದ

ಸ್ವಪ್ನಾವಸ್ಥೆಗೆ ಪ್ರೇರಕನಾಗುತ್ತಾನೆ.

**(ನು. ೩) ತತ್ವಾದಿಪತಿಗಳೊಳು ವ್ಯಾಪ್ತನಾಗಿರುತ :** ಮನೋವೃತ್ತಿಗಳನ್ನು ಪ್ರೇರಿಸುವವರು, ಜೀವಿಗಳನ್ನು ಉದ್ಧಾರ ಮಾಡಿ ಜ್ಞಾನ ಮಾರ್ಗಗಳಲ್ಲಿ ನಡೆಯುವಂತೆ ಮಾಡುವವರು ತತ್ವಾಭಿಮಾನಿ ದೇವತೆಗಳು. ಅನಿರುದ್ಧ, ಪ್ರದ್ಯುಮ್ನ, ವಾಸುದೇವ, ಮತ್ತು ಸಂಕರ್ಷಣ ಇವರುಗಳು ಕ್ರಮವಾಗಿ ಅಹಂಕಾರ, ಬುದ್ಧಿ, ಚಿತ್ತ ಮತ್ತು ಮನಸ್ಸುಗಳಲ್ಲಿ ನೆಲೆಸಿ ಜೀವಿಗಳಿಗೆ ಸತ್ಕಾರ್ಯಗಳನ್ನು ಮಾಡಲು ಪ್ರೇರಣೆ ನೀಡುತ್ತಾರೆ.

ವಿದ್ಯೆ ಮತ್ತು ವೃತ್ತಿಯಲ್ಲಿ ಅಹಂ ಮಮತಾದಿಗಳನ್ನು ದೂರಮಾಡಿ ಸದ್ವಿದ್ಯಾ ಪ್ರೇರಕನಾದವನು ಅನಿರುದ್ಧ, ಮುಕ್ತಿಯೋಗ್ಯರ ಬುದ್ಧಿಯಲ್ಲಿ ನೆಲಸಿ ಜ್ಞಾನ ವಿಷಯಗಳಲ್ಲಿ ನಿಶ್ಚಯವಾದ ಬುದ್ಧಿಯನ್ನು ಪ್ರೇರಿಸುವವನು ಪ್ರದ್ಯುಮ್ನ , ನಿಶ್ಚಯ ಜ್ಞಾನ ವಿಕಲ್ಪವಾಗದಂತೆ ಸಿದ್ಧಿಯನ್ನು ಕರುಣಿಸುವವನು ಸಂಕರ್ಷಣ, ಧ್ಯಾನ ಉಪಾಸನಾದಿಗಳನ್ನು ಮನಸ್ಸಿನ ಮೂಲಕ ನಡೆಸುವವನು ವಾಸುದೇವ.

**ತುರೀಯ :** ಜಾಗೃತ್, ಸ್ವಪ್ನ, ಸುಷುಪ್ತಿ ಅವಸ್ಥೆಗಳನ್ನು ಪ್ರೇರಿಸದೆ ಮುಕ್ತಿಯ ಅವಸ್ಥೆಗೆ ನಿಯಾಮಕನಾದ ಪರಮಾತ್ಮನನ್ನು ತುರ್ಯನಾಮಕ ಪರಮಾತ್ಮ ಎನ್ನುತ್ತಾರೆ.

## ಕಿ. ೫೦

**(ನು. ೧) ಪೂರ್ಣಕಾಮ :** ಕ ಎಂದರೆ ಸುಖ, ಅಮ ಎಂದರೆ ಪರಿಮಾಣ ರಹಿತವಾದ ಪೂರ್ಣ ಸುಖವನ್ನು ಅನುಭವಿಸುವ ಶ್ರೀ ಹರಿಗೆ ಪೂರ್ಣ ಕಾಮನೆಂದು ಹೆಸರು. ಜೀವಿಗಳು ಅಲ್ಪ ಸುಖಿಗಳು ಅವರ ಸುಖಕ್ಕೆ ಮಿತಿ ಇದೆ. ಜನನ ಮರಣಾದಿ ದುಃಖಗಳಿವೆ. ಇವುಗಳ ಲೇಪವಿಲ್ಲದೆ ಪೂರ್ಣಸುಖವನ್ನು ಅಮಿತವಾಗಿ ಅನುಭವಿಸುವವನು ಶ್ರೀ ಹರಿ ಒಬ್ಬನೆ.

## ಕೀ. ೫೪

**(ನು. ೩) ಸಿರಿಗರಿಯದ ಗುಣನೀತ :** ಶ್ರೀ ಹರಿ ಅಗಣಿತ ಗುಣಮಹಿಮ. ಲಕ್ಷ್ಮಿದೇವಿಯು ಕೂಡ ಅವನ ಗುಣಗಳನ್ನು ಸಂಪೂರ್ಣವಾಗಿ ಅರಿಯಲಾರಳು.

**(ನು. ೬) ಕಿರಿಪುತ್ರನಿಗೆ ಭಾವಿ ಪರಮೇಷ್ಠಿ ಪದವಿತ್ತು :** ಬ್ರಹ್ಮ ಶ್ರೀ ಹರಿಯ ಹಿರಿಪುತ್ರ. ಹರಿಯ ಪ್ರಾಣದಿಂದ ಜನಿಸಿದ ವಾಯು ಕಿರಿಪುತ್ರ. ಮುಂದೆ ಬ್ರಹ್ಮ ಪದವಿಗೆ ಬರುವ ವಾಯು ಜೀವಿಗಳ ಉಸಿರಾಟಕ್ಕೆ ಅಧಿಪತಿಯೆನಿಸಿ ಪ್ರಾಣದೇವನೆನೆಸಿಕೊಂಡಿದ್ದಾನೆ.

**(ನು. ೫) ಸತಿಪ್ರಾಯ ಕೆಡಿಸದೆ............... ಸುತರ ಪಡೆದ :** ಶ್ರೀ ಹರಿಯು ತನ್ನ ದೇಹದಿಂದಲೇ ಪುತ್ರರನ್ನು ಸೃಷ್ಟಿಸಿದ. ನಾಭಿಯಿಂದ ಬ್ರಹ್ಮನನ್ನು ಮನಸಿನಿಂದ ಚಂದ್ರನನ್ನು , ಕಣ್ಣಿನಿಂದ ಸೂರ್ಯನನ್ನು , ಮುಖದಿಂದ ಇಂದ್ರನನ್ನೂ , ಅಗ್ನಿಯನ್ನೂ, ಪ್ರಾಣದಿಂದ

ವಾಯುವನ್ನು ಸೃಷ್ಟಿಸಿದ.

**(ನು. ೯) ಶುಕ್ಲಷೋಣಿತ ನೀಲ ಕಾಯ** : ಶ್ರೀಹರಿಯು ತನ್ನ ಅವತಾರಗಳಲ್ಲಿ ಯುಗಧರ್ಮಕ್ಕೆ ತಕ್ಕಂತೆ ಬಿಳಿಯ ವರ್ಣ, ರಕ್ತ ವರ್ಣ, ಮತ್ತು ನೀಲವರ್ಣದ ಶರೀರ ಧರಿಸಿ ಅವತರಿಸಿದ್ದಾನೆ.

**(ನು. ೧೪) ಮಾಯಾ ಜಯ ಶಾಂತಿ ರಮಣ** : ಶ್ರೀ ಹರಿಯ ಚತುರಾತ್ಮಕ ರೂಪಗಳಾದ ವಾಸುದೇವ, ಸಂಕರ್ಷಣ ಪ್ರದ್ಯುಮ್ನ, ಅನಿರುದ್ಧ ರೂಪಗಳಲ್ಲಿ ಲಕ್ಷ್ಮಿದೇವಿಯು ಕ್ರಮವಾಗಿ ಮಾಯಾ, ಜಯ, ಕೃತಿ, ಶಾಂತಿ ಎಂಬ ಚತುರಾತ್ಮಕ ರೂಪಗಳಲ್ಲಿ ಶ್ರೀ ಹರಿಯ ಸೇವೆ ಮಾಡುತ್ತಾಳೆ.

**(ನು. ೧೫) ವಿದುರನ ತಾತ ನಿನ್ನೊಡೆಯೆ ......** : ವಿದುರನ ಪಿತಾಮಹನಾದ ಭೀಷ್ಮ ಕೃಷ್ಣನ ಹಣೆಗೆ ಬಾಣವನ್ನು ಬಿಟ್ಟು ಚಕ್ರವನ್ನು ಹಿಡಿಯುವುದಿಲ್ಲವೆಂದು ಪ್ರತಿಜ್ಞೆಮಾಡಿದ ಶ್ರೀ ಕೃಷ್ಣ ಚಕ್ರವನ್ನು ಹಿಡಿಯುವಂತೆ ಮಾಡಿದ ಸಂದರ್ಭ. **ನು.೨೩, ೨೪**– ದಶಾವತಾರದ ವರ್ಣನೆ.

ಎಚ್ಚತ್ತು ಇರುವ ಸರ್ವದ– ಮತ್ಸ್ಯ

ಕಾಲಮುಚ್ಚಿಕೊಂಡಿಪ್ಪ – ಕೂರ್ಮ

ಅಜನ ಉಚ್ಛ್ವಾಸದುತ್ಪತ್ತಿಯಾದ – ವರಾಹ

ಬಾಯ ಮುಚ್ಚದ – ನಾರಸಿಂಹ

ಅದ್ಭುತಪಾದ– ವಾಮನ

ಹೆಚ್ಚಿನ ಕೋಪ – ಪರಶುರಾಮ

ಇಚ್ಛಿಪ ವನವಾಸ – ಶ್ರೀರಾಮ

ಗೊಲ್ಲರೊಡನಾಡಿ – ಶ್ರೀಕೃಷ್ಣ

ಪರಸ್ತ್ರೀಯರೊಲಿಸಿ – ಬುದ್ಧ

ಕುದುರೆಯೇರಿ ಚಲಿಸಿ – ಕಲ್ಕಿ

ಕೀ. ೬೦

**(ನು. ೧) ಲಿಂಗಭಂಗ .....** : ಮರಣದ ನಂತರ ಜೀವಾತ್ಮನೊಡನೆ ಇರುವ

ಸೂಕ್ಷ್ಮ ಶರೀರವನ್ನು ತ್ಯಾಗಮಾಡಿ ಜನನ ಮರಣಗಳಿಂದ ದೂರವಾಗುವ ಮೋಕ್ಷ ಸ್ಥಿತಿ.

### ಕೀ. ೮೩

**(ನು. ೨) ನಾರಿಯನೆ ಪೆತ್ತು ......** : ಗಂಗಾಜನಕನಾದ ವಾಮನಾವತಾರ

**ನಾರಿಯನೆ ಕೊಂದು** – ತಾಯಿಯನ್ನು ಕೊಂದ ಪರಶುರಾಮಾವತಾರ

**ನಾರಿಚೋರನ ವಧಿಸಿದೆ** – ರಾವಣನನ್ನು ಕೊಂದ ರಾಮಾವತಾರ

**ನಾರೆರೊಸ್ತ್ರವ ಕದ್ದು** – ಕೃಷ್ಣಾವತಾರ

**ನಾರಿಯರ ವ್ರತ ಕೆಡಿಸಿ** – ಬುದ್ಧಾವತಾರ

### ಕೀ. ೯೨

**(ನು. ೩) ಮುಕುತಿ ನಾಲ್ಕರಲಿ .....** : ಸುಜೀವರಿಗೆ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಎಂಬ ನಾಲ್ಕು ವಿಧದ ಮೋಕ್ಷಗಳನ್ನು ಶ್ರೀಹರಿಯು ನೀಡುವ ಸಂದರ್ಭದಲ್ಲಿಯೇ ಲಕ್ಷ್ಮೀದೇವಿಯು ಶ್ರೀಹರಿಯನ್ನು ಅಗಲದೆ ಅವನ ಸೇವೆ ಮಾಡುತ್ತಿದ್ದು ಮುಕ್ತ ಜೀವರಿಂದ ಸೇವೆಯನ್ನು ಸ್ವೀಕರಿಸುತ್ತಾಳೆ.

### ಕೀ. ೧೦೫

**(ನು. ೫) ಸ್ವಾಸ ಜಪವ ಮಾಡಿ ರಾಶಿ ಜೀವರ ಕಾಯ್ದೆ .....** : ಪ್ರತಿ ಜೀವಿಗಳೂ ದಿನಕ್ಕೆ ೨೧೬೦೦ ಬಾರಿ ಶ್ವಾಸೋಚ್ಛ್ವಾಸ ಮಾಡುತ್ತಾರೆ. ಇದು ಶ್ವಾಸಾತ್ಮಕವಾದ ಹಂಸ ಮಂತ್ರ. ಜೀವಿಗಳು ಉಸಿರಾಡುವುದೆಲ್ಲ ಮುಖ್ಯಪ್ರಾಣನ ಹಂಸಮಂತ್ರವೇ. ಜಾಗೃತ್, ಸ್ವಪ್ನ, ಸುಷುಪ್ತಿಗಳೆಂಬ ಮೂರು ಅವಸ್ಥೆಗಳಲ್ಲೂ ಜೀವರನ್ನು ರಕ್ಷಿಸಿ, ಪ್ರೇರಿಸಿ ಇಂದ್ರಿಯಗಳ ಮುಖ್ಯ ಅಭಿಮಾನಿಯಾಗಿ ವರ್ತಿಸುವ ಮುಖ್ಯಪ್ರಾಣ ದೇಹ ಇಂದ್ರಿಯಗಳ ಪ್ರಾಣ ನಿಯಾಮಕನಾಗಿದ್ದಾನೆ. ದೇಹಗತವಾದ ೭೨೦೦೦ ನಾಡಿಗಳಲ್ಲಿ ಚೈತನ್ಯರೂಪದಲ್ಲಿ ಇದ್ದು ಸಾತ್ವಿಕರಿಗೆ ಸುಖವನ್ನು, ರಾಜಸರಿಗೆ ಸಂಸಾರದ ಕಷ್ಟಸುಖಗಳನ್ನು, ತಾಮಸರಾದ ಅಧಮರಿಗೆ ಅಪಾರ ದುಃಖಗಳನ್ನು ನೀಡುತ್ತಾನೆ.

### ಕೀ. ೧೦೮

ಹನುಮಂತನ ತೆಪ್ಪೋತ್ಸವವನ್ನು ವೀಕ್ಷಿಸಿದಾಗ ಉಂಟಾದ ಭಾವನೆಗಳು ಇಲ್ಲಿವೆ. ನೂರು ಯೋಜನ ಶರಧಿಯನ್ನು ದಾಟಿದವನಿಗೆ ಸಣ್ಣ ಮಡುವಿನಲ್ಲಿ ತೆಪ್ಪೋತ್ಸವ ಕುರುಕುಲ ಸಮುದ್ರವೆಂಬ ಶತ್ರುಸೈನ್ಯವನ್ನು ಕ್ಷಣದಲ್ಲಿ ಒರೆಸಿ ಹಾಕಿದವನಿಗೆ ಸರೋವರದ ನೀರಿನಲ್ಲಿ

ಜಲಕ್ರೀಡೆ, ಮುಕ್ತಿಯೋಗ್ಯರನ್ನು ಕರ್ಮಸಾಗರದಿಂದ ದಾಟಿಸಿ ಹರಿಪುರದ ದಾರಿತೋರಿದವನಿಗೆ ಅಲ್ಪಜಲದಲ್ಲಿ ನೀರಿನಾಟವಾಡಿಸುವುದು – ಎಂಥ ವಿಪರ್ಯಾಸ.

ಕೀ ೧೧೯

**(ನು. ೧೨)** : ವಾಯು ದೇವರು ೧೯೮ ಕಲ್ಪಗಳಷ್ಟು ದೀರ್ಘಕಾಲ ಶ್ರೀಹರಿಯ ಸೇವೆಯನ್ನು ಮಾಡಿ ಸಮೀರ ಪದವನ್ನು ಪಡೆದರು. ಮುಂದೆ ಹನುಮ, ಭೀಮ, ಮಧ್ವಾವತಾರಗಳಲ್ಲಿ ರಾಮಕೃಷ್ಣ ವೇದವ್ಯಾಸರ ಸೇವೆ ಮಾಡಿ ಶ್ರೀಹರಿಯ ಪಾದ ಭಜನೆಯೇ ಮೋಕ್ಷಕ್ಕೆ ದಾರಿ ಎಂಬುದನ್ನು ತೋರಿಸಿಕೊಟ್ಟರು.

ಕೀ. ೧೧೩

**(ಪಲ್ಲವಿ)** : ಪ್ರಾಣ ಎಂದರೆ ವಾಯು ಎಂದರ್ಥ. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ಇವು ಪಂಚ ಪ್ರಾಣಗಳು. ಪ್ರಾಣದೇವರು ದೇಹಗತ ನಾಡಿಗಳಲ್ಲಿ ಸಂಚರಿಸುತ್ತ ಜೀವಿಗಳ ಚೈತನ್ಯಕ್ಕೆ ಕಾರಣನಾಗಿದ್ದಾನೆ. ಪ್ರ–ಎಂದರೆ ಪ್ರಕರ್ಷವಾದದ್ದು , ಣ ಕಾರೋ ಬಲಂ ಎಂಬ ಅರ್ಥದಂತೆ ಣ– ಎಂದರೆ ಶಕ್ತಿ ಎಂದರ್ಥ. ಪ್ರಕರ್ಷವಾದ ಶಕ್ತಿಯುಳ್ಳವನೇ ಪ್ರಾಣ. ಅಥವಾ ಸುತ್ರಾಣ. ಈ ಅರ್ಥದಲ್ಲಿಯೇ ಜಯ ಜಯ ಜಗತ್ರಾಣ ಜಗದೊಳಗೆ ಸುತ್ರಾಣ ಎಂದು ಶ್ರೀಪಾದರಾಜರು ವಾಯುದೇವರನ್ನು ಸ್ತುತಿಸಿದ್ದಾರೆ.

**(ನು. ೨) ಬಳಿತ್ಥಾ ಸೂಕ್ತ ಸ್ತುತ .....** : ಋಗ್ವೇದ ಸಂಹಿತ ಮಂಡಲ ೧, ಅಷ್ಟಕ – ೨, ಸೂಕ್ತ – ೧೪೧ ರಲ್ಲಿ ಬರುವ ಬಳಿತ್ಥಾ ಸೂಕ್ತದಲ್ಲಿ ೫ ಋಕ್ಕುಗಳಲ್ಲಿ ವಾಯುದೇವರ ಅವತಾರತ್ರಯ ಮಹಿಮೆಯನ್ನು ನಿರೂಪಿಸಲಾಗಿದೆ. ಮಾತರಿಶ್ವ, ದಶಪ್ರಮತಿ, ಮಧ್ವ – ಎಂಬ ಉಲ್ಲೇಖಗಳನ್ನು ಇಲ್ಲಿ ಕಾಣಬಹುದು.

ಕೀ ೧೧೮

**(ನು. ೧) ಮಂಜುಭಾಷಣ ...** : ಸೂರ್ಯಾಂತರ್ಗತ ನಾರಾಯಣನಿಂದ ವ್ಯಾಕರಣ ವಿದ್ಯೆಯನ್ನು ಕಲಿತ ಹನುಮಂತ ತುಂಬ ಸುಂದರವಾಗಿ, ಶುದ್ಧವಾಗಿ ಮಾತನಾಡ ಬಲ್ಲವನು. ವಾಲ್ಮೀಕಿ ಹೇಳುವಂತೆ ಹನುಮಂತನ ಮಾತಿನಲ್ಲಿ 'ನಕಿಂಚಿತ್ ಅಪಶಬ್ದತಂ' 'ಶ್ರೀ ಪಾದರಾಜರು ಹೇಳುವಂತೆ ' 'ಮುಖದಲ್ಲಿ ಕಿಂಚಿದಪಶಬ್ದ ಇವಗಿಲ್ಲ'. ಆದ್ದರಿಂದಲೇ ಅವನು ಮಂಜುಭಾಷಣ ಎನಿಸಿಕೊಂಡ . ಇದನ್ನೆ ವಾದಿರಾಜರೂ ಉಲ್ಲೇಖಿಸಿದ್ದಾರೆ.

ಕೀ. ೧೧೯

**(ನು. ೩) ವ್ಯಾಪಕತ್ವಗೆ...** : ಜೀವೋತ್ತಮನಾದ ವಾಯುದೇವರು ಜೀವನಾದರೂ ನಿರ್ದೋಷ. ಪಾಪಮುಕ್ತ ಮತ್ತು ಎಲ್ಲ ಜೀವರಿಗೂ ಅಂತಃಪ್ರೇರಕ. ಲಕ್ಷ್ಮಿನಾರಾಯಣರ ಅನುಗ್ರಹವನ್ನು ಪೂರ್ಣವಾಗಿ ಪಡೆದುಕೊಂಡವನು ಜಗತ್ತಿನಲ್ಲಿ ನಡೆಯುವ ವ್ಯವಹಾರವನ್ನೆಲ್ಲ ಅಶೇಷವಾಗಿ ಅರಿಯ ಬಲ್ಲ ಜ್ಞಾನಿ. ಗಾಳಿ, ನೀರು, ಬೆಂಕಿ, ಆಕಾಶ, ಅಹಂಕಾರತತ್ವ, ಮಹತ್ತತ್ವ, ಸತ್ವ, ರಜ, ತಮಸ್ಸು, – ಈ ನವಾವರಣಗಳಲ್ಲಿ ನಡೆಯುವ ವ್ಯಾಪಾರವೆಲ್ಲವೂ ಮುಖ್ಯಪ್ರಾಣನ ಅಧೀನವಾದ್ದರಿಂದ ಅವನು ವ್ಯಾಪಕ ಎನಿಸಿಕೊಳ್ಳುತ್ತಾನೆ.

## ಕೀ. ೧೧೦, ೧೧೬, ೧೨೦, ೧೨೨,

**ಯಂತ್ರೋದ್ಧಾರ ಪ್ರಾಣ ದೇವರು.** ವಿಜಯನಗರ ಅರಸರ ರಾಜಗುರುಗಳಾಗಿದ್ದ ವ್ಯಾಸರಾಜರು ಪ್ರತಿಷ್ಠಾಪಿಸಿದ ೭೩೨ ಪ್ರಾಣದೇವರ ಮೂರ್ತಿಗಳಲ್ಲಿ ಹಂಪೆಯ ಯಂತ್ರೋದ್ಧಾರ ಪ್ರಾಣದೇವರು ವಿಶಿಷ್ಟವಾದುದು. ತುಂಗಾನದಿಯ ಚಕ್ರತೀರ್ಥದ ದಡದಲ್ಲಿರುವ ಮಾತಂಗ ಬೆಟ್ಟದ ಮೇಲೆ ಯಂತ್ರೋದ್ಧಾರ ನಾಮಕ ಪ್ರಾಣದೇವರನ್ನು ವ್ಯಾಸರಾಜರು ಪ್ರತಿಷ್ಠಾಪಿಸಿದರು. ರಾಮನು ಹನುಮಂತನಿಗೆ ಮೊದಲು ದರ್ಶನ ನೀಡಿದ ಸ್ಥಳ ಇದೆಂದು ಪ್ರತೀತಿ. ಈ ಸ್ಥಳಗಳಲ್ಲಿ ಒಂದು ಬಂಡೆಯ ಮೇಲೆ ವ್ಯಾಸರಾಜರು ಅಂಗಾರದಿಂದ ಹನುಮಂತನ ಆಕಾರವನ್ನು ಬರೆದರು. ಆ ಆಕಾರವು ಮೂರ್ತಿರೂಪವನ್ನು ತಳೆದು ಹೊರಬಂದು ಹಾರಿಹೋಯಿತಂತೆ. ಅವರು ಪುನಃ ಬರೆದರು. ಅದು ಮತ್ತೆ ಮೂರ್ತಿರೂಪ ತಳೆದು ಹಾರಿಹೋಯಿತು. ಹೀಗೆಯೇ ಹನ್ನೆರಡು ಬಾರಿ ಆಯಿತಂತೆ ಕೊನೆಗೆ ಯೋಗಾಸನಾ ರೂಢನಾಗಿ ಕುಳಿತಿರುವ ಹನುಮಂತನ ಚಿತ್ರ ಬರೆದು ಯಂತ್ರದಿಂದ ದಿಗ್ಬಂಧನ ಮಾಡಿ ಹಾರಿಹೋಗಿದ್ದ ೧೨ ಕಪಿಗಳನ್ನು ಮಾಲಾಕಾರವಾಗಿ ಚಿತ್ರಿಸಿ ದ್ವಾದಶ ನಾಮಗಳನ್ನು ಇಟ್ಟರು. ಈ ಬಾರಿ ಮೂರ್ತಿ ಚಲಿಸಲಿಲ್ಲ. ಅದನ್ನೇ ಮೂರ್ತಿರೂಪದಲ್ಲಿ ಕೆತ್ತಿಸಿ ಪ್ರತಿಷ್ಠೆ ಮಾಡಿದರು. ಯಂತ್ರಗಳಲ್ಲಿ ಬರೆಯುವಂತೆ ಷಟ್ಕೋಣವನ್ನು ಅದರ ಸುತ್ತ ವಲಯಾಕಾರವನ್ನು ಅದರ ಸುತ್ತಲೂ ಪದ್ಮದಳಗಳನ್ನೂ ಅದರ ಮೇಲೆ ಒಂದಕ್ಕೊಂದು ಹೆಣೆದುಕೊಂಡಿರುವ ೧೨ ಕಪಿಗಳಿಂದ ಯಂತ್ರವನ್ನು ಬಿಗಿದಂತೆ, ಮಧ್ಯದಲ್ಲಿ ಧ್ಯಾನಮಗ್ನನಾದ ಪ್ರಾಣದೇವರನ್ನು ರೂಪಿಸಲಾಗಿದೆ. ಈ ಎಲ್ಲ ಉಲ್ಲೇಖಗಳನ್ನು ಈ ಕೀರ್ತನೆಗಳಲ್ಲಿ ಗುರುತಿಸಬಹುದು.

## ಕೀ. ೧೨೧, ೧೨೬.

**ಮೊದಲ ಘಟ್ಟೇಶ...** : ಇವೆರಡು ಮೊದಲ ಘಟ್ಟದ ಪ್ರಾಣದೇವರನ್ನು ಕುರಿತ ಕೀರ್ತನೆಗಳು. ಮೊದಲ ಘಟ್ಟ ತುಂಗಾತೀರದ ಒಂದು ಗ್ರಾಮ. ಇಲ್ಲಿಯ ಪ್ರಾಣದೇವರು ವ್ಯಾಸರಾಜರಿಂದ ಪುನಃ ಪ್ರತಿಷ್ಠಗೊಂಡ ಮೂರ್ತಿಯೆಂದು ಹೇಳುತ್ತಾರೆ. ವ್ಯಾಸರಾಜರಿಗಿಂತ ಮುಂಚೆಯೇ ಇಲ್ಲಿ ಈ ವಿಗ್ರಹ ಸ್ಥಾಪಿತವಾಗಿದ್ದು ಯಾರೋ ದುಷ್ಕರ್ಮಿಗಳು ಈ ವಿಗ್ರಹವನ್ನು

ಮೂರು ತುಂಡುಗಳಾಗಿ ಭಗ್ನಗೊಳಿಸಿದ್ದರು. ಇವು ತುಂಗಾನದಿಯ ಪಕ್ಕದ ಮಡುವಿನಲ್ಲಿ ಬಿದ್ದಿದ್ದವು. ವ್ಯಾಸರಾಜರು ತಮಗೆ ದೊರೆತ ಸ್ವಪ್ನಸೂಚನೆಯಂತೆ ಈ ಕೊಳವನ್ನು ಶೋಧಿಸಿ ವಿಗ್ರಹದ ತುಂಡುಗಳನ್ನು ಹೊರತೆಗೆದು ಮೂರು ತುಂಡುಗಳನ್ನು ಒಟ್ಟಿಗೆ ಸೇರಿಸಿ ಪುನಃ ಪ್ರತಿಷ್ಠಾಪನೆ ಮಾಡಿದರಂತೆ. ೭ ದಿನಗಳಲ್ಲಿಯೇ ಈ ಮೂರು ತುಂಡುಗಳು ಕೂಡಿಕೊಂಡವೆಂದು ಪ್ರತೀತಿ.

## ಕೀ. ೧೨೨

**(ನು. ೨) ಮಂತ್ರಿವರ್ಯ ಮಹಾಂತ** : ಸುಗ್ರೀವನ ಮಂತ್ರಿಯಾದ ಹನುಮಂತ ಮಹಾಂತ ಎನಿಸಿಕೊಂಡಿದ್ದ . 'ಮಹತಃ ಮಹಾಂತಂ'. ಆದರೆ ಅಪರಿಮಿತ ಪರಿಣಾಮದ ಆಕಾರವನ್ನು ಧರಿಸಬಲ್ಲವನು.

## ಕೀ. ೧೨೯

**(ನು. ೨) ಮಕ್ಕಳ ಕೊಯ್ಯುವನಿಕ್ಕಿದ ಅಸ್ತ್ರಕೆ** : ಉಪ ಪಾಂಡವರ ಶಿರಗಳನ್ನು ಕತ್ತರಿಸಿದವನು ಅಶ್ವತ್ಥಾಮ. ಅವನ ಬ್ರಹ್ಮಾಸ್ತ್ರಕೆ ಪಾಂಡವರ ತಲೆಗಳು ಸಿಕ್ಕಿದಂತೆ ಮಾಡಿದವನು ಶ್ರೀ ಕೃಷ್ಣ. ಅವನ ಸೇವಕನಾದವನು ಭೀಮಸೇನನು.

## ಕೀ. ೧೩೪

**(ನು. ೪) ಅಹಂಕಾರ ತತ್ವದೊಡೆಯ..** : ಅವ್ಯಕ್ತ ತತ್ವ, ಮಹತ್ ತತ್ವ, ಅಹಂಕಾರ ತತ್ವ– ಇವುಗಳಲ್ಲಿ ಅಹಂಕಾರ ತತ್ವವೇ ಶರೀರವಾಗಿ ಉಳ್ಳ ಮನೋಭಿಮಾನಿ ದೇವತೆ ರುದ್ರ. ಅಹಂಕಾರ ತತ್ವದಲ್ಲಿ ವೈಕಾರಿಕಾ ಅಹಂಕಾರ, ತೈಜಸಾಹಂಕಾರ, ತಾಮಸಾಹಂಕಾರ ಎಂಬ ಮೂರು ಬಗೆ. ಇದರಲ್ಲಿ ಮೂರನೆಯದಾದ ತಾಮಸಾಹಂಕಾರಕ್ಕೆ ಒಡೆಯನಾದವನು ರುದ್ರ.

## ಕೀ. ೧೩೨

**(ನು. ೨) ಬ್ರಹ್ಮನ ಪಟ್ಟ.** : ವಾಯು ಪದವಿಗೆ ಬರುವ ಜೀವರುಗಳ ಗುಂಪಿಗೆ ಋಜುಗಳು ಎಂದು ಹೆಸರು. ಋಜು ಎಂದರೆ ಪ್ರಾಮಾಣಿಕ, ಸರಳಸ್ವಭಾವದ ಶುದ್ಧ ಜ್ಞಾನವುಳ್ಳ ಎಂದರ್ಥ. ಇಂಥ ಋಜುಗಳು ೨೦೦ ಮಹಾಕಲ್ಪ ಸಾಧನದಿಂದ ಬ್ರಹ್ಮಪದವಿಗೆ ಬರುತ್ತಾರೆ. ೧೦೧ನೇ ಕಲ್ಪದಲ್ಲಿ ಕಲ್ಕಿ ಪದವಿಯನ್ನು , ೧೦೨ನೇ ಕಲ್ಪದಲ್ಲಿ ಸುತೇಜ ಪದವಿಯನ್ನು ೧೯೮ ನೇ ಕಲ್ಪದಲ್ಲಿ ಲಾತವ್ಯ ಎಂಬ ಪದವಿಯನ್ನು, ೧೯೯ ನೇ ಕಲ್ಪದಲ್ಲಿ ವಾಯು ಪದವಿಯನ್ನು, ೨೦೦ನೇ ಕಲ್ಪದಲ್ಲಿ ಬ್ರಹ್ಮ ಪದವಿಯನ್ನು ಪಡೆಯುತ್ತಾರೆ. ಆದ್ದರಿಂದಲೇ ವಾಯುದೇವರಿಗೆ ಭಾವಿ ಬ್ರಹ್ಮ ಎಂದು ಹೆಸರು. ಕೀ. ೧೫೨, ನು. ೧. ಇದು ಬ್ರಹ್ಮಣ್ಯತೀರ್ಥರ ಸ್ತುತಿ. ಬ್ರಹ್ಮಣ್ಯತೀರ್ಥರು (೧೪೬೭) ಪುರುಷೋತ್ತಮತೀರ್ಥರ (೧೪೪೩) ಶಿಷ್ಯರು. ವ್ಯಾಸರಾಜರ

ಗುರುಗಳು. ಕಣ್ವಾನದಿ ತೀರದ ಅಬ್ಬೂರನ್ನು ತಮ್ಮ ಧಾರ್ಮಿಕ ಚಟುವಟಿಕೆಗಳ ಕೇಂದ್ರವನ್ನಾಗಿ ಮಾಡಿಕೊಂಡು ಅಲ್ಲೇ ಬೃಂದಾವನಸ್ಥರಾದರು.

ಕೀ. ೧೫೩

**(ನು. ೨) ಚಂದ್ರಿಕೆಯನು ಹರಹಿ ಪ್ರಕಾಶಗೈದು :** ವೇದವ್ಯಾಸರ ಬ್ರಹ್ಮಸೂತ್ರಕ್ಕೆ ಮಧ್ವಾಚಾರ್ಯರು ಭಾಷ್ಯ ಬರೆದರು ಇದಕ್ಕೆ ಜಯತೀರ್ಥರು ತತ್ವ ಪ್ರಕಾಶಿಕ ಎಂಬ ಟೀಕೆಯನ್ನು ಬರೆದರು. ಈ ತತ್ವ ಪ್ರಕಾಶಿಕದ ಎರಡು ಅಧ್ಯಾಯಗಳಿಗೆ ವ್ಯಾಸರಾಜರು ಬರೆದ ಟಿಪ್ಪಣಿಯೇ ಚಂದ್ರಿಕಾ ಎಂಬ ಗ್ರಂಥ .

**(ನು. ೪) : ಕುಹುಯೋಗ,** ಅಷ್ಟ ಗ್ರಹ ಯೋಗ, ಅಥವಾ ಕಾಲ ಸರ್ಪಯೋಗ ಎಂಬುದು ಕ್ರೂರ ಗ್ರಹಗಳ ಕೂಟ. ಶನಿ, ಸೂರ್ಯ, ಅಂಗಾರಕ ಮತ್ತು ಗುರು ಗ್ರಹಗಳು ಯಾರ ಜನ್ಮ ರಾಶಿಗೆ ಬರುತ್ತದೋ ಅದು ಅವರಿಗೆ ಕುಹ ಯೋಗ. ಕೃಷ್ಣದೇವರಾಯನ ಜಾತಕದಂತೆ ವಿಕ್ರಮ ಸಂವತ್ಸರದ ಪುಷ್ಯ ಬಹುಳ ಅಮವಾಸ್ಯೆ ( ೩೦.೧.೧೫೨೧) ಕುಹಯೋಗ ಪ್ರಾಪ್ತವಾಗುವುದೆಂದು ಜೋಯಿಸರು ತಿಳಿಸಿದ್ದರು. ಅದರಿಂದ ದೊರೆಗೆ ಪ್ರಾಣಾಪಾಯ ಮತ್ತು ದೇಶತ್ಯಾಗ ಉಂಟಾಗಬಹುದೆಂದು ಊಹಿಸಿದ್ದರು. ಮಂತ್ರಿಗಳ ಸಲಹೆಯಂತೆ ಕೃಷ್ಣದೇವರಾಯ ಆ ಸಂದರ್ಭದಲ್ಲಿ ಸಿಂಹಾಸನ ತ್ಯಾಗ ಮಾಡಿ ವ್ಯಾಸರಾಯರಿಗೆ ಸಿಂಹಾಸನವನ್ನು ಒಪ್ಪಿಸಿದ. ವ್ಯಾಸರಾಜರು ಮೂರು ಮುಕ್ಕಾಲು ಘಳಿಗೆ ಸಿಂಹಾಸನದ ಮೇಲೆ ಕುಳಿತು ರಾಜ್ಯಭಾರ ಮಾಡಿದರು. ಕುಹಯೋಗದ ಸಂದರ್ಭದಲ್ಲಿ ತಮ್ಮ ಕಾವಿ ವಸ್ತ್ರವನ್ನು ಸಿಂಹಾಸನದ ಮೇಲೆ ಎಸೆದರು. ಅದು ಸುಟ್ಟು ಹೋಯಿತು. ರಾಜನಿಗೆ ಬರಬೇಕಾದ ವಿಪತ್ತನ್ನು ಕಾವಿ ವಸ್ತ್ರ ಅನುಭವಿಸಿತು.

**(ನು. ೫) ನಿಲ್ಲದಿರೆ ಹಂಪೆಯಲಿ ಪ್ರಾಣರಾಯನು :** ನೋಡಿ ೧೧೦ ರ ಟಿಪ್ಪಣಿ

ಕೀ. ೧೫೬

ಇದು ಸತ್ಯಬೋಧರ ಸ್ತುತಿ (೧೧೦-೧೭೮೪) ಸವಣೂರಿನಲ್ಲಿ ಇವರ ಬೃಂದಾವನವಿದೆ.

**(ನು. ೨) :** ಸತ್ಯಬೋಧರ ಕೀರ್ತಿಯನ್ನು ಸಹಿಸದ ಕೆಲವು ದುರ್ಜನರು ಅವರು ದೇವರಿಗಿಟ್ಟ ನೈವೇದ್ಯದಲ್ಲಿ ವಿಷ ಬೆರಸಿದರು. ಸತ್ಯಬೋಧರು ನೈವೇದ್ಯವನ್ನು ಊಟ ಮಾಡಿದರು. ತಾವು ವಿಷ ಸೇವಿಸಿರುವುದನ್ನು ತಿಳಿದು ರಾತ್ರಿಯೆಲ್ಲ ನಿದ್ದೆ ಮಾಡದೆ ದೇವರ ಪೂಜೆ ಮಾಡುತ್ತಿದ್ದು ರಾತ್ರಿ ನೈವೇದ್ಯ ಪ್ರಸಾದ ಸ್ವೀಕರಿಸಿದರು. ಯತಿಗಳು ರಾತ್ರಿ ಊಟ ಮಾಡಿದರು ಎಂದು ಕುಹಕಿಗಳು ಮಾತನಾಡಿದಾಗ ಅಂತಹವರನ್ನು ಕರೆದು ರಾತ್ರಿಯಲ್ಲಿ ಸೂರ್ಯದರ್ಶನ ಮಾಡಿಸಿದರು( ತಪನ ನಿಶಿ ತೋರ್ದೆ).

**(ನು. ೩) :** ಸತ್ಯಬೋಧರಿಗೆ ಕಾಶಿಗೆ ಹೋಗಿ ಗಂಗಾಸ್ನಾನ ಮಾಡಬೇಕೆನ್ನುವ ಅಪೇಕ್ಷೆಯಾಯಿತು. ಭಾಗೀರಥಿ ಒಬ್ಬ ಗೃಹಸ್ಥನೊಬ್ಬನ ಕನಸಿನಲ್ಲಿ ಕಾಣಿಸಿಕೊಂಡು ನೀಡಿದ ಸೂಚನೆಯಂತೆ ಸತ್ಯಬೋಧರು ಒಂದು ಔದುಂಬರ ವೃಕ್ಷದ ಬಳಿಗೆ ಗಂಗಾ ಸ್ನಾನಕ್ಕೆ ಹೋದರು. ಆ ವೃಕ್ಷದ ಬುಡದಿಂದ ಅಂತರ್ಜಲ ಹರಿದು ಬಂದು ಶ್ರೀಗಳು ಅಲ್ಲಿ ಸ್ನಾನ ಮಾಡಿದರು. ಅಲ್ಲಿ ನಿರ್ಮಿಸಿದ ಕಲ್ಯಾಣಿಯೇ ವಿಷ್ಣುತೀರ್ಥ ಎಂಬ ಹೆಸರನ್ನು ಪಡೆಯಿತು.

## ಕೀ. ೧೫೭

**(ನು. ೨) ಭೂಪತಿಯಿಂದಲಿ ಈ ಪರಿಭವನವ :** ಸವಣೂರಿನ ನವಾಬನಾದ ಹಕೀಂಖಾನನ ಬಳಿ ದಿವಾನನಾಗಿದ್ದವನು ಸತ್ಯಬೋಧರ ಶಿಷ್ಯ ಖಂಡೇರಾಯ. ಈತ ಸತ್ಯಭೋಧರಿಗೆ ವಿಶಾಲವಾದ ಮಠವನ್ನು ಕಟ್ಟಿಸಿಕೊಟ್ಟ.

## ಕೀ ೧೫೮

**ಧೀರೇಂದ್ರತೀರ್ಥರು ( ೧೭೮೫)** ಮಂತ್ರಾಲಯದ ಯತಿ ಪರಂಪರೆಯಲ್ಲಿ ಬಂದ ವಾದೀಂದ್ರತೀರ್ಥರ (೧೭೫೦) ಪೂರ್ವಾಶ್ರಮದ ಮಕ್ಕಳಾದ ಜಯರಾಮಚಾರ್ಯರು ೧೭೮೫ ರಲ್ಲಿ ಮಂತ್ರಾಲಯದ ಪೀಠಾಧಿಪತಿಗಳಾದರು. ಕೆಲಕಾಲದಲ್ಲೇ ಪೀಠಾಧಿಪತ್ಯವನ್ನು ತ್ಯಜಿಸಿ ವರದಾತೀರದ ಹೊಸರಿತ್ತಿಗೆ ಬಂದು ವಿರಕ್ತ ಜೀವನ ನಡಸಿದರು. 'ನಾರಾಯಣೋಪನಿಷತ್ತಿ'ಗೆ ವ್ಯಾಖ್ಯಾನವನ್ನು ವಾದೀಂದ್ರರ 'ಗುರುಗುಣಸ್ಥವನಕ್ಕೆ ' ವ್ಯಾಖ್ಯಾನವನ್ನು ಧೀರೇಂದ್ರರು ಬರೆದಿದ್ದಾರೆ. ಹೊಸರಿತ್ತಿಯಲ್ಲಿ ಇವರ ಬೃಂದಾವನವಿದೆ.

## ಕೀ. ೧೫೯

**ಸುಶೀಲೇಂದ್ರತೀರ್ಥರು ( ೧೯೧೨-೧೯೨೬)** ರಾಘವೇಂದ್ರ ಮಠದ ಪೀಠಾದಿಪತಿಗಳಾಗಿದ್ದ ಸುಶೀಲೇಂದ್ರರು ಸುಕೃತೇಂದ್ರತೀರ್ಥರ ಶಿಷ್ಯರು. 'ಸಮೀರ ಸಮಯ ಸಂವರ್ಧಿನಿ ಸಭಾ' ಎಂಬ ವೇದಿಕೆಯ ಮೂಲಕ ವಿದ್ವಾಂಸರಿಗೆ ಪಂಡಿತರಿಗೆ ಪ್ರೋತ್ಸಾಹ ನೀಡಿದರು. ಹೊಸರಿತ್ತಿಯಲ್ಲಿ ಇವರ ಬೃಂದಾವನವಿದೆ. ಇವರು ಬೃಂದಾವನಸ್ಥರಾದ ೧೨ ವರ್ಷಗಳ ತರುವಾಯ (೧೯೩೮) ಶ್ರೀಮತಿ ಅಂಬಾಬಾಯಿಯವರು ಈ ಕ್ಷೇತ್ರವನ್ನು ಸಂದರ್ಶಿಸಿದರು.

## ಕೀ. ೧೬೦

**ಕೇಶವ ಮಾಧವತೀರ್ಥರು .** ಕೇಶವ ಮಾಧವತೀರ್ಥರು ಮಧ್ವಾಚಾರ್ಯರ ಶಿಷ್ಯರಾದ ಮಾಧವತೀರ್ಥರ ಪರಂಪರೆಯಲ್ಲಿ ಬಂದ ಒಬ್ಬ ಯತಿಗಳು. ಭದ್ರಾವತಿಯಲ್ಲಿ ಇವರ ಬೃಂದಾವನವಿದೆ.

### ಕೀ. ೧೬೧

**ವಿದ್ಯಾಪ್ರಸನ್ನತೀರ್ಥರು ( ೧೮೯೮–೧೯೬೯)** ವ್ಯಾಸರಾಜ ಮಠದ ಸ್ವಾಮಿಗಳಾಗಿದ್ದು ೨೦ ನೇ ಶತಮಾನದ ಗಣ್ಯ ಹರಿದಾಸರೆಂದು ಮಾನ್ಯರಾದವರು.

### ಕೀ. ೧೬೨

**ಪ್ರದ್ಯುಮ್ನ ತೀರ್ಥರು (೧೮೯೦– ೧೯೭೫)** ಸಾಗರ ಕಟ್ಟೆಯ ಮಠಾಧೀಶರು. ಕನ್ನಡದಲ್ಲಿ ಅನೇಕ ಕೀರ್ತನೆಗಳನ್ನು ಬರೆದಿದ್ದಾರೆ.

### ಕೀ. ೧೬೩– ೨೧೦

ಈ ಕೀರ್ತನೆಗಳು ತಂದೆ ಮುದ್ದುಮೋಹನದಾಸರನ್ನು ಕುರಿತ ಗುರುಸ್ತುತಿಗಳು .

### ಕೀ. ೧೯೨

ಇದು ದೊಡ್ಡಬಳ್ಳಾಪುರದ ಮುದ್ದುಮೋಹನದಾಸರನ್ನು ಕುರಿತ ಸ್ತುತಿ. ಇವರು ದೊಡ್ಡ ಬಳ್ಳಾಪುರದಲ್ಲಿ ವಿಜಯ ವಿಠಲ ದೇವಾಲಯ ನಿರ್ಮಿಸಿದರು.

### ಕೀ. ೨೧೬

**ಐದೊಂದು ಅರಿಗಳು** : ಅರಿಷಡ್ವರ್ಗಗಳು.

**ಐದೆರಡು ಹೊದಿಕೆ** : ತೃಣ, ಕ್ರಿಮಿ, ಪಶು, ಪಕ್ಷಿ, ನರ, ರಾಜ ನರಗಂಧರ್ವ – ಈ ಸಪ್ತ ಜನ್ಮಗಳ ಹೊದಿಕೆ. **ಐದು ಮೂರು**– ಅಷ್ಟಮದಗಳು.

**ಐದುನಾಲ್ಕು** – ನವವಿಧ ಭಕ್ತಿಗಳು

**ಐದು, ಐದು, ಒಂದು**– ಏಕಾದಶೇಂದ್ರಿಯಗಳು.

**ಐದರಿಂದಾದ ದೇಹ**– ಪಂಚ ಭೂತಗಳಿಂದಾದ ದೇಹ

**ಐದು ಐದು ಆಧಿಪತಿಗಳು**– ದಶ ವಿಶ್ವೇ ದೇವತೆಗಳು

(ಪೂರೂರವ, ಆರ್ಧವ, ಧೂರಿ, ಲೋಚನ, ಕೃತು, ದಕ್ಷ ,ಸತ್ಯ, ವಸು, ಕಾಮ, ಕಾಲ)

**ಐದೊಂದು ವನಜಗಳ ತತ್ವ** – ಜೀವ, ಪ್ರಕೃತಿ, ದೇಶ, ಕಾಲ, ಕರ್ಮ ಮತ್ತು ವೇದ ಈ ಆರು ನತ್ಯ ತತ್ವಗಳ ಅರ್ಥ.

ಐದು ಮೂರು ದಳ ಪದ್ಮ– ಅಷ್ಟದಳ ಪದ್ಮ

ಐದೇಳು ದಳ ಪದ್ಮದ ಹಾದಿ– ದ್ವಾದಶ ನಾಮಗಳ ಅಂತರ್ಗತನಾದ ಶ್ರೀ ಹರಿಯ ದ್ವಾದಶ ರೂಪಗಳು.

ಐದುಜನರ ಕಾಯ್ದವನು– ಪಂಚ ಪಾಂಡವರನ್ನು ರಕ್ಷಿಸಿದ ಶ್ರೀ ಕೃಷ್ಣ.

ಕೀ. ೨೩೫

ಎರಡು ಮಾರ್ಗ– ಉಚಿತ, ಅನುಚಿತ

ಎರಡು ಕರ್ಮ– ಪಾಪ, ಪುಣ್ಯ

ಎರಡು ರೂಪ– ಬಾಹ್ಯ, ಅಂತರ

ಎರಡೊಂದು ಜೀವ – ಸತ್ವ, ರಜ, ತಮ,

ಎರಡು ಫಲ – ಸುಖ, ದುಃಖ,

ಎರಡು ವಿಧ ಕರ್ತ – ಅಣು ಮಹತ್ ಎರಡನ್ನೂ ಸೃಷ್ಟಿಸಿದವನು

ಎರಡು ರೂಪ – ಚೇತನ, ಅಚೇತನ

(ನು. ೩) : ಮೂರು ಅವಸ್ಥೆ – ಜಾಗೃತ್, ಸ್ವಪ್ನ, ಸುಷುಪ್ತಿ

ಮೂರು ಮಾರ್ಗ – ಜ್ಞಾನ, ಭಕ್ತಿ, ವೈರಾಗ್ಯ

ಮೂರೆಂಟು ಇಂದ್ರಿಯ – ಏಕದಶೇಂದ್ರಿಯಗಳು.

ಮೂರಾರು ವಿಧ ಭಕ್ತಿ – ನವ ವಿಧ ಭಕ್ತಿ.

ಮೂರೈದು ನುಗ್ಗಿ ಒತ್ತಿ – ಅಷ್ಟ ಮದಗಳನ್ನು ನಿಗ್ರಹಿಸಿ

ಮೂರು ಮೂರು ಅರಿ – ಅರಿಷಡ್ವರ್ಗ

ಮೂರು ಶುದ್ಧಿ – ತ್ರಿಕರಣ ಶುದ್ಧಿ

ಮೂರಾರು ಎರಡೊಂದು ಖೋಡಿ ಮತಗಳು – ೨೧ ಕುಭಾಷ್ಯಗಳು.

ಕೀ. ೨೩೮

ಏಳು **ಪದರವಿಹುದು** – ಸಪ್ತಧಾತುಗಳಿಂದ ಕೂಡಿದ ದೇಹ.

**ಕೀ. ೨೩೯**

**(ನು. ೩) ಎಂಟು ಕತೃತ್ವ** : ಸೃಷ್ಟಿ, ಸ್ಥಿತಿ, ಲಯ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ, ನಿಯಮನ,– ಇವುಗಳನ್ನು ಮಾಡುವ ಶ್ರೀ ಹರಿಯ ಸಾಮರ್ಥ್ಯ.

**ಅಷ್ಟ ತತ್ವ** – ಭೂಮಿ, ನೀರು, ಬೆಂಕಿ, ಗಾಳಿ, ಆಕಾಶ, ಮನಸ್ಸು, ಬುದ್ಧಿ, ಅಹಂಕಾರ, – ಈ ಅಷ್ಟ ಪ್ರಕೃತಿಗಳು

**ಅಷ್ಟ ಮೂರ್ತಿ** – ( ವಿಶ್ವಾದಿ ಅಷ್ಟರೂಪಗಳು)

ವಿಶ್ವ, ತೇಜಸ, ಪ್ರಾಜ್ಞ, ತುರ್ಯ, ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ.

# ಅನುಬಂಧ – ೩

## ತಂದೆ ಮುದ್ದುಮೋಹನದಾಸರು ನೀಡಿದ ಅಂಕಿತನಾಮಸೂಚಿ

### (ಅಂಬಾಬಾಯಿ ಅವರ ದಿನಚರಿಯಿಂದ)

| ಸಂಖ್ಯೆ | ಅಂಕಿತ ಹೆಸರುಗಳು | ಅಂಕಿತ ಪಡೆದವರು |
|---|---|---|
| ೦೧ | ಸರ್ವೋತ್ತಮವಿಠಲ | ಹನುಮಪ್ಪ |
| ೦೨ | ನಾಗಶಯನವಿಠಲ | ಶೇಷಮ್ಮ |
| ೦೩ | ಗಂಗಾಜನಕವಿಠಲ | ಗಂಗಮ್ಮ |
| ೦೪ | ಇಂದಿರಾಪತಿವಿಠಲ | ರಿಂದವ್ವ |
| ೦೫ | ರಂಗನಾಥವಿಠಲ | ತಂಗವ್ವ |
| ೦೬ | ಕೃಪಾಸಾಂದ್ರವಿಠಲ | ತಮ್ಮಪ್ಪ |
| ೦೭ | ದಶರಥರಾಮವಿಠಲ | ಭಾಗವ್ವ |
| ೦೮ | ರಘುರಾಮವಿಠಲ | ಶೇಷಗಿರಿರಾಯರು |
| ೦೯ | ಇಂದಿರೇಶವಿಠಲ | ಸೌ ॥ ಸೀತಮ್ಮ |
| ೧೦ | ಗೋಪಾಲಕೃಷ್ಣವಿಠಲ | ಅಂಬಾಬಾಯಿ |
| ೧೧ | ಸೀತಾಪತಿವಿಠಲ | ರುಕ್ಮೀಣಿಬಾಯಿ (ಮುದುಕಮ್ಮ) |
| ೧೨ | ದಯಾಸಾಂದ್ರವಿಠಲ | ಧನಲಕ್ಷಮ್ಮ |
| ೧೩ | ದಯಾಪೂರ್ಣವಿಠಲ | ರಂಗನಾಯಕಮ್ಮ |
| ೧೪ | ಸುರೇಶವಿಠಲ | ಸೌ॥ ಸುಂದರಮ್ಮ |
| ೧೫ | ರಮಾಕಾಂತವಿಠಲ | ಸಿ. ಕೃಷ್ಣರಾವ್ |
| ೧೬ | ಯಾದವೇಂದ್ರವಿಠಲ | ಯಂಕಮ್ಮ |
| ೧೭ | ವೇದೇಶವಿಠಲ | ರಘುನಾಥರಾವ್ |

| ಸಂಖ್ಯೆ | ಅಂಕಿತ ಹೆಸರುಗಳು | ಅಂಕಿತ ಪಡೆದವರು |
|---|---|---|
| ೧೮ | ಸದಾನಂದ ಗುಣಭರಿತವಿಠಲ | ಸೌ॥ ತುಳಸಮ್ಮ |
| ೧೯ | ದಯಾಪಯೋನಿಧಿವಿಠಲ | ಸೌ॥ ತುಳಸಮ್ಮನವರ ಅಕ್ಕ. |
| ೨೦ | ಇಂದಿರಾರಮಣವಿಠಲ | ಸೌ ॥ ಇಂದಿರಾಬಾಯಿ |
| ೨೧ | ಜಯಗೋಪಾಲವಿಠಲ | ಲಕ್ಷಮ್ಮ |
| ೨೨ | ಜಯರಾಮವಿಠಲ | ಸೇತೂಬಾಯಿ |
| ೨೩ | ಶ್ರೀಪತಿ ಮೋಹನವಿಠಲ | ಭಾರತೀಬಾಯಿ |
| ೨೪ | ವರದೇಶವಿಠಲ | ವಾಮನ ಕೃಷ್ಣದೇಶಪಾಂಡೆ |
| ೨೫ | ಪ್ರಾಣನಾಥವಿಠಲ | ಶೇಷದಾಸರು |
| ೨೬ | ಪದ್ಮನಾಭವಿಠಲ | ಸಿ. ಮಾಧವಾಚಾರ್ |
| ೨೭ | ಸರ್ವೇಶವಿಠಲ | ವೆಂಕಟರಮಣದಾಸರು |
| ೨೮ | ಆನಂದಪೂರ್ಣವಿಠಲ | ಕೊ॥ ನರಸಪ್ಪನವರು |
| ೨೯ | ಶ್ರೀನಾಥವಿಠಲ | ಗೋಪಾಲಯ್ಯ |
| ೩೦ | ಜಗದೀಶವಿಠಲ | ನಾರಾಯಣದಾಸರು |
| ೩೧ | ಶಿರಿರಾಮವಿಠಲ | ವೆಂಕೋಬಾಚಾರ್ಯರು |
| ೩೨ | ರಂಗೇಶವಿಠಲ | ಸಂಜೀವರಾಯರು |
| ೩೩ | ವರದ ಮೋಹನವಿಠಲ | ಕೆ. ಶೇಷಗಿರಿರಾವ್ |
| ೩೪ | ಶ್ರೀ ಕಾಂತವಿಠಲ | ವೈ. ವೆಂಕಟಾಚಲದಾಸ್ |
| ೩೫ | ವರ ಗುರುಗೋಪಾಲವಿಠಲ | ಕೃಷ್ಣಮೂರ್ತಿರಾಯರು |
| ೩೬ | ಪುರುಷೊತ್ತಮವಿಠಲ | ವರದೈಯ್ಯನವರು |
| ೩೭ | ನಿಗಮಗೋಚರವಿಠಲ | ದೊಡ್ಡರಾಜಾರಾಯರು |
| ೩೮ | ಹೃಷಿಕೇಶವಿಠಲ | ಶೇಷಗಿರಿರಾಯರು |
| ೩೯ | ನಿತ್ಯಾನಂದವಿಠಲ | ಎಸ್. ವಿ. ಹರಿದಾಸ್ |
| ೪೦ | ಪರಮಾನಂದವಿಠಲ | ಸೌ ॥ ಸೀತಮ್ಮ |
| ೪೧ | ಶಿರಿ ಗೋವಿಂದವಿಠಲ | ಸುಬ್ಬರಾಯರು |
| ೪೨ | ಸುರೇಂದ್ರವಿಠಲ | ಚಿಕ್ಕರಾಜೇರಾಯರು |
| ೪೩ | ಮಧ್ವ ಮುನಿವರದವಿಠಲ | ಸಿ. ರಾಘವೇಂದ್ರರಾವ್ |

| ಸಂಖ್ಯೆ | ಅಂಕಿತ ಹೆಸರುಗಳು | ಅಂಕಿತ ಪಡೆದವರು |
|---|---|---|
| ೪೪ | ಜಯಾ ರಮಣವಿಠಲ | ಸೌ॥ ಸರಸ್ವತಿ ಬಾಯಿ |
| ೪೫ | ಶಿರಿರಾಮಕೃಷ್ಣವಿಠಲ | ಸೌ॥ ರಾಧಾಬಾಯಿ |
| ೪೬ | ಕರುಣಾಕರ ವೆಂಕಟವಿಠಲ | ವೆಂಕಟಾಚಲ ಶೆಟ್ಟರು |
| ೪೭ | ಕರುಣಾಕರ ರಾಮವಿಠಲ | ಸುಬ್ಬರಾಯ ಶೆಟ್ಟರು |
| ೪೮ | ಜಯಾಪತಿವಿಠಲ | ರಂಗರಾಯರು |
| ೪೯ | ಲಕ್ಷ್ಮೀರಮಣವಿಠಲ | ಸೌ॥ ಸರೋಜಮ್ಮ |
| ೫೦ | ಸರಸಿಜಾಕ್ಷವಿಠಲ | ಶ್ರೀನಿವಾಸ ಮೂರ್ತಿಗಳು |
| ೫೧ | ದಯಾಮಯವಿಠಲ | ಸೌ॥ ರಮಾಬಾಯಿ |
| ೫೨ | ಭವತಾರಕವಿಠಲ | ಭವಾನಮ್ಮ |
| ೫೩ | ಶಿರಿರಮಣವಿಠಲ | ಹೊ॥ ನಾರಣಾಚಾರ್ |
| ೫೪ | ರಾಮಾನಂದವಿಠಲ | ರಾಮಣ್ಣನವರು |
| ೫೫ | ಕಮಲಾಕಾಂತವಿಠಲ | ಸೌ॥ ನಾಗವೇಣಿಬಾಯಿ |
| ೫೬ | ಜಯೇಶ ನರಹರಿವಿಠಲ | ಸುರಪ್ಪ ಶೆಟ್ಟರು |
| ೫೭ | ಮಧ್ವವಲ್ಲಭವಿಠಲ | ಬೋಧರಾಯಾಚಾರ್ |
| ೫೮ | ವಸುದೇವಸುತವಿಠಲ | ರಘುನಾಥಾಚಾರ್ |
| ೫೯ | ಪಾರ್ಥಸಾರಥಿವಿಠಲ | ಸೌ॥ ಸೀತಾಬಾಯಿ |
| ೬೦ | ಶುಭಗುಣಭರಿತಮೋಹನವಿಠಲ | ಶ್ಯಾ॥ ನಾರಾಯಣರಾವ್ |
| ೬೧ | ಪರಿಪೂರ್ಣವಿಠಲ | ರಾಜಾರಾವ್ |
| ೬೨ | ಮುಕ್ತಿದಾಯಕವಿಠಲ | ರಾಮಚಂದ್ರರಾವ್ |
| ೬೩ | ಪ್ರಾಣಪ್ರಿಯವಿಠಲ | ಶ್ರೀ ಪಾದರಾವ್ |
| ೬೪ | ಸತ್ಯೇಶವಿಠಲ | ವಾಮನ ರಾವ್ |
| ೬೫ | ಸುಖಪೂರ್ಣವಿಠಲ | ಸುಬ್ಬಮ್ಮನವರು |
| ೬೬ | ಲೋಕೇಶವಿಠಲ | ರಂಗನಾಥರಾಯರ ಪತ್ನಿ |
| ೬೭ | ಪರಮಪಾವನವಿಠಲ | ನರಸಿಂಹಮೂರ್ತಿ |
| ೬೮ | ರಘುನಂದನವಿಠಲ | ತಾಯಮ್ಮ |
| ೬೯ | ಕಾಮಿತಾರ್ಥವಿಠಲ | ಸೌ॥ ನರಸಮ್ಮ |

| ಸಂಖ್ಯೆ | ಅಂಕಿತ ಹೆಸರುಗಳು | ಅಂಕಿತ ಪಡೆದವರು |
|---|---|---|
| ೭೦ | ಶ್ರೀ ಲೋಲವಿಠಲ | ಊರ್ಡುಗೆರೆ ನಾರಾಯಣರಾಯರ ಪತ್ನಿ |
| ೭೧ | ರಮೇಶವಿಠಲ | ಮೈ॥ ಕೃಷ್ಣರಾಯರು |
| ೭೨ | ರಮಾಧವವಿಠಲ | ಸೌ॥ ರಾಜಮ್ಮ |
| ೭೩ | ಪುಂಡರೀಕಾಕ್ಷವಿಠಲ | ಕುಂತಳಾಬಾಯಿ |
| ೭೪ | ಕಲ್ಯಾಣ ಗುಣಪೂರ್ಣವಿಠಲ | ಸೌ॥ ರಾಜಮ್ಮ |
| ೭೫ | ಉಪೇಂದ್ರವಿಠಲ | ಲಕ್ಷ್ಮಣರಾಯರು |
| ೭೬ | ಚಂದ್ರಹಾಸ ವರದವಿಠಲ | ಆನಂದರಾವ್ |
| ೭೭ | ಮಾಯಾಪತಿವಿಠಲ | ಕಾವೇರಮ್ಮ |
| ೭೮ | ಚಕ್ರಪಾಣಿವಿಠಲ | ಕೃಷ್ಣರಾಯರು |
| ೭೯ | ದಯಾಕರವಿಠಲ | ಸಿ.ಬಿ.ಶಾಮರಾವ್ |
| ೮೦ | ಗರುಡಧ್ವಜವಿಠಲ | ಗೋಪಾಲಕೃಷ್ಣಚಾರ್ |
| ೮೧ | ಧ್ರುವವರದವಿಠಲ | ಸಿ. ರಾಮಚಂದ್ರರಾವ್ |
| ೮೨ | ಮುಕ್ತೇಶವಿಠಲ | ಹೊನ್ನಾಳಿ ಶ್ರೀನಿವಾಸರಾವ್ |
| ೮೩ | ಸುಖತೀರ್ಥ ವರದವಿಠಲ | ವೆಂಕಟರಾವ್ |
| ೮೪ | ಬದರೀನಾಥವಿಠಲ | ನಾರಾಯಣರಾಯರು |
| ೮೫ | ನೀಲಾಪತಿವಿಠಲ | ಸೌ॥ ಇಂದ್ರಾಬಾಯಿ |
| ೮೬ | ಶ್ರೀನಿಧಿವಿಠಲ | ಸೌ॥ ನಾಗರತ್ನಮ್ಮ |
| ೮೭ | ನಿರ್ಜರೇಶವಿಠಲ | ಕೃಷ್ಣರಾವ್, ವಡ್ನಹಳ್ಳಿ |
| ೮೮ | ನಿರ್ಮಲಾತ್ಮಕವಿಠಲ | ದೊ॥ ಜಯ್ಯಾಚಾರ್ |
| ೮೯ | ಜಯಪ್ರದವಿಠಲ | ವೆ॥ ಪುಟ್ಟಾಚಾರ್ |
| ೯೦ | ಜಾನಕೀಪತಿವಿಠಲ | ಸೌ॥ ನಾಗಮ್ಮ, ದೊ॥ |
| ೯೧ | ಪ್ರಹ್ಲಾದ ವರದವಿಠಲ | ಗೋ॥ಕೃಷ್ಣ ದ್ವೈಪಾಯನಾಚಾರ್ |
| ೯೨ | ಮಧುರಾನಿಲಯವಿಠಲ | ಕೃಷ್ಣಮೂರ್ತಿರಾವ್ |
| ೯೩ | ರಾಧಾಪ್ರಿಯವಿಠಲ | ಚಿ॥ಸೌ॥ ಪದ್ಮಾವತಿ |
| ೯೪ | ಭಕ್ತಪ್ರಿಯವಿಠಲ | ಸೌ॥ ಎಂಕಮ್ಮನವರು |

| ಸಂಖ್ಯೆ | ಅಂಕಿತ ಹೆಸರುಗಳು | ಅಂಕಿತ ಪಡೆದವರು |
|---|---|---|
| ೯೫ | ಮುಕ್ತಾಶ್ರಯವಿಠಲ | ಕಮಲಾಬಾಯಿ |
| ೯೬ | ಚಿನ್ಮಯವಿಠಲ | ರಾಮಚಂದ್ರ |
| ೯೭ | ಭೂವನೇಶವಿಠಲ | ನಾ॥ಮೂ॥ ಶ್ಯಾಮರಾವ್ |
| ೯೮ | ರುಕ್ಮಿಣೀಶವಿಠಲ | ಸೌ॥ ಗುಂಡಮ್ಮ ವೆ॥ |
| ೯೯ | ಉರಗಾದ್ರಿವಾಸವಿಠಲ | ನಾ॥ ಶ್ರೀನಿವಾಸರಾಯರು |
| ೧೦೦ | ವಿಶ್ವನಾಥವಿಠಲ | ವೆಂಕಟಗಿರಿರಾಯರು |
| ೧೦೧ | ದಾಶರಥಿವಿಠಲ | ಮೊ॥ ಕೃಷ್ಣರಾವ್ |
| ೧೦೨ | ಸೀತಾಕಾಂತವಿಠಲ | ಸೌ॥ ಜಯ್ಯಮ್ಮ |
| ೧೦೩ | ಲಕ್ಷ್ಮೀಕಾಂತವಿಠಲ | ಸೌ॥ಚಿ॥ ನಾಗಮ್ಮ |
| ೧೦೪ | ಮಧ್ವನಾಥವಿಠಲ | ಪೆ॥ ಭೀಮಾಚಾರ್ |
| ೧೦೫ | ಪಂಡರೀನಾಥವಿಠಲ | ಪೆ॥ ಲಕ್ಷ್ಮೀಬಾಯಿ |
| ೧೦೬ | ಕಮಲಾಕ್ಷವಿಠಲ | ಸೌ॥ ಗುಂಡಮ್ಮ, ಭಟ್ಟಳ್ಳಿ |
| ೧೦೭ | ಹಯಗ್ರೀವವಿಠಲ | ತಾ॥ ಗುರ್ರಾಯಾಚಾರ್ |
| ೧೦೮ | ಆನಂದವಿಠಲ | ಲಕ್ಷ್ಮಣರಾಯರ ಪತ್ನಿ |
| ೧೦೯ | ಅರವಿಂದಾಕ್ಷವಿಠಲ | ವೆಂಕಟಗಿರಿರಾಯರ ಪತ್ನಿ |
| ೧೧೦ | ಅಮರೇಶವಿಠಲ | ಗುರಾಜರಾವ್ |
| ೧೧೧ | ರಮಾನಾಥವಿಠಲ | ಪುಟ್ಟಾಚಾರ್ಯರ ತಂಗಿ ಸೌ॥ ಎಂಕಮ್ಮ |
| ೧೧೨ | ಸುರವರೇಶವಿಠಲ | ಶಿರಸ್ತೇದಾರ್........ |
| ೧೧೩ | ಶ್ರೀಧರವಿಠಲ | ಸಿ.ಬಿ.ಶ್ಯಾಮರಾಯರ ಪತ್ನಿ |
| ೧೧೪ | ಜನಾರ್ಧನವಿಠಲ | ಪುಟ್ಟಮ್ಮ |
| ೧೧೫ | ಶ್ರೀ ಕೃಷ್ಣವಿಠಲ | ಶಿರಸ್ತಾರ ಮಗ |
| ೧೧೬ | ಪುಂಡರೀಕ ವರದವಿಠಲ | ಪೆ॥ ಗೋಪಾಲ |
| ೧೧೭ | ಗಜರಾಜ ವರದವಿಠಲ | ಶೇಷಮ್ಮ |
| ೧೧೮ | ಗಾನಲೋಲವಿಠಲ | ಸೌ॥ ನರಸಮ್ಮ |
| ೧೧೯ | ಮುರಳೀಲೋಲವಿಠಲ | ಕೃಷ್ಣಮ್ಮ |

| ಸಂಖ್ಯೆ | ಅಂಕಿತ ಹೆಸರುಗಳು | ಅಂಕಿತ ಪಡೆದವರು |
|---|---|---|
| ೧೨೦ | ಗಂಗಾಪಿತವಿಠಲ | ಸೌ॥ ಎಂಕಮ್ಮ |
| ೧೨೧ | ಕಮಲಾನಾಥವಿಠಲ | ಸೌ॥ ಕೌಸಲ್ಯಬಾಯಿ |
| ೧೨೨ | ಮಧ್ವೇಶವಿಠಲ | ಸನ್ಮುತರಾಯರು |
| ೧೨೩ | ಕಮಲನಾಭವಿಠಲ | ಸೇತುಮಾಧವಾಚಾರ್ |
| ೧೨೪ | ಮಾಧವವಿಠಲ | ಸೌ॥ ಅಂಬಾಬಾಯಿ |
| ೧೨೫ | ರಮಾವಲ್ಲಭವಿಠಲ | ಸೌ॥ ಸರಸಾಬಾಯಿ |
| ೧೨೬ | ಶೇಷಾದ್ರೀಶವಿಠಲ | ಎಂ.ಬಿ. ಕೃಷ್ಣರಾವ್ |
| ೧೨೭ | ಸದಮಲಾನಂದವಿಠಲ | ಸೌ॥ ಎಂಕಮ್ಮ |
| | | ಚಳ್ಳಕೆರೆ ರಾಣೇದ |
| ೧೨೮ | ಮಧುರಾನಾಥವಿಠಲ | ಸೌ॥ ಚೂಡಮ್ಮ |
| ೧೨೯ | ಮಾಯಾವರವಿಠಲ | ಸೌ॥ ಕಮಲಮ್ಮ |
| ೧೩೦ | ವೈಕುಂಠವಾಸವಿಠಲ | ಸೌ॥ ರಾಜಮ್ಮ |
| ೧೩೧ | ಪದ್ಮೇಶವಿಠಲ | ಸೌ॥ ಪದ್ಮಮ್ಮ |
| ೧೩೨ | ಲಕುಮೀಶವಿಠಲ | ಸೌ॥ ಸುಬ್ಬಮ್ಮ |
| ೧೩೩ | ಸತ್ಯೇಶವಿಠಲ | ಸೌ॥ ಗೋಪ್ಯಮ್ಮ |
| ೧೩೪ | ಪದ್ಮಾವತಿಪ್ರಿಯವಿಠಲ | ಸೌ॥ ಕಾವೇರಮ್ಮ, ಮೈಸೂರು |
| ೧೩೫ | ರಮೇಶವಿಠಲ | ವೆಂಕಟರಾಯ |
| ೧೩೬ | ಇಂದಿರಾಪತಿವಿಠಲ | ಸೌ॥ ಚಂದ್ರವದನಬಾಯಿ |
| ೧೩೭ | ಶಿರಿನಾಥವಿಠಲ | ಸೌ॥ ಇಂದ್ರಾಬಾಯಿ |
| ೧೩೮ | ಕೃಷ್ಣಾನಂದವಿಠಲ | ಸೌ॥ ಶಾರದಾಬಾಯಿ |
| ೧೩೯ | ದಯಾನಿಧಿವಿಠಲ | ನಾರಾಯಣ ರಾವ್, |
| | | ಊರ್ಡಗೆರೆ |
| ೧೪೦ | ಭಾಗ್ಯದಾಯಕವಿಠಲ | ಕೃಷ್ಣಯ್ಯ |
| ೧೪೧ | ಅಮಿತ ಗುಣಭರಿತವಿಠಲ | ಕೃಷ್ಣದಾಸರು |
| ೧೪೨ | ಶ್ರೀಧರ ಮೋಹನವಿಠಲ | ಜಿ. ಎನ್. ಕೃಷ್ಣಮೂರ್ತಿ |
| ೧೪೩ | ಕರುಣಾನಿಧಿರಾಮವಿಠಲ | ಲಕ್ಷ್ಮಮ್ಮ |

| ಸಂಖ್ಯೆ | ಅಂಕಿತ ಹೆಸರುಗಳು | ಅಂಕಿತ ಪಡೆದವರು |
|---|---|---|
| ೧೪೪ | ಸುಜ್ಞಾನದಾಯಕವಿಠಲ | ಅಹಲ್ಯಾಬಾಯಿ |
| ೧೪೫ | ದೇವರಾಜವಿಠಲ | ರಘುಪತ್ಯಾಚಾರ್ಯರು |
| ೧೪೬ | ಶ್ರೀನಿವಾಸಪ್ರದಮೂರ್ತಿವಿಠಲ | ಕದಿರು ಮಂಡಲಗಿ–<br>ಪದ್ಮಾವತಿಬಾಯಿ |
| ೧೪೭ | ಪರಾವರೇಶವಿಠಲ | ಮುತ್ತಿಗೆ ವೆಂಕೋಬಾಚಾರ್ |
| ೧೪೮ | ಲಕ್ಷ್ಮೀನರಸಿಂಹವಿಠಲ | ಮುತ್ತಿಗೆ ನರಸಮ್ಮ |
| ೧೪೯ | ಗುರು ಗೋವಿಂದವಿಠಲ | ಹಾಸನದ ಗೋವಿಂದರಾಯರು |
| ೧೫೦ | ಕಲ್ಯಾಣದಾಯಕವಿಠಲ | ಮುತ್ತಿಗೆ ಸರೋಜ |
| ೧೫೧ | ನಿತ್ಯಮಂಗಳ ಸ್ವಾಮಿವಿಠಲ | ಕ್ಲೋಸ್‌ಪೇಟೆ ಅನಂತಮೂರ್ತಿ |
| ೧೫೨ | ಸನ್ಮಂಗಳಪ್ರದಾಯಕವಿಠಲ | ನಾಗರಾಜರಾವ್ |
| ೧೫೩ | ತಂದೆ ನರಹರಿವಿಠಲ | ಲಕ್ಷಮ್ಮ, ಕ್ಲೋಸ್‌ಪೇಟೆ |
| ೧೫೪ | ಪಾಂಚಾಲಿವರದವಿಠಲ * | ಸರೋಜಮ್ಮ ಹೊಸದುರ್ಗ |
| ೧೫೫ | ಗುರುವಾಸುದೇವವಿಠಲ * | ಕ್ಲೋಸ್‌ಪೇಟೆ ಶಾಮರಾಯರ<br>ಮಗಳು ಚಿ॥ ಇಂದಿರ |
| ೧೫೬ | ಗುರುಪ್ರಾಣನಾಥವಿಠಲ * | ಚಿ॥ ಪ್ರೇಮಲತ. ಕ್ಲೋಸ್ ಪೇಟೆ. |

* ಗುರುಗಳ ಕಾಲಾನಂತರ ಶಿಷ್ಯರು ಸ್ವೀಕರಿಸಿದ ಅಂಕಿತಗಳು

# ಅನುಬಂಧ–೪

## ಕೀರ್ತನೆಗಳ ಅಕಾರಾದಿ

| ಕ್ರಮ. ಸಂಖ್ಯೆ. | ಕೀರ್ತನೆಯ ಪ್ರಾರಂಭದ ಸಾಲು | ಕೀರ್ತನೆ ಸಂಖ್ಯೆ |
|---|---|---|
| ೧. | ಅಕ್ಕೋ ರಂಗ ನೋಡೆ | ೦೨ |
| ೨. | ಅಡಗಿದೇತಕೊ ರಜತ ಕವಚದೊಳಗೆ | ೨೫೦ |
| ೩. | ಅಭಯಪ್ರದಾನ ಮಾಡೊ | ೨೧೨ |
| ೪. | ಆತ್ಮಪರಮಾತ್ಮ ತತ್ವ | ೨೩೨ |
| ೫. | ಆನಂದಾದ್ರಿ ಕ್ಷೇತ್ರದಲ್ಲಿ | ೦೨ |
| ೬. | ಆನಂದರತ್ನ ಪರಮಪ್ರಿಯ | ೧೬೪ |
| ೭. | ಆನಂದ ಸಾಗರದ ಸೌಖ್ಯ | ೧೬೩ |
| ೮. | ಆಟವಾಡುವ ಕೂಸು ನಾನು | ೨೩೧ |
| ೯. | ಇತ್ತಿತ್ತ  ಬಾರೆಂದು ಕರೆಯುವ | ೨೨೫ |
| ೧೦. | ಇತ್ತೆ ಏತಕೆ ಈ ನರಜನ್ಮವ | ೦೪ |
| ೧೧. | ಇದು ಏನು ಕೌತುಕವು | ೧೦೪ |
| ೧೨. | ಇದೆ ಇದೆ ಉಡುಪಿಪುರ | ೨೫೧ |
| ೧೩. | ಇವನೆ ಪ್ರಹ್ಲಾದನಿಂದಲಿ ಉಪಾಸ್ಯ | ೦೫ |
| ೧೪. | ಇಂದು ಕಾಯಲಿ ಬೇಕೊ | ೨೫೨ |
| ೧೫. | ಇಂದೇಕೆ ಈ ಪರಿ | ೧೬೬ |
| ೧೬. | ಇಂದಿರೆ ಮುಕುಂದ ಹೃನ್ಮಂದಿರೆ | ೯೨ |
| ೧೭. | ಇಂದಿರೇಶನ ಪದದ್ವಂದ್ವ ಕಮಲ | ೧೬೫ |
| ೧೮. | ಈಗಲೂ ನೀ ಕಾಯಬೇಕೊ | ೨೧೩ |
| ೧೯. | ಉದಯ ಕಾಲದೊಳೆದ್ದು | ೧೪೧ |

## ದೀರ್ಘಕೃತಿಗಳು

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು.
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ.
ದಾಸ ಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸ ಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ**



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು